ಶ್ರೀನಿವಾಸ ವಿರಚಿತ

# ಯತೀಂದ್ರ ಮತದೀಪಿಕೆ



ಅನುವಾದ ಮತ್ತು ವಿವರಣೆ :

ವೇದಾಂತ ವಿದ್ವಾನ್

## ಡಾ|| ಎನ್. ಎಸ್. ಅನಂತರಂಗಾಚಾರ್ಯ

ಬೆಂಗಳೂರು.



ಶ್ರೀ ಶ್ರೀನಿವಾಸ

# ಸಮರ್ಪಣಂ

ಶ್ರೀಃ

ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾಚಾರ್ಯ

ಪರಮಹಂಸಪರಿವ್ರಾಜಕಾಚಾರ್ಯ

ಸರ್ವತಂತ್ರ ಸ್ವತಂತ್ರೋಭಯ ವೇದಾಂತಾಚಾರ್ಯ

ಶ್ರೀಭಗವದ್ರಾಮಾನುಜಸಿದ್ಧಾಂತನಿರ್ಧಾರಣ ಸಾರ್ವಭೌಮ

ಶ್ರೀಮನ್ನಾಥಮುನಿ ಶ್ರೀಮದ್ಯಾಮುನಮುನಿ

ಶ್ರೀಮದ್ರಾಮಾನುಜಮುನಿ ಮುನಿತ್ರಯಸಿದ್ಧಾಂತ ಸ್ಥಾಪನಾಚಾರ್ಯ

ಶ್ರೀಮದಾಂಡವನ್

ಶ್ರೀ ವೇದಾಂತ ರಾಮಾನುಜ ಮಹಾದೇಶಿಕರವರ

ದಿವ್ಯ ಸನ್ನಿಧಿಯಲ್ಲಿ

ಭಕ್ತಿಪುರಸ್ಸರವಾಗಿ ಈ ಗ್ರಂಥವು

ಸಮರ್ಪಿತವಾಗಿದೆ.

# ಅವತರಣಿಕೆ

ಅನಾದಿಯಾದ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರವರ್ತನಗೊಳಿಸಿದ ಮಹಾನುಭಾವರುಗಳು ಮೂವರು. ಶ್ರೀಮನ್ನಾಥಮುನಿಗಳು, ಶ್ರೀಮದ್ಯಾಮುನಮುನಿಗಳು ಮತ್ತು ಶ್ರೀ ಭಗವದ್ರಾಮಾನುಜಮುನಿಗಳೇ ಅವರು. ಇವರಲ್ಲಿಯೂ ರಾಮಾನುಜರು ವಿಶಿಷ್ಟವಾದ ರೀತಿಯಲ್ಲಿ ಈ ಸಿದ್ಧಾಂತವನ್ನು ವಿವರಿಸಿ ಸಂಸ್ಥಾಪಿಸಿದರು. ಭಗವದ್ರಾಮಾನುಜರು ಬ್ರಹ್ಮಸೂತ್ರಗಳಿಗೆ ವಿಶಿಷ್ಟಾದ್ವೈತ ಪರವಾದ ಭಾಷ್ಯವನ್ನು ವಿರಚಿಸಿ ಪೂರ್ವಾಚಾರ್ಯರುಗಳ ಉಪದೇಶಕ್ಕನುಸಾರವಾಗಿ ತತ್ತ್ವನಿರೂಪಣೆ ಮಾಡಿದರು. ಪರಸ್ಪರ ವಿರುದ್ಧವಾಗಿರುವಂತೆ ತೋರಿಬರುವ ಶ್ರುತಿವಾಕ್ಯಗಳಿಗೆ ಸಮಂಜಸವಾದ ಅರ್ಥನಿರೂಪಣೆ ಮಾಡಿದವರಿವರು. ಭೇದಶ್ರುತಿ ಮತ್ತು ಅಭೇದಶ್ರುತಿಗಳೆಲ್ಲಕ್ಕೂ ಮುಖ್ಯಾರ್ಥವನ್ನು ಘಟಕಶ್ರುತಿಗಳ ಮೂಲಕ ಸಾಧಿಸಿ ಶ್ರುತಿವಾಕ್ಯಗಳಲ್ಲಿ ಪರಸ್ಪರ ವಿರೋಧವಿಲ್ಲವೆಂಬುದನ್ನು ಸಮರ್ಥಿಸಿದರು. ವೇದಾರ್ಥ ಸಂಗ್ರಹವಲ್ಲಿಯೂ ಗೀತಾಭಾಷ್ಯ ಮತ್ತು ಗದ್ಯತ್ರಯಗಳಲ್ಲಿಯೂ ರಾಮಾನುಜರು ವೇದಗಳೆಲ್ಲದರ ಪರಮ ತಾತ್ಪರ್ಯವೇನೆಂಬುದನ್ನು ಪ್ರಭಾವಪೂರ್ಣವಾಗಿ ತೋರಿ ಭಕ್ತಿ ಪ್ರಪತ್ತಿಗಳ ಸ್ವರೂಪವನ್ನು ನಿರೂಪಿಸಿದ್ದಾರೆ. ಹೀಗೆ ವಿಶಿಷ್ಟಾದ್ವೈತಸಿದ್ಧಾಂತದ ಪ್ರವರ್ತನವನ್ನು ಸರ್ವತೋಮುಖವಾಗಿ ರಾಮಾನುಜರು ಸಾಧಿಸಿದ ಕಾರಣವೇ ಈ ಸಿದ್ಧಾಂತಕ್ಕೆ ರಾಮಾನುಜ ಸಿದ್ಧಾಂತವೆಂದೂ 'ಯತೀಂದ್ರ ಮತ' ಎಂದೂ ಪ್ರಸಿದ್ಧಿಯಿದೆ.

ಅವಿಸ್ಮೃತಾಃ ಸುಗಂಭೀರಾಃ ರಾಮಾನುಜಮುನೇರ್ಗಿರಃ ।
ದರ್ಶಯಂತು ಪ್ರಸಾದೇನ ಸ್ವಂ ಭಾವಮಖಿಲಂ ದೃಢಮ್ ॥

ಎಂಬ ನುಡಿ ಶ್ರೀಮದಾಚಾರ್ಯರ ಶ್ರೀ ಸೂಕ್ತಿಗಳ ವೈಭವವನ್ನು ನಿರೂಪಿಸುತ್ತದೆ. ರಾಮಾನುಜರು ನಿರೂಪಿಸಿದ ತತ್ತ್ವವನ್ನು ಮುಂದಿನವರು ವಿಶದೀಕರಿಸಿ ದೃಢಪಡಿಸಿದರು. ತತ್ತ್ವ–ಹಿತ–ಪುರುಷಾರ್ಥಗಳ ಸ್ವರೂಪವನ್ನು ತಮ್ಮದೇ ಆದ ಶೈಲಿಯಲ್ಲಿ ವಿವರಿಸಿ ಈ ಸಿದ್ಧಾಂತದ ನಿಲುವನ್ನು ಸ್ಪಷ್ಟಪಡಿಸಿದರು. ಈ

ಸಿದ್ಧಾಂತಕ್ಕನುಸಾರವಾಗಿ ಪದಾರ್ಥ ವಿಭಾಗ, ಲಕ್ಷಣ, ಪರೀಕ್ಷೆ ಮೊದಲಾದ ವನ್ನು ನೈಯಾಯಿಕರ ಕ್ರಮದಲ್ಲಿಯೂ ಇವರು ಪ್ರತಿಪಾದಿಸಿದರು. ರಾಮಾ ನುಜರ ಕೃತಿರತ್ನಗಳಲ್ಲಿ ಸೂಚ್ಯವಾಗಿದ್ದ ಅಂಶಗಳನ್ನೂ, ಅಲ್ಲಿ ಪ್ರತಿಪಾದಿಸದೆ ಇದ್ದ ಅನೇಕಾನೇಕ ಇತರ ವಿಚಾರಗಳನ್ನೂ ಇವರು ಸಂಪ್ರದಾಯಕ್ಕನುಸಾರ ವಾಗಿ ನಿಷ್ಕರ್ಷಿಸಿ ತಮ್ಮ ತಮ್ಮ ಗ್ರಂಥಗಳಲ್ಲಿ ಪ್ರತಿಪಾದಿಸಿ ಸಂಶಯಗಳನ್ನು ನಿವಾರಿಸಿದರು. ಇಂಥ ಪ್ರಕರಣ ಗ್ರಂಥಗಳನ್ನು ಅನೇಕರು ರಚಿಸಿರಬೇಕೆಂದು ನಾವು ಊಹಿಸಬಹುದು. ನಾಥಮುನಿಗಳ ನ್ಯಾಯತತ್ವದಂತಹ ಇಂಥ ಅಪೂರ್ವ ಗ್ರಂಥಗಳ ಹೆಸರುಗಳು ಮಾತ್ರ ಸೂಚಿಸಲ್ಪಟ್ಟಿವೆ. ಆದರೆ ಅವೆಲ್ಲಾ ಉಪಲಬ್ಧವಾಗಿಲ್ಲ. ಶ್ರೀ ಮೇಘನಾದಾರಿಸೂರಿಗಳ 'ನಯದ್ಯುಮಣಿ' ಮತ್ತು ಶ್ರೀಮದ್ವೇಂಕಟನಾಥರ 'ನ್ಯಾಯಸಿದ್ಧಾಂಜನ', 'ನ್ಯಾಯಪರಿಶುದ್ಧಿ', 'ತತ್ವ ಮುಕ್ತಾಕಲಾಪ' ಮತ್ತು 'ಸರ್ವಾರ್ಥಸಿದ್ಧಿ' ಇವು ಮಾತ್ರ ನಮಗೆ ದೊರಕಿವೆ. ಈ ಕೃತಿಗಳಲ್ಲಿ ಪ್ರಮಾಣ ಮತ್ತು ಪ್ರಮೇಯಗಳ ವಿವೇಚನೆ ಯನ್ನು ಆಚಾರ್ಯರುಗಳು ಕೂಲಂಕಷವಾಗಿ ಮಾಡಿದ್ದಾರೆ. ಈ ಕೃತಿಗಳು ಪ್ರೌಢವಾದ ಶೈಲಿಯಲ್ಲಿವೆ. ಸರ್ವರಿಗೂ ಸುಲಭವಾಗಿ ತಿಳಿಯುವುದಿಲ್ಲ. ಆದುದರಿಂದ ಇವುಗಳ ಮತ್ತಿತರರ ಗ್ರಂಥಗಳ ಸಾರಾರ್ಥವನ್ನು ಸಂಗ್ರಹಿಸಿ ಪ್ರಕೃತ ಗ್ರಂಥವಾದ 'ಯತೀಂದ್ರಮತ ದೀಪಿಕೆ'ಯನ್ನು ಶ್ರೀನಿವಾಸರು ರಚಿಸಿದ್ದಾರೆ.

೨

ಪ್ರಕೃತ ಗ್ರಂಥವನ್ನು ರಚಿಸಿದವರು ಶ್ರೀನಿವಾಸರು. ಇವರು ತಿರುಪತಿ ಕ್ಷೇತ್ರದವರು ವಾಧೂಲಕುಲ ತಿಲಕರು. ಸ್ವಾಮಿಪುಷ್ಕರಿಣೀ ಗೋವಿಂದಾ ಚಾರ್ಯರ ಸುಪುತ್ರರು. ವಾಧೂಲಗೋತ್ರದವರಾದ ಮಹಾಚಾರ್ಯರ ಪ್ರಿಯಶಿಷ್ಯರು. ವೇದಾಂತ ದೇಶಿಕರ ಶತದೂಷಣಿಗೆ 'ಚಂಡಮಾರುತ' ಎಂಬ ವ್ಯಾಖ್ಯಾನವನ್ನು ವಿವರಿಸಿದ ದೊಡ್ಡಯಾಚಾರ್ಯರೇ ಈ ಮಹಾಚಾರ್ಯ ರೆಂದು ತಿಳಿದುಬರುತ್ತದೆ. ಮಹಾಚಾರ್ಯರು ಉದ್ದಾಮ ಪಂಡಿತರೂ ಪ್ರತಿಭಾ ನ್ವಿತರೂ ಆದವರು. ಅಪ್ಪಯ್ಯ ದೀಕ್ಷಿತರ ಸಮಕಾಲೀನರಾಗಿದ್ದರವರು. ಈ

ಮಹಾನುಭಾವರು ಕ್ರಿ. ಶ. ೧೬ನೇ ಶತಮಾನದ ಕೊನೆಯ ಭಾಗದಲ್ಲಿ ಅಥವಾ ಹದಿನೇಳನೆಯ ಶತಮಾನದ ಆದಿಕಾಲದಲ್ಲಿದ್ದವರು. ಶ್ರೀನಿವಾಸರು ಇದೇ ಕಾಲದವರು. ಕ್ರಿ. ಶ. ೧೬ನೇ ಶತಮಾನದಲ್ಲಿದ್ದ ಧರ್ಮರಾಜಾಧ್ವರಿಗಳ ವೇದಾಂತ ಪರಿಭಾಷೆಯ ಪರಿಚಯ ಶ್ರೀನಿವಾಸರಿಗಿದ್ದಿತೆಂದು ಕಂಡುಬರುತ್ತದೆ. ಶ್ರೀನಿವಾಸರು ತಮ್ಮ ಕೃತಿಯನ್ನು ಶಾರೀರಕ ಪರಿಭಾಷೆ ಎಂದು ಕರೆದಿರುವುದೂ ಗಮನಾರ್ಹವಾಗಿದೆ. ಈ ಸಿದ್ಧಾಂತವನ್ನು ನಿರೂಪಿಸಿದ ಅನೇಕಾನೇಕ ಆಚಾರ್ಯರುಗಳ ಕೃತಿಗಳನ್ನು ಶ್ರೀನಿವಾಸರು ಗ್ರಂಥಾಂತ್ಯದಲ್ಲಿ ಉದಾಹರಿಸಿದ್ದಾರೆ. ಯತೀಂದ್ರರಾದ ಭಗವದ್ರಾಮಾನುಜರ ಮತದ ಸಾರಸರ್ವಸ್ವವನ್ನು ಬೆಳಗುವ ದೀಪಿಕೆಯಾಗಿದೆ ಈ ಪ್ರಕರಣ ಗ್ರಂಥ

೩

ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ತತ್ವ ಒಂದೇ. ಅದೇ ಪರಬ್ರಹ್ಮ. ಈ ತತ್ವಕ್ಕೆ ಚೇತನ ಮತ್ತು ಅಚೇತನಗಳೆಂಬ ಎರಡು ವಿಶೇಷಣಗಳಿವೆ. 'ಅಶೇಷ ಚಿದಚಿತ್ಪ್ರಕಾರಂಬ್ರಹ್ಮ ಏಕಮೇವ ತತ್ವಮ್', ಎಂದು ದೇಶಿಕರು ಇದನ್ನು ನಿರೂಪಿಸಿದ್ದಾರೆ. ಚೇತನಾಚೇತನಗಳಿಗೂ ಬ್ರಹ್ಮವಸ್ತುವಿಗೂ ಭೇದವಿದ್ದರೂ ಚೇತನಾ ಚೇತನಗಳಿಗೂ ಪರಸ್ಪರ ಭೇದವಿದ್ದರೂ ಆ ಚೇತನಾ ಚೇತನಗಳಿಂದೊಡಗೂಡಿದ ವಸ್ತು ಒಂದೇ ಆದಕಾರಣ ತತ್ವವು ಒಂದೇ ಎಂದು ಹೇಳಿದೆ. ಈ ಚೇತನಾ ಚೇತನಗಳು ಪರಬ್ರಹ್ಮದ ಪ್ರಕಾರಗಳಾಗಿ ಅದನ್ನು ಬಿಟ್ಟು ಇರಲಾರವು. ಇವುಗಳ ಇರುವಿಕೆ, ಸ್ಥಿತಿ ಮತ್ತು ಪ್ರವೃತ್ತಿಗಳು ಬ್ರಹ್ಮ ವಸ್ತುವಿಗಧೀನವಾಗಿವೆ. ಬ್ರಹ್ಮವಸ್ತುವನ್ನು ಬಿಟ್ಟು ಉಳಿದ ಎರಡು ತತ್ವಗಳೂ ಬೇರೆಯಾಗಿ ಇರಲಾರವು. ಬ್ರಹ್ಮವಸ್ತು ಇವಕ್ಕೆ ಆಧಾರ. ನಿಯಾಮಿಕ ಮತ್ತು ಶೇಷಿ. ಆದುದರಿಂದಲೇ ಆ ಚೇತನಾಚೇತನಗಳು ಬ್ರಹ್ಮವಸ್ತುವಿನ ಶರೀರವೆಂದು ವರ್ಣಿಸಲಾಗಿದೆ. ಶ್ರುತಿಗಳಲ್ಲಿ ಈ ಶರೀರ–ಶರೀರಿ ಸಂಬಂಧ ಪ್ರತಿಪಾದಿಸಿದೆ. ಈ ಸೂತ್ರದ ಮೂಲಕ ನಾನಾತ್ವ ಹಾಗೂ ಏಕತ್ವಗಳ ಸಮನ್ವಯವನ್ನು ಈ ಸಿದ್ಧಾಂತ ಸಾಧಿಸಿದೆ. ಚೇತನಾಚೇತನ ಪದಾರ್ಥಗಳೊಡನೆ ಕೂಡಿದ ಬ್ರಹ್ಮವಸ್ತು ಏಕಮೇವಾದ್ವಿತೀಯವಾದ ಕಾರಣ ಅದ್ವೈತವೇ ಸಿದ್ಧಿ

ಸುತ್ತದೆ. ಚೇತನಾಚೇತನಗಳಿಗೂ ಈಶ್ವರನಿಗೂ ಸ್ವರೂಪ ಸ್ವಭಾವಗಳಲ್ಲಿ ಭೇದವಿರುವ ಕಾರಣ ದ್ವೈತವೂ ಸರಿಯೇ ಆಗುತ್ತದೆ. ಅದ್ವಿತೀಯವಾದ ಬ್ರಹ್ಮವಸ್ತುವೇ ನಾನಾಭೂತವಾದ ಚಿದಚಿದ್ವಸ್ತುಗಳನ್ನು ಪ್ರಕಾರಗಳನ್ನಾಗಿ ಹೊಂದಿ ನಾನಾತ್ವವನ್ನು ಹೊಂದಿರುವ ಕಾರಣ ದ್ವೈತಾದ್ವೈತವೂ ಸಿದ್ಧಿಸುತ್ತದೆ. ಹೀಗೆ ಈ ಸಿದ್ಧಾಂತದಲ್ಲಿ ಶ್ರುತಿ ಪ್ರಾಮಾಣ್ಯಕ್ಕನುಸಾರ ತತ್ತ್ವಸ್ವರೂಪ ನಿರ್ಣಯ ಮಾಡಿದೆ. 'ಸರ್ವಶರೀರತಯಾ ಸರ್ವಪ್ರಕಾರಂ ಬ್ರಹ್ಮೈವ ಅವಸ್ಥಿತಮಿತಿ ಅಭೇದಃ ಸಮರ್ಥಿತಃ; ಏಕಮೇವ ಬ್ರಹ್ಮ ನಾನಾಭೂತಚಿದಚಿದ್ವಸ್ತು ಪ್ರಕಾರಂ ನಾನಾತ್ವೇನ ಅವಸ್ಥಿತಂ ಇತಿ ಭೇದಾಭೇದೌ; ಅಚಿದ್ವಸ್ತುನಶ್ಚ ಚಿದ್ವಸ್ತುನಶ್ಚ ಈಶ್ವರಸ್ಯ ಚ ಸ್ವರೂಪಸ್ವಭಾವವೈಲಕ್ಷಣ್ಯಾತ್ ಅಸಂಕರಾಚ್ಚ ಭೇದಃ ಸಮರ್ಥಿತಃ.' ಎಂದು ರಾಮಾನುಜರು ವೇದಾರ್ಥಸಂಗ್ರಹದಲ್ಲಿ ಈ ಅಂಶವನ್ನು ನಿರೂಪಿಸಿದ್ದಾರೆ

ರಾಮಾನುಜರು ಶರೀರಶರೀರಿಭಾವದ ಮೂಲಕ ಮತ್ತು ಪ್ರಕಾರ–ಪ್ರಕಾರಿಸಂಬಂಧದ ಮೂಲಕ ಶ್ರುತಿ ವಾಕ್ಯಗಳಿಗೆಲ್ಲಾ ಸಮಂಜಸವಾದ ರೀತಿಯಲ್ಲಿ ಅರ್ಥ ವಿವರಣೆ ಮಾಡಿದ್ದಾರೆ. ಸಾಮಾನಾಧಿಕರಣ್ಯದ ಸೂತ್ರವನ್ನು ಮುಂದಿಟ್ಟು ಸಗುಣಬ್ರಹ್ಮವನ್ನು ಸಮರ್ಥಿಸಿದ್ದಾರೆ: ಹಾಗೂ ವಿಶಿಷ್ಟವಾದ ರೀತಿಯಲ್ಲಿ 'ತತ್ತ್ವಮಸಿ' ವಾಕ್ಯದ ಅರ್ಥನಿರೂಪಣೆ ಮಾಡಿದ್ದಾರೆ. ಈ ಸಿದ್ಧಾಂತಕ್ಕನುಸಾರವಾಗಿ ರಾಮಾನುಜರು (೧) ಜಗತ್ಸತ್ಯತ್ವವನ್ನೂ, (೨) ದೇಹ, ಇಂದ್ರಿಯ, ಮನಸ್ಸು, ಪ್ರಾಣ ಮತ್ತು ಬುದ್ಧಿಗಳಿಗಿಂತ ವಿಲಕ್ಷಣವಾದ ಜೀವ ಸತ್ಯತ್ವವನ್ನೂ, (೩) ಜೀವನಿಗೆ ಪಾರಮಾರ್ಥಿಕವಾದ ಬಂಧಮೋಕ್ಷಗಳನ್ನೂ, (೪) ಅಖಿಲಹೇಯಪ್ರತ್ಯನೀಕನೂ ಕಲ್ಯಾಣೈಕತಾನನೂ ಚಿದಚಿದ್ವಿಲಕ್ಷಣನೂ ಆದ ಈಶ್ವರನ ಸತ್ಯತ್ವವನ್ನೂ, (೫) ಭಕ್ತಿ ಪ್ರಪತ್ತಿಗಳಿಂದ ಪ್ರಸನ್ನನಾದ ಈಶ್ವರನಿಂದ ಸಂಸಾರನಿವೃತ್ತಿಯನ್ನೂ, (೬) ಪರಮಪದವಾಚ್ಯವಾದ ವೈಕುಂಠದ ಸತ್ಯತ್ವವನ್ನೂ, (೭) ಭಗವತ್ಕೈಂಕರ್ಯದಲ್ಲಿ ಫಲಿಸುವ ಭಗವದನುಭವದ ಮಹದಾನಂದದ ಸತ್ಯತ್ವವನ್ನೂ ಸ್ಥಾಪಿಸಿದ್ದಾರೆ. ರಾಮಾನುಜರ ಕೃತಿರತ್ನಗಳಲ್ಲಿ ಹೀಗೆ ತತ್ತ್ವ ಹಿತ ಪುರುಷಾರ್ಥಗಳ ಸುಸ್ಪಷ್ಟವಾದ ನಿರೂಪಣೆ ಇದೆ.

೪

ಈ ದರ್ಶನಸಿದ್ಧಾನುಸಾರವಾಗಿ ನಾವು ತಿಳಿಯಬೇಕಾದ ತತ್ತ್ವ ಅಥವಾ ಪ್ರಮೇಯವು ಶ್ರೀಮನ್ನಾರಾಯಣನೇ. 'ಯಾವ ವಿಚಾರವನ್ನು ಕುರಿತ ಭ್ರಮೆಯ ಕಾರಣ ನಾವು ಸಂಸಾರದಲ್ಲಿ ತೊಳಲುತ್ತಿದ್ದೇವೆಯೋ, ಯಾವುದರ ತತ್ತ್ವಜ್ಞಾನದಿಂದ ಸಂಸಾರದಿಂದ ಮುಕ್ತರಾಗುತ್ತೇವೆಯೋ ಅದು ಪ್ರಮೇಯ. 'ಯದ್ವಿಷಯೇಣ ಭ್ರಮೇಣ ಸಂಸರಾಮಃ ಯದ್ವಿಷಯೇಣ ತತ್ತ್ವಜ್ಞಾನೇನ ಅಪವರ್ಜ್ಯೇಮಹಿ ತದಿಹ ನಃ ಪ್ರಕರ್ಷೇಣ ಮೇಯಂ ಪ್ರಮೇಯಂ' ಎಂದು ದೇಶಿಕರು ನ್ಯಾಯಪರಿಶುದ್ಧಿಯಲ್ಲಿ ಇದನ್ನು ಸ್ಪಷ್ಟಪಡಿಸಿದ್ದಾರೆ. ಉಪನಿಷತ್ತುಗಳಲ್ಲಿಯೂ 'ತಮೇವಂ ವಿದ್ವಾನಮೃತ ಇಹ ಭವತಿ' ಎಂದೇ ತಿಳಿಸಿದೆ. 'ತಾಪತ್ರಯಾತುರೈಃ ಅಮೃತತ್ವಾಯ ಸ ಏವ ಜಿಜ್ಞಾಸ್ಯಃ' ಎಂದು ರಾಮಾನುಜರು ಈ ಅಂಶವನ್ನು ತಿಳಿಸಿದ್ದಾರೆ. ಸಾಧಕರಿಗೆ ಉಪಯೋಗವಾಗುವಂತೆ ವಿಶಿಷ್ಟವಾದ ಈ ತತ್ತ್ವದ ವಿಭಾಗವನ್ನು ಅನೇಕ ರೀತಿಯಲ್ಲಿ ಮುಂದಿನವರು ಮಾಡಿದ್ದಾರೆ. 'ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ' ಎಂದು ಶ್ರುತಿಯಲ್ಲಿಯೇ ವಿಭಾಗವಿದೆ. ಭೋಕ್ತಾ ಜೀವಾತ್ಮನು. ಭೋಗ್ಯವು ಪ್ರಕೃತಿ. ಪ್ರೇರಿತಾ ಇವೆರಡನ್ನೂ ಪ್ರಕಾರಗಳನ್ನಾಗಿ ಹೊಂದಿರುವನೂ, ಇವುಗಳ ಒಳಗೆ ಇರುತ್ತಾ ನಿಯಮಿಸಿ ಪ್ರೇರಿಸುವವನೂ, ಇವುಗಳೆರಡಕ್ಕಿಂತ ಭಿನ್ನನಾಗಿ ವಿಲಕ್ಷಣನಾಗಿರುವವನೂ ಆದ ಈಶ್ವರನಾಗಿದ್ದಾನೆ. ಇದನ್ನೇ ಅರ್ಥಪಂಚಕದ ರೂಪದಲ್ಲಿ,

'ಪ್ರಾಪ್ಯಸ್ಯ ಬ್ರಹ್ಮಣೋ ರೂಪಂ ಪ್ರಾಪ್ತುಶ್ಚ ಪ್ರತ್ಯಗಾತ್ಮನಃ |
ಪ್ರಾಪ್ತ್ಯುಪಾಯಂ ಫಲಂ ಚೈವ ತಥಾ ಪ್ರಾಪ್ತಿವಿರೋಧಿ ಚ ||
ವದಂತಿ ಸಕಲಾ ವೇದಾಸ್ಸೇತಿಹಾಸಪುರಾಣಕಾಃ |

ಎಂದೂ ವಿಭಾಗ ಮಾಡಿದೆ. ಬ್ರಹ್ಮಪ್ರಾಪ್ತಿಯೇ ಜೀವನಿಗೆ ಪರಮ ಪುರುಷಾರ್ಥವಾದ ಕಾರಣ, ತಾನು ಪಡೆಯಬೇಕೆಂದು ಹಂಬಲಿಸುವ ಪರಬ್ರಹ್ಮಸ್ವರೂಪವನ್ನೂ, ಅದನ್ನು ಪಡೆಯಬಲ್ಲ ಸ್ವಸ್ವರೂಪವನ್ನೂ, ಬ್ರಹ್ಮಪ್ರಾಪ್ತಿಯಿಂದ ಲಭಿಸುವ ಫಲಸ್ವರೂಪವನ್ನೂ, ಆ ಪ್ರಾಪ್ತಿಗೆ ಇರುವ ವಿರೋಧ ಸ್ವರೂಪ

ವನ್ನೂ, ಆ ಬ್ರಹ್ಮಪ್ರಾಪ್ತಿಗಾಗಿ ಅನುಸರಿಸಬೇಕಾದ ಉಪಾಯಸ್ವರೂಪ ವನ್ನೂ ತಿಳಿಯಬೇಕೆಂದು ವಿಧಿಸಿದೆ. ಮತ್ತೆ ಕೆಲವರು ಪ್ರಧಾನ, ಪುರುಷ, ವ್ಯಕ್ತ ಮತ್ತು ಕಾಲ ಎಂದು ನಾಲ್ಕು ಬಗೆಯಾಗಿ ವಿಭಾಗಿಸಿದ್ದಾರೆ. ಚಿತ್, ಅಚಿತ್ ಈಶ್ವರ ಎಂದೂ ತತ್ವವನ್ನು ಪ್ರಾಚೀನರು ನಿರೂಪಿಸಿದ್ದಾರೆ.

ಇವುಗಳೆಲ್ಲವನ್ನೂ ಗಮನಿಸಿ ವ್ಯಾಪಕವಾದ ರೀತಿಯಲ್ಲಿ ರಾಮಾನುಜರು, 'ಸ್ವಾಧೀನ ತ್ರಿವಿಧ ಚೇತನಾಚೇತನ–ಸ್ವರೂಪ–ಸ್ಥಿತಿ–ಪ್ರವೃತ್ತಿಭೇದಂ' ಎಂಬಲ್ಲಿ ಪದಾರ್ಥನಿರೂಪಣೆ ಮಾಡಿದ್ದಾರೆ. ಬದ್ಧರು, ಮುಕ್ತರು, ನಿತ್ಯರು ಎಂಬುವರು ತ್ರಿವಿಧಚೇತನರು. ಚೇತನರೆಂದು ಹೇಳಿದುದರಿಂದಲೇ ಚೇತನರ ಧರ್ಮಿ ಸ್ವರೂಪವನ್ನು ಹೇಳಿದಂತೆ ಧರ್ಮಭೂತಜ್ಞಾನವನ್ನೂ ಸೂಚಿಸಲಾಗಿದೆ. ತ್ರಿಗುಣದ್ರವ್ಯ, ಕಾಲ, ಶುದ್ಧಸತ್ವ ಎಂಬುವು ತ್ರಿವಿಧ ಅಚೇತನಗಳು. ಇವು ಗಳೊಂದೊಂದಕ್ಕೂ ಅಸಾಧಾರಣವಾದ ಧರ್ಮದಿಂದ ನಿರೂಪಿತವಾದುದು ಇವುಗಳ ಸ್ವರೂಪ. ಇವುಗಳು ಕಾಲಾಂತರದಲ್ಲಿ ಮುಂದುವರಿಯುವುದು ಇವುಗಳ ಸ್ಥಿತಿ. ಇವುಗಳ ವ್ಯಾಪಾರ ಇವುಗಳ ಪ್ರವೃತ್ತಿ. ಈ ಪದಾರ್ಥಗಳೆಲ್ಲಾ ಈಶಿತವ್ಯಗಳಾದರೆ ಇವುಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು ನಿಯಮಿಸು ವುದು ಈಶ್ವರ ತತ್ವ. ಇದರಿಂದ ದ್ರವ್ಯಸ್ವರೂಪದ ನಿರೂಪಣೆ ಆಗಿದೆ. ಈ ದ್ರವ್ಯಕ್ಕೆ ಗುಣವಾಗಿ, ಅಥವಾ ವಿಶೇಷಣವಾಗಿರುವುದು ಅದ್ರವ್ಯ. ಇದನ್ನು ಸೇರಿಸಿ ದೇಶಿಕರು ರಾಮಾನುಜರು ಪ್ರತಿಪಾದಿಸಿದ ಕ್ರಮದಲ್ಲಿ ದ್ರವ್ಯವಿಭಾಗ ಮಾಡಿದ್ದಾರೆ.

ದ್ರವ್ಯಾದ್ರವ್ಯ ಪ್ರಭೇದಾನ್ಮಿತ ಮುಭಯವಿಧಂ ತದ್ವಿದಸ್ತತ್ವಮಾಹುಃ
ದ್ರವ್ಯಂ ದ್ವೇಧಾವಿಭಕ್ತಂ ಜಡಮಜಡಮಿತಿ
ಪ್ರಾಚ್ಯಮವ್ಯಕ್ತ ಕಾಲೌ ।
ಅಂತ್ಯಂ ಪ್ರತ್ಯಕ್ ಪರಾಕ್ ಚ ಪ್ರಥಮ ಮುಭಯಧಾ ತತ್ರ
ಜೀವೇಶಭೇದಾ
ನ್ನಿತ್ಯಾಭೂತಿರ್ಮತಿಶ್ಚೇತ್ಯಾಪರಮಿಹ ಜಡಾಮಾದಿಮಾಂ
ಕೇಚಿದಾಹುಃ ॥

ಎಂಬಲ್ಲಿ ದ್ರವ್ಯವಿಭಾಗ ಕ್ರಮವನ್ನು ಕಾಣಬಹುದು.

ತತ್ವಜ್ಞರು ತತ್ವವನ್ನು ದ್ರವ್ಯ, ಅದ್ರವ್ಯವೆಂದು ಎರಡುಬಗೆಯಾಗಿ ಹೇಳುತ್ತಾರೆ. ದ್ರವ್ಯವು ಜಡ, ಅಜಡ ಎಂದು ಎರಡುಬಗೆ. ಜಡ ದ್ರವ್ಯವು ಅವ್ಯಕ್ತ ಮತ್ತು ಕಾಲ ಎಂದು ಎರಡುಬಗೆ ಅಜಡ ದ್ರವ್ಯವು ಪ್ರತ್ಯಕ್ ಮತ್ತು ಪರಾಕ್ ಎಂದು ಎರಡುಬಗೆ. ಪ್ರತ್ಯಕ್ತತ್ವವು ಜೀವ ಮತ್ತು ಈಶ್ವರ ಎಂದು ಎರಡುಬಗೆ. ಪರಾಕ್ ತತ್ವವು ನಿತ್ಯವಿಭೂತಿ ಮತ್ತು ಧರ್ಮಭೂತಜ್ಞಾನ ಎಂದು ಎರಡುಬಗೆ. ದ್ರವ್ಯವನ್ನಾಶ್ರಯಿಸಿರುವ ಗುಣಗಳು ಅದ್ರವ್ಯ. ಈ ವಿಭಾಗ ರಾಮಾನುಜರ ವಿಭಾಗವನ್ನನುಸರಿಸಿದೆ ಇತರ ದಾರ್ಶನಿಕರು ನಿರೂಪಿಸುವ ಪದಾರ್ಥಗಳು ಇವುಗಳಲ್ಲಿಯೇ ಅಂತರ್ಭವಿಸುತ್ತವೆ. ಈ ಸಿದ್ಧಾಂತದಲ್ಲಿ ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವಗಳು ಅತಿರಿಕ್ತ ಪದಾರ್ಥಗಳಲ್ಲ. ಕರ್ಮ ಗುಣದೊಳಗೆ ಅಂತರ್ಭಾವ ಹೊಂದುತ್ತದೆ. ದ್ರವ್ಯ, ಗುಣ ಎಂಬ ಎರಡು ಪದಾರ್ಥಗಳನ್ನು ಇಲ್ಲಿ ದ್ರವ್ಯ–ಅದ್ರವ್ಯ ಎಂದು ನಿರೂಪಿಸಿದ್ದಾರೆ.

ಜೀವ, ಈಶ್ವರ, ಪ್ರಕೃತಿ, ಕಾಲ, ನಿತ್ಯವಿಭೂತಿ ಮತ್ತು ಧರ್ಮಭೂತಜ್ಞಾನಗಳು ದ್ರವ್ಯಗಳು. ಸತ್ವ, ರಜಸ್ಸು, ತಮಸ್ಸು, ಶಬ್ದ ಸ್ಪರ್ಶ ರೂಪ ರಸ ಗಂಧಗಳು, ಶಕ್ತಿ ಮತ್ತು ಸಂಯೋಗ–ಇವು ಅದ್ರವ್ಯಗಳು. ಪ್ರಕೃತಿ ತ್ರಿಗುಣಾತ್ಮಕವಾದುದು. ನಿತ್ಯವಿಭೂತಿಯು ಶುದ್ಧಸತ್ತ್ವವಾದುದು. ಇದೇ ವೈಕಂಠ ಅಥವಾ ಪರಮಪದ. ಭಗವಂತನ ನಿತ್ಯವಾಸಸ್ಥಾನ ಇದು. ನಿತ್ಯರೂ ಮುಕ್ತರೂ ದಿವ್ಯಸೂರಿಗಳೂ ಇಲ್ಲಿ ಎಂದೆಂದೂ ಭಗವದನುಭವಮಗ್ನರಾಗಿರುತ್ತಾರೆ. ಇದು ಅಚೇತನ; ಆದರೆ ಸ್ವಯಂಪ್ರಕಾಶವಾದುದು.

ಧರ್ಮಭೂತಜ್ಞಾನದ ನಿರೂಪಣೆ ಈ ಸಿದ್ಧಾಂತದಲ್ಲಿ ಗಮನಾರ್ಹವಾಗಿದೆ. ಆತ್ಮನು ಜ್ಞಾನಸ್ವರೂಪಿಯಾದಂತೆ ಜ್ಞಾನವಿಶಿಷ್ಟನೂ ಆಗಿದ್ದಾನೆಂದೂ ಶ್ರುತಿ ಸಾರುತ್ತದೆ. ಆತ್ಮನು ತನಗೆ ತಾನೇ ಪ್ರಕಾಶಿಸುತ್ತಾನೆ; ಸ್ವಯಂ ಪ್ರಕಾಶನಾಗಿದ್ದಾನೆ. ತನ್ನನ್ನು ತಾನು ತಿಳಿಯಲು ಅವನಿಗೆ ಮತ್ತೊಂದು ಜ್ಞಾನದ ಆವಶ್ಯಕತೆ ಇಲ್ಲ. ಇದು ಸಂಕೋಚವಿಕಾಸಗಳಿಲ್ಲದೆ ಸದಾ ಏಕರೂಪಿಯಾಗಿರುವುದು. ಈ ಆತ್ಮನು ಜ್ಞಾನಕ್ಕೆ ಆಶ್ರಯನೂ ಆಗಿದ್ದಾನೆ. ಈ ಜ್ಞಾನವು ಸ್ವರೂಪಜ್ಞಾನಕ್ಕಿಂತ ಬೇರೆಯಾದುದೆಂದು ತಿಳಿಯಬಹುದು. ಆದರೆ ಆತ್ಮನಿಂದ ಇದನ್ನು ಬೇರ್ಪಡಿಸಲಾಗುವುದಿಲ್ಲ. ಗುಣವಾದ ಇದಕ್ಕೇ ಧರ್ಮಭೂತ

ಜ್ಞಾನವೆಂದು ಹೆಸರು ಇದೂ ಸ್ವಯಂ ಪ್ರಕಾಶವಾಗಿರುವುದಲ್ಲದೆ ಅರ್ಥ ಪ್ರಕಾಶಕತ್ವವನ್ನು ಹೊಂದಿದೆ. ತನ್ನನ್ನಿದು ತಿಳಿಯಲಾರದು. ತನ್ನನ್ನೂ ಇತರ ಪದಾರ್ಥಗಳನ್ನೂ ಆಶ್ರಯವಾದ ಆತ್ಮನಿಗೆ ತೋರಿಸಿಕೊಡುವುದಿದು. ಈ ಧರ್ಮಭೂತ ಜ್ಞಾನಕ್ಕೆ ಸಂಕೋಚವಿಕಾಸಗಳುಂಟು. 'ಜ್ಞಾನ ಉಂಟಾಯಿತು ; ಜ್ಞಾನ ನಷ್ಟವಾಯಿತು'. ಎಂಬ ವ್ಯವಹಾರ ಇದಕ್ಕೇ ಅನ್ವಯಿಸುವುದು. ಹೀಗೆ ಸಂಕೋಚವಿಕಾಸಗಳನ್ನು ಇದು ಹೊಂದುವುದರಿಂದ ಇದು ದ್ರವ್ಯವೂ ಹೌದು. ಸಂಸಾರಾವಸ್ಥೆಯಲ್ಲಿ ಸಂಕೋಚ ಹೊಂದುತ್ತದೆ ಅನಾದಿಯಾದ ಕರ್ಮದಕಾರಣ. ಮುಕ್ತಿದಶೆಯಲ್ಲಿ ಇದು ತನ್ನ ಸಹಜಾವಸ್ಥೆಯನ್ನು ಹೊಂದಿ ವಿಭುವಾಗಿರುತ್ತದೆ. ಇದೂ ನಿತ್ಯವಾದುದೇ ಆಗಿದೆ. ಸುಖ, ದುಃಖ, ಆಶೆ, ದ್ವೇಷ ಮೊದಲಾದವೆಲ್ಲಾ ಇದರ ಪ್ರಕಾರಗಳು. ಈ ಸಿದ್ಧಾಂತ ಹೀಗೆ ಧರ್ಮಿಜ್ಞಾನ ಮತ್ತು ಧರ್ಮಭೂತ ಜ್ಞಾನಗಳೆರಡನ್ನೂ ಶ್ರುತಿಗಳಿಗನುಸಾರ ಅಂಗೀಕರಿಸಿರುವುದರಿಂದ ಸಕಲ ವ್ಯವಹಾರಗಳನ್ನೂ ಸಮಂಜಸವಾಗಿ ವಿವರಿಸಬಹುದಾಗಿದೆ.

ಇದಿಷ್ಟೂ ಪ್ರಮೇಯ ನಿರೂಪಣೆ. ಇದು ಪ್ರಮಾಣಗಳಿಗನುಸಾರ ಸಿದ್ಧಿಸಬೇಕು. ಆ ಕಾರಣ ಪ್ರಮಾಣಗಳಿಗೆ ಪ್ರಾಧಾನ್ಯವಿದೆ. ಈ ಸಿದ್ಧಾಂತ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣಗಳನ್ನು ಅಂಗೀಕರಿಸುತ್ತದೆ. ಈ ಪ್ರಮಾಣಗಳ ನಿರೂಪಣೆಯಲ್ಲಿಯೂ ಈ ಸಿದ್ಧಾಂತಕ್ಕೇ ಅನ್ವಯಿಸುವ ಅಸಾಧಾರಣವಾದ ಅಂಶಗಳಿವೆ. ಪ್ರತ್ಯಕ್ಷವು ಯಥಾರ್ಥವಾದ ಪದಾರ್ಥಗಳಿಗೆ ಅನ್ವಯಿಸುವುದೆಂಬುದು ಈ ಸಿದ್ಧಾಂತದ ನೆಲೆ. ನಿರ್ವಿಕಲ್ಪ ಪ್ರತ್ಯಕ್ಷವನ್ನಿದು ಒಪ್ಪುವುದಿಲ್ಲ. ಯೋಗಿ ಪ್ರತ್ಯಕ್ಷಕ್ಕಿಂತ ಬೇರೆಯಾದ ಮಾನಸ ಪ್ರತ್ಯಕ್ಷವನ್ನಾಗಲೀ, ಶಬ್ದಜನ್ಯ ಪ್ರತ್ಯಕ್ಷವನ್ನಾಗಲೀ ಈ ಸಿದ್ಧಾಂತ ಮಾನ್ಯ ಮಾಡುವುದಿಲ್ಲ. ಅನುಮಾನವನ್ನು ಸ್ವಾರ್ಥ ಮತ್ತು ಪರಾರ್ಥ ಎಂದು ವಿಭಾಗಿಸುವುದನ್ನೂ ಕೇವಲ ವ್ಯತಿರೇಕಿ ಅನುಮಾನುವನ್ನೂ, ಈ ಸಿದ್ಧಾಂತ ಒಪ್ಪುವುದಿಲ್ಲ. ವ್ಯಾಪ್ತಿಗ್ರಹಣಕ್ಕೆ ಭೂಯೋದರ್ಶನ ಆವಶ್ಯಕವೆಂದು ಈ ಸಿದ್ಧಾಂತ ಹೇಳುತ್ತದೆ. ಬ್ರಹ್ಮವಸ್ತು ಶಬ್ದೈಕಸಮಾಧಿಗಮ್ಯವೆಂದು ಈ ದರ್ಶನದ ಸಿದ್ಧಾಂತ. ಬ್ರಹ್ಮವಸ್ತುವನ್ನೇ ಎಲ್ಲಾ ಶಬ್ದಗಳೂ ಅಪರ್ಯವಸಾನ ವೃತ್ತಿ

ಯಿಂದ ಬೋಧಿಸುವುವೆಂದೂ, ನಿರ್ವಿಶೇಷ ವಸ್ತುವನ್ನು ಶಬ್ದ ಬೋಧಿಸಲಾರ ದೆಂದೂ, ಸಿದ್ಧವಸ್ತುವನ್ನೂ ಶಬ್ದ ಬೋಧಿಸುವುದೆಂದೂ ಈ ಸಿದ್ಧಾಂತ ಸ್ಥಾಪಿ ಸುತ್ತದೆ.

ತತ್ತ್ವವಿಚಾರವನ್ನು ಶೋಧಿಸಿರುವಂತೆ ಮೋಕ್ಷೋಪಾಯವನ್ನೂ ಈ ಸಿದ್ಧಾಂತ ಪರಿಶೋಧಿಸಿದೆ. ಭಕ್ತಿ ಮತ್ತು ಪ್ರಪತ್ತಿಗಳು ಮೋಕ್ಷೋಪಾಯ ಗಳೆಂದು ಹೇಳಿ ಇವುಗಳ ಸ್ವರೂಪವನ್ನು ಈ ದರ್ಶನ ನಿರೂಪಿಸಿದೆ. ಭಕ್ತಿ ಯೋಗವನ್ನನುಷ್ಠಿಸಲು ಅಶಕ್ತರಾದವರು ಪ್ರಪತ್ತಿಯನ್ನನುಷ್ಠಿಸಿ ಅದೇ ಪರಮ ಫಲವನ್ನು ಪಡೆಯಬಹುದೆಂದು ಇದು ಬೋಧಿಸುತ್ತದೆ.

೫

ಪ್ರಕೃತ ಗ್ರಂಥವಾದ 'ಯತೀಂದ್ರ ಮತ ದೀಪಿಕೆ'ಯು ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಮೇಯಗಳನ್ನೂ ಪ್ರಮಾಣಗಳನ್ನೂ ಸಮಗ್ರವಾಗಿ ಮತ್ತು ಸಂಗ್ರಹವಾಗಿ ಪ್ರತಿಪಾದಿಸುತ್ತದೆ. ಒಂದೊಂದು ಪ್ರಮಾಣದ ವಿಶಿಷ್ಟ ಸ್ವರೂಪ ವನ್ನೂ ನಿರೂಪಿಸಿ ಇದು ಪ್ರಕೃತಿ, ನಿತ್ಯವಿಭೂತಿ, ಧರ್ಮಭೂತಜ್ಞಾನ, ಜೀವ, ಈಶ್ವರ ಮತ್ತು ಅದ್ರವ್ಯಗಳ ಸ್ವರೂಪವನ್ನು ಕ್ರಮವಾಗಿ ವಿವೇಚಿಸುತ್ತದೆ. ಈ ದರ್ಶನದ ಪ್ರಧಾನ ಪ್ರತಿಪಾದ್ಯಾಂಶಗಳನ್ನು ಒಂದೇ ಕಡೆ ನಿಖರವಾಗಿ ನಿರೂಪಿ ಸುವ ಈ ಕೃತಿಗೆ ಬಹಳ ಮಹತ್ವವಿದೆ. ಒಂದೊಂದು ಪದಾರ್ಥದ ಸ್ವರೂಪ ವನ್ನೂ ಸಿದ್ಧಾಂತಕ್ಕನುಸಾರವಾಗಿ ಪ್ರತಿಪಾದಿಸಿರುವ ಈ ಕೃತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸಮಗ್ರವಾಗಿ ಪರಿಚಯಿಸುತ್ತದೆ. ಸರಳವಾದ ಶೈಲಿಯಲ್ಲಿ ಎಲ್ಲರಿಗೂ ಅರ್ಥವಾಗುವಂತೆ ತತ್ತ್ವ ನಿರೂಪಣೆ ಮಾಡಿರುವ ಈ ಕೃತಿ ಅತ್ಯುಪ ಯುಕ್ತವಾದ ಪ್ರಕರಣ ಗ್ರಂಥವಾಗಿದೆ.

ಯತೀಂದ್ರಮತದೀಪಿಕೆ ಎಂಬ ಹೆಸರು ಇದಕ್ಕೆ ಅನ್ವರ್ಥವಾಗಿದೆ.

೬

ಮಹತ್ತ್ವಪೂರ್ಣವಾದ ಈ ಕೃತಿಯ ಪರಿಚಯ ಕನ್ನಡದವರಿಗೆಲ್ಲಾ ಆಗಲೆಂಬ ಉದ್ದೇಶದಿಂದ ಮೂಲಕೃತಿಯನ್ನು ಕನ್ನಡ ಅನುವಾದದೊಡನೆ ಇಲ್ಲಿ

ಅಳವಡಿಸಲಾಗಿದೆ. ಅವಶ್ಯಕವೆಂದು ತೋರಿದ ಕಡೆ ಸಂಗ್ರಹವಾದ ಟಿಪ್ಪಣಿ ಗಳನ್ನೂ ಒದಗಿಸಲಾಗಿದೆ. ಇದನ್ನು ಬರೆಯುವಲ್ಲಿ ಸ್ವಾಮಿ ಆದಿದೇವಾನಂದರ ಆಂಗ್ಲಾನುವಾದದ ಪ್ರಯೋಜನ ಪಡೆದಿದ್ದೇನೆ. ವಿಶಿಷ್ಟಾದ್ವೈತ ದರ್ಶನಕ್ಕೆ ಉತ್ತಮ ಪ್ರವೇಶವಾಗಿರುವ ಈ ಕೃತಿಯ ಅಧ್ಯಯನದಿಂದ ಈ ದರ್ಶನದ ಪರಿಚಯ ಆಗುವುದೆಂದು ನಿರೀಕ್ಷಿಸಲಾಗಿದೆ.

ಈ ಕೃತಿಯನ್ನು ಈಗ ಬೆಂಗಳೂರಿನಲ್ಲಿ ಬಿಜಯ ಮಾಡಿಸಿರುವ ಪರಮ ಹಂಸ ಪರಿವ್ರಾಜಕಾಚಾರ್ಯ ಶ್ರೀಮದಾಂಡವನ್ ಶ್ರೀ ವೇದಾಂತ ರಾಮಾನುಜ ಮಹಾದೇಶಿಕರವರ ಪದಕಮಲಗಳಲ್ಲಿ ಭಕ್ತಿಪೂರ್ವಕವಾಗಿ ಸಮರ್ಪಿಸಲು ಅಪ್ಪಣೆ ಇತ್ತುದಕ್ಕೆ ನಾನು ಶ್ರೀ ಸ್ವಾಮಿಗಳವರಿಗೆ ಅತ್ಯಂತ ಕೃತಜ್ಞನಾಗಿ ದ್ದೇನೆ. ಈ ಗ್ರಂಥವನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟು ಉಪಕರಿಸಿದ ನವಭಾರತ್ ಮುದ್ರಣಾಲಯದ ಶ್ರೀ ಸುದರ್ಶನಂರವರಿಗೆ ನನ್ನ ವಂದನೆಗಳು ಸಲ್ಲುತ್ತವೆ.

ಸರ್ವಾಂತರನಾದ ಶ್ರೀನಿವಾಸನು ಈ ಅಲ್ಪಸೇವೆಯಿಂದ ಸುಪ್ರೀತನಾಗ ಲೆಂದು ಬೇಡುತ್ತಿದ್ದೇನೆ.

ಬೆಂಗಳೂರು,
೨೬–೭–೧೯೭೧

ಇಂತು ಸಜ್ಜನ ವಿಧೇಯ,
ಎನ್. ಎಸ್. ಅನಂತರಂಗಾಚಾರ್ಯ.



ಶ್ರೀ ಭಗವದ್ರಾಮಾನುಜರು

ಶ್ರೀಃ

# ಯತೀಂದ್ರ ಮತ ದೀಪಿಕಾ

## ಪ್ರಥಮೋಽವತಾರಃ

## ಉಪೋದ್ಘಾತ

ಶ್ರೀ ವೇಂಕಟೇಶಂ ಕರಿಶೈಲನಾಥಂ ಶ್ರೀ ದೇವರಾಜಂ ಘಟಿಕಾದ್ರಿಸಿಂಹಂ ।
ಕೃಷ್ಣೇನ ಸಾಕಂ ಯತಿರಾಜಮೀಡೇ ಸ್ವಪ್ನೇ ಚ ದೃಷ್ಟಾನ್ ಮಮ
ದೇಶಿಕೇಂದ್ರಾನ್ ॥ ೧ ॥

ಯತೀಶ್ವರಂ ಪ್ರಣಮ್ಯಾಹಂ ವೇದಾಂತಾರ್ಯಂ ಮಹಾಗುರುಂ ।
ಕರೋಮಿ ಬಾಲಬೋಧಾರ್ಥಂ ಯತೀಂದ್ರಮತದೀಪಿಕಾಂ ॥ ೨ ॥

೧. ಶ್ರೀಮನ್ನಾರಾಯಣ ಏವ ಚಿದಚಿದ್ವಿಶಿಷ್ಟಾದ್ವೈತತತ್ತ್ವಂ, ಭಕ್ತಿ-ಪ್ರಪತ್ತಿಭ್ಯಾಂ ಪ್ರಸನ್ನಃ ಸ ಏವ ಉಪಾಯಃ, ಅಪ್ರಾಕೃತದೇಶ ವಿಶಿಷ್ಟಃ

---

### ಒಂದನೆಯ ಅವತಾರ

## ಉಪೋದ್ಘಾತ

ಶ್ರೀ ವೇಂಕಟೇಶ, ಕರಿಶೈಲನಾಥನಾದ ಶ್ರೀ ದೇವರಾಜ, ಘಟಿಕಾದ್ರಿಯ ಶ್ರೀ ನರಸಿಂಹ, ಕೃಷ್ಣನಿಂದೊಡಗೂಡಿದ ಯತಿರಾಜ ಮತ್ತು ನನಗೆ ಸ್ವಪ್ನದಲ್ಲಿ ಮೈದೋರಿದ ಆಚಾರ್ಯವರ್ಯರು-ಇವರನ್ನೆಲ್ಲಾ ನಾನು ಸ್ತುತಿಸುತ್ತೇನೆ.

ಯತೀಶ್ವರರಿಗೂ ವೇದಾಂತಾರ್ಯರಿಗೂ ಮಹಾಗುರುಗಳಿಗೂ[1] ನಮಸ್ಕಾರಮಾಡಿ ಈ ಸಿದ್ಧಾಂತದ ಅಧ್ಯಯನವನ್ನಾರಂಭಿಸುವವರ ಅನುಕೂಲಕ್ಕಾಗಿ ಯತೀಂದ್ರ ಮತದೀಪಿಕೆಯನ್ನು ರಚಿಸುತ್ತೇನೆ.

೧. 'ಚೇತನ ಮತ್ತು ಅಚೇತನ ಇವುಗಳೊಡನೆ ಕೂಡಿದ ಶ್ರೀಮನ್ನಾರಾಯಣ[2]ನೊಬ್ಬನೇ ತತ್ತ್ವ. ಭಕ್ತಿ ಮತ್ತು ಪ್ರಪತ್ತಿಗಳಿಂದ ಪ್ರಸನ್ನನಾದ ಅವನೇ

ಸ ಏವ ಪ್ರಾಪ್ಯ ಇತಿ ವೇದಾಂತವಾಕ್ಯೈಃ ಪ್ರತಿಪಾದಯತಾಂ ವ್ಯಾಸ ಬೋಧಾಯನ ಗುಹದೇವ ಭಾರುಚಿ ಬ್ರಹ್ಮನಂದಿ ದ್ರಮಿಡಾಚಾರ್ಯ ಶ್ರೀ ಪರಾಂಕುಶ ನಾಥ ಯಾಮುನ ಯತೀಶ್ವರ ಪ್ರಭೃತೀನಾಂ ಮತಾನುಸಾರೇಣ ಬಾಲಬೋಧಾರ್ಥಂ ವೇದಾಂತಾನುಸಾರಿಣೀ ಯತಿಪತಿಮತದೀಪಿಕಾಖ್ಯಾ ಶಾರೀರಕಪರಿಭಾಷಾ ಮಹಾಚಾರ್ಯಕೃಪಾವಲಂಬಿನಾ ಮಯಾ ಯಥಾಮತಿ ಸಂಗ್ರಹೇಣ ಪ್ರಕಾಶ್ಯತೇ.

೨. ಸರ್ವಂ ಪದಾರ್ಥಜಾತಂ ಪ್ರಮಾಣ ಪ್ರಮೇಯ ಭೇದೇನ ದ್ವಿಧಾ ಭಿನ್ನಮ್ | ಪ್ರಮಾಣಾನಿ ತ್ರೀಣ್ಯೇವ | ಪ್ರಮೇಯಂ ದ್ವಿವಿಧಂ—ದ್ರವ್ಯಾ ದ್ರವ್ಯಭೇದಾತ್ | ದ್ರವ್ಯಂ ಚ ದ್ವಿವಿಧಂ—ಜಡಮಜಡಮಿತಿ | ಜಡಂ ಚ ದ್ವೇಧಾ–ಪ್ರಕೃತಿಃ ಕಾಲಶ್ಚೇತಿ | ಪ್ರಕೃತಿಶ್ಚತುರ್ವಿಂಶತಿತತ್ವಾತ್ಮಿಕಾ | ಕಾಲಸ್ತು ಉಪಾಧಿ ಭೇದಾತ್ ತ್ರಿವಿಧಃ |

---

ಮೋಕ್ಷೋಪಾಯ. ಅಪ್ರಾಕೃತ ದೇಶದಲ್ಲಿರುವ ಅವನೇ ಪ್ರಾಪ್ಯ' ಎಂಬುದಾಗಿ ವೇದಾಂತವಾಕ್ಯಗಳ ಪ್ರಮಾಣಗಳಿಂದ ಪ್ರತಿಪಾದಿಸುವ ವ್ಯಾಸ[3], ಬೋಧಾಯನ[4], ಗುಹದೇವ, ಭಾರುಚಿ, ಬ್ರಹ್ಮನಂದಿ[5], ದ್ರಮಿಡಾಚಾರ್ಯ[6], ಶ್ರೀಪರಾಂಕುಶ, ನಾಥಮುನಿ, ಯಾಮುನಮುನಿ, ರಾಮಾನುಜರು ಮುಂತಾದವರ ಅಭಿಮತಾನುಸಾರವಾಗಿ 'ಯತಿಪತಿಮತದೀಪಿಕೆ' ಎಂದು ಕರೆಯುವ ಈ ಶಾರೀರಕ ಪರಿಭಾಷೆಯನ್ನು[7] ಮಹಾಚಾರ್ಯರ ಕೃಪೆಯನ್ನೇ ಅವಲಂಬಿಸಿರುವ ನಾನು ಸ್ವಶಕ್ತ್ಯನುಸಾರವಾಗಿ ಸಂಗ್ರಹವಾಗಿ ಪ್ರಕಾಶಪಡಿಸುತ್ತಿದ್ದೇನೆ.

೨. ಎಲ್ಲ ಪದಾರ್ಥಜಾತವೂ ಪ್ರಮಾಣ, ಪ್ರಮೇಯ ಎಂದು ಎರಡು ಬಗೆ. ಪ್ರಮಾಣಗಳು ಮೂರೇ ಮೂರು[8]. ಪ್ರಮೇಯವು ದ್ರವ್ಯ, ಅದ್ರವ್ಯ ಎಂದು ಎರಡು ವಿಧ. ದ್ರವ್ಯವು ಜಡ, ಅಜಡ ಎಂದು ಎರಡು ಬಗೆ. ಜಡದ್ರವ್ಯವು ಕಾಲ ಮತ್ತು ಪ್ರಕೃತಿ ಎಂದು ಎರಡು ವಿಧ. ಪ್ರಕೃತಿಯು ಇಪ್ಪತ್ತನಾಲ್ಕು ತತ್ತ್ವಗಳನ್ನೊಳಗೊಂಡಿದೆ[9]. ಕಾಲವು ಉಪಾಧಿ ಭೇದದಿಂದ ಮೂರು ಬಗೆ.[10]

೩. ಅಜಡಂ ತು ದ್ವಿವಿಧಂ—ಪರಾಕ್ ಪ್ರತ್ಯಗಿತಿ । ಅಜಡಂ ಪರಾಗಪಿ ತಥಾ—ನಿತ್ಯ ವಿಭೂತಿಃ ಧರ್ಮಭೂತಜ್ಞಾನಂ ಚೇತಿ ।

೪. ಪ್ರತ್ಯಗಪಿ ದ್ವಿವಿಧಃ—ಜೀವೇಶ್ವರ ಭೇದಾತ್ । ಜೀವಸ್ತ್ರಿವಿಧಃ—ಬದ್ಧ ಮುಕ್ತ ನಿತ್ಯಭೇದಾತ್ । ಬದ್ಧೋಽಪಿ ದ್ವಿವಿಧಃ—ಬುಭುಕ್ಷು ಮುಮುಕ್ಷು ಭೇದಾತ್ । ಬುಭುಕ್ಷುರ್ದ್ವಿವಿಧಃ—ಅರ್ಥಕಾಮಪರೋ ಧರ್ಮಪರಶ್ಚೇತಿ । ಧರ್ಮಪರೋ ದ್ವಿವಿಧಃ – ದೇವತಾಂತರಪರೋ ಭಗವತ್ಪರಶ್ಚೇತಿ । ಮುಮುಕ್ಷುರ್ದ್ವಿವಿಧಃ—ಕೈವಲ್ಯಪರೋ ಮೋಕ್ಷಪರಶ್ಚೇತಿ । ಮೋಕ್ಷಪರೋ ದ್ವಿವಿಧಃ—ಭಕ್ತಃ ಪ್ರಪನ್ನಶ್ಚೇತಿ । ಪ್ರಪನ್ನೋ ದ್ವಿವಿಧಃ—ಏಕಾಂತೀ ಪರಮೈಕಾಂತೀ ಚೇತಿ । ಪರಮೈಕಾಂತೀ ದ್ವಿವಿಧಃ—ದೃಪ್ತಾರ್ತಭೇದಾತ್ ।

೫. ಪಂಚಧಾವಸ್ಥಿತಃ ಈಶ್ವರಃ—ಪರವ್ಯೂಹ ವಿಭವಾಂತರ್ಯಾಮ್ಯರ್ಚಾವತಾರಭೇದಾತ್ । ಪರ ಏಕಧಾ । ವ್ಯೂಹಶ್ಚತುರ್ಧಾ—ವಾಸುದೇವ

---

೩. ಅಜಡದ್ರವ್ಯವು ಪರಾಕ್ ಮತ್ತು ಪ್ರತ್ಯಕ್ ಎಂದು ಎರಡು ವಿಧ. ಅಜಡವಾದ ಪರಾಕ್ ತತ್ತ್ವವು ನಿತ್ಯ ವಿಭೂತಿ ಮತ್ತು ಧರ್ಮಭೂತಜ್ಞಾನ ಎಂದು ಎರಡು ಬಗೆಯಾಗಿರುವುದು.

೪. ಪ್ರತ್ಯಕ್ ತತ್ತ್ವ ಜೀವ ಮತ್ತು ಈಶ್ವರ ಎಂದು ಎರಡು ವಿಧವಾಗಿದೆ. ಜೀವನು ಬದ್ಧ, ಮುಕ್ತ ಮತ್ತು ನಿತ್ಯ ಎಂದು ಮೂರು ಬಗೆಯಾಗಿದ್ದಾನೆ. ಬದ್ಧನು ಬುಭುಕ್ಷು ಮತ್ತು ಮುಮುಕ್ಷು[11] ಎಂದು ಎರಡು ವಿಧ. ಬುಭುಕ್ಷುವೂ ಎರಡು ವಿಧವಾಗಿದ್ದಾನೆ—ಅರ್ಥಕಾಮಪರ ಮತ್ತು ಧರ್ಮಪರ ಎಂದು. ಧರ್ಮಪರನೂ ಎರಡುಬಗೆ ದೇವತಾಂತರಪರ ಮತ್ತು ಭಗವತ್ಪರ ಎಂದು. ಮುಮುಕ್ಷುವು ಕೈವಲ್ಯಪರ ಮತ್ತು ಮೋಕ್ಷಪರ ಎಂದು ಎರಡು ವಿಧವಾಗಿದ್ದಾನೆ. ಮೋಕ್ಷಪರನು ಭಕ್ತ ಮತ್ತು ಪ್ರಪನ್ನ ಎಂದು ಎರಡು ಬಗೆ. ಪ್ರಪನ್ನನೂ ಏಕಾಂತೀ ಮತ್ತು ಪರಮೈಕಾಂತೀ ಎಂದು ಎರಡು ವಿಧವಾಗಿದ್ದಾನೆ ಪರಮೈಕಾಂತಿಯೂ ದೃಪ್ತ ಮತ್ತು ಆರ್ತ ಎಂದು ಎರಡು ಬಗೆಯಾಗಿದ್ದಾನೆ.

೫. ಈಶ್ವರನೇ ಪರ, ವ್ಯೂಹ, ವಿಭವ ಅಂತರ್ಯಾಮೀ ಮತ್ತು ಅರ್ಚಾ ಎಂಬ ಐದು ವ್ಯೂಹಗಳಲ್ಲಿದ್ದಾನೆ. ಪರವ್ಯೂಹದಲ್ಲಿ ಅವಾಂತರ ಭೇದಗಳಿಲ್ಲ.

ಸಂಕರ್ಷಣ ಪ್ರದ್ಯುಮ್ನಾನಿರುದ್ಧ ಭೇದಾತ್ । ಕೇಶವಾದಿ ವ್ಯೂಹಾಂತರಂ । ಮತ್ಸ್ಯಾದಯೋ ವಿಭವಃ ಪುನರನಂತಾಶ್ಚ । ಅಂತರ್ಯಾಮಿಾ ಪ್ರತಿಶರೀರ ಮವಸ್ಥಿತಃ । ಅರ್ಚಾವತಾರಸ್ತು—ಶ್ರೀರಂಗ ವೇಂಕಟಾದ್ರಿ ಹಸ್ತಿಗಿರಿ ಯಾದವಾದ್ರಿ ಘಟಿಕಾಚಲಾದಿಷು ಸಕಲಮನುಜನಯನವಿಷಯತಾಂ ಗತೋ ಮೂರ್ತಿವಿಶೇಷಃ ।

೬. ಅದ್ರವ್ಯಂ ತು ಸತ್ವರಜಸ್ತಮಶ್ಶಬ್ದ ಸ್ಪರ್ಶರೂಪರಸಗಂಧ ಸಂಯೋಗ ಶಕ್ತಿಭೇದಾದ್ದಶಧೈವ ।

೭. ಏವಮುದ್ದಿಷ್ಟಾನಾಂ ಉದ್ದೇಶಕ್ರಮೇಣ ಲಕ್ಷಣಪರೀಕ್ಷೇ ಕ್ರಿಯೇತೇ । ತತ್ರ ಪ್ರಮಾಕರಣಂ ಪ್ರಮಾಣಂ । ಪ್ರಮಾಣಂ ಲಕ್ಷ್ಯಮ್ । ಪ್ರಮಾಕರಣತ್ವಂ ಲಕ್ಷಣಮ್ । ಯಥಾವಸ್ಥಿತವ್ಯವಹಾರಾನುಗುಣಂ ಜ್ಞಾನಂ ಪ್ರಮಾ । ಪ್ರಮಾ ಲಕ್ಷ್ಯಮ್ । ಯಥಾವಸ್ಥಿತವ್ಯವಹಾರಾನು

---

ವ್ಯೂಹಾವತಾರವಾದರೋ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಎಂದು ನಾಲ್ಕು ಬಗೆಯಾಗಿದೆ. ಕೇಶವ ಮುಂತಾದುವೂ ವ್ಯೂಹಾಂತರಗಳು. ವಿಭವಾವತಾರವಾದರೋ ಮತ್ಸ್ಯ, ಕೂರ್ಮ ಮುಂತಾದವು. ಇವು ಅನಂತವಾಗಿವೆ. ಪ್ರತಿಯೊಂದು ಶರೀರದೊಳಗೂ ಅಂತರ್ಯಾಮಿಯು ಅವಸ್ಥಿತನಾಗಿದ್ದಾನೆ. ಶ್ರೀರಂಗ, ವೇಂಕಟಾದ್ರಿ, ಹಸ್ತಿಗಿರಿ, ಯಾದವಾದ್ರಿ, ಘಟಿಕಾಚಲ ಮುಂತಾದ ಕ್ಷೇತ್ರಗಳಲ್ಲಿ ಸಕಲ ಮನುಷ್ಯರಿಗೂ ನಯನಗೋಚರನಾಗಿರುವ ಮೂರ್ತಿವಿಶೇಷ ಅರ್ಚಾವತಾರ.

೬. ಅದ್ರವ್ಯಗಳು ಹತ್ತು. ಅವು ಯಾವುವೆಂದರೆ ಸತ್ತ್ವ, ರಜಸ್ಸು, ತಮಸ್ಸು, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಸಂಯೋಗ ಮತ್ತು ಶಕ್ತಿ ಎಂಬುವು.

೭. ಮೇಲೆ ಪದಾರ್ಥನಿರೂಪಣೆ ಮಾಡಲಾಯಿತು. ಈಗ ಅವುಗಳ ಲಕ್ಷಣ ಮತ್ತು ಪರೀಕ್ಷೆಯನ್ನು ನಿರೂಪಣ ಕ್ರಮದಲ್ಲಿಯೇ ಮಾಡುತ್ತೇವೆ. ಇವುಗಳಲ್ಲಿ ಪ್ರಮಾಣವೆಂಬುದು ಯಥಾರ್ಥವಾದ ಜ್ಞಾನಕ್ಕೆ ಸಾಧನವಾದುದು. ಇದು

ಗುಣಜ್ಞಾನತ್ತ್ವಂ ಲಕ್ಷಣಮ್। "ಜ್ಞಾನಂ ಪ್ರಮಾ" ಇತ್ಯುಕ್ತೇ ಶುಕ್ತಿಕಾಯಾಮ್ "ಇದಂ ರಜತಮ್" ಇತಿಜ್ಞಾನೇ ಅತಿವ್ಯಾಪ್ತಿಃ; ಅತ ಉಕ್ತಂ "ವ್ಯವಹಾರಾನುಗುಣಮ್" ಇತಿ। ಏವಮಪಿ ತತ್ರೈವಾತಿವ್ಯಾಪ್ತಿಃ; ಭ್ರಾಂತಿದಶಾಯಾಮಪಿ "ಇದಂ ರಜತಮ್" ಇತಿ ವ್ಯವಹ್ರಿಯಮಾಣತ್ವಾತ್। ಅತ ಉಕ್ತಂ "ಯಥಾವಸ್ಥಿತಮ್" ಇತಿ। "ಯಥಾವಸ್ಥಿತ" ಇತಿ ಪದೇನ ಸಂಶಯಾನ್ಯಥಾಜ್ಞಾನ–ವಿಪರೀತಜ್ಞಾನವ್ಯಾವೃತ್ತಿಃ।

೮. ಧರ್ಮಿಗ್ರಹಣೇ ಮಿಥೋ ವಿರುದ್ಧಾನೇಕವಿಶೇಷಸ್ಮರಣಂ ಸಂಶಯಃ। ಯಥಾ ಊರ್ಧ್ವತಾವಿಶಿಷ್ಟೇ "ಸ್ಥಾಣುರ್ವಾ ಪುರುಷೋ ವಾ" ಇತಿ ಜ್ಞಾನಮ್। ಅನ್ಯಥಾಜ್ಞಾನಂ ನಾಮ ಧರ್ಮವಿಪರ್ಯಾಸಃ। ಯಥಾ ಕರ್ತೃತ್ವೇನ

---

ಪ್ರಮಾಣ ಎಂಬುವುದರ ಲಕ್ಷಣ. ಇಲ್ಲಿ ಪ್ರಮಾಣ ಲಕ್ಷ್ಯ ಪ್ರಮೆಯನ್ನು ಉಂಟುಮಾಡುವ ಗುಣವನ್ನು ಹೊಂದಿರುವುದೇ ಇದರ ಲಕ್ಷಣ ಆಗಿದೆ. ಒಂದು ಪದಾರ್ಥ ಹೇಗೆ ಇದೆಯೋ ಹಾಗೆಯೇ ಇರುವಂಥದೂ ನಮ್ಮ ವ್ಯವಹಾರಕ್ಕೆ ಅನುಗುಣವಾಗಿರುವಂಥದೂ ಆದ ಜ್ಞಾನ ಪ್ರಮಾಣ[12]. ಇಲ್ಲಿ ಪ್ರಮೆ ಎಂಬುದು ಲಕ್ಷ್ಯ ಅಥವಾ ಲಕ್ಷಣ ಹೇಳಲ್ಪಡಬೇಕಾದುದು. ಯಥಾವಸ್ಥಿತವೂ ವ್ಯವಹಾರಾನುಗುಣವೂ ಆದ ಜ್ಞಾನತ್ವವನ್ನು ಹೊಂದಿರುವುದು ಅದರ ಲಕ್ಷಣ. (ಇಂಥ ಜ್ಞಾನ ಯಾವುದರ ಧರ್ಮವೋ ಅದು ಪ್ರಮೆ). ಜ್ಞಾನವೇ ಪ್ರಮೆ ಎಂದು ಲಕ್ಷಣ ಹೇಳಿದರೆ ಕಪ್ಪೆಯ ಚಿಪ್ಪಿನಲ್ಲಿ ಉಂಟಾಗುವ 'ಇದು ಬೆಳ್ಳಿ' ಎಂಬ ಜ್ಞಾನದಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದರಿಂದಲೇ 'ವ್ಯವಹಾರಾನುಗುಣ' ಎಂಬ ವಿಶೇಷಣವನ್ನು ಬಳಸಿದೆ ಆದರೂ ಅತಿವ್ಯಾಪ್ತಿ ಸಂಭವಿಸಿಬಿಡಬಹುದು. ಭ್ರಾಂತಿದಶೆಯಲ್ಲಿಯೂ 'ಇದು ಬೆಳ್ಳಿ' ಎಂಬ ವ್ಯವಹಾರ ಬರುತ್ತದೆ. ಆದ್ದರಿಂದಲೇ ಇಲ್ಲಿ 'ಯಥಾವಸ್ಥಿತಂ' ಎಂಬ ವಿಶೇಷಣವನ್ನು ಹೇಳಿದೆ. 'ಯಥಾವಸ್ಥಿತ' (ಅದು ಹೇಗೆ ಇರುವುದೋ ಹಾಗೆಯೇ) ಎಂಬ ಪದದಿಂದ ಸಂಶಯ, ಅನ್ಯಥಾಜ್ಞಾನ ಮತ್ತು ವಿಪರೀತ ಜ್ಞಾನಗಳ ವ್ಯಾವೃತ್ತಿ ಆಗಿದೆ.

೮. ಒಂದು ಪದಾರ್ಥವನ್ನು ಗ್ರಹಿಸುವಾಗ ಅದರಲ್ಲಿ ಪರಸ್ಪರ ವಿರುದ್ಧವಾದ ಅನೇಕ ವಿಶೇಷಗಳ ಸ್ಮರಣೆ ಉಂಟಾಗುವುದು **ಸಂಶಯ**. ಎತ್ತರವಾಗಿ

ಭಾಸಮಾನೇ ಆತ್ಮನಿ ಕುಯುಕ್ತಿಭಿಃ ಕರ್ತೃತ್ವಸ್ಯ ಭ್ರಾಂತತ್ವೋಪಪಾದನಮ್ | ವಿಪರೀತಜ್ಞಾನಂ ನಾಮ ಧರ್ಮಿವಿಪರ್ಯಾಸಃ | ಯಥಾ ವಸ್ತುನೋ ವಸ್ತ್ವಂತರ ಜ್ಞಾನಮ್ |

೯. ಲಕ್ಷಣಸ್ಯ ತ್ರೀಣಿ ದೂಷಣಾನಿ ಸಂತಿ | ಅವ್ಯಾಪ್ತ್ಯತಿವ್ಯಾಪ್ತ್ಯಸಂಭವಭೇದಾತ್ | ಲಕ್ಷ್ಯೈಕದೇಶೇ ಲಕ್ಷಣಸ್ಯಾವರ್ತಮಾನತ್ವಮವ್ಯಾಪ್ತಿಃ | "ಕಪಿಲವರ್ಣವತ್ತ್ವಂ ಗೋರ್ಲಕ್ಷಣಂ" ಇತಿ ಲಕ್ಷಣೇ ಕೃತೇ ಶುಕ್ಲಾಯಾಮವ್ಯಾಪ್ತಿಃ | ಲಕ್ಷ್ಯಾದನ್ಯತ್ರ ವರ್ತಮಾನತ್ವಮತಿವ್ಯಾಪ್ತಿಃ | ಲಕ್ಷ್ಯೇ ಕ್ವಾಪ್ಯ

---

ರುವ ಪದಾರ್ಥವೊಂದರಲ್ಲಿ 'ಇದು ಕಂಬವೋ ಮನುಷ್ಯನೋ' ಎಂಬಂಥ ಜ್ಞಾನ ಇದಕ್ಕೆ ನಿದರ್ಶನ. ಒಂದು ಧರ್ಮ ಅಥವಾ ವಿಶೇಷಣವನ್ನೇ ಗ್ರಹಿಸುವ ಬದಲು ಮತ್ತೊಂದು ವಿಶೇಷಣ ಅಥವಾ ಧರ್ಮವನ್ನಲ್ಲಿ ಗ್ರಹಿಸುವುದು ಅನ್ಯಥಾ ಜ್ಞಾನ. ಆತ್ಮನ ಕರ್ತೃತ್ವ ಪ್ರಕಾಶಿಸುತ್ತಿರುವಾಗಲೂ ಕುಯುಕ್ತಿಗಳಿಂದ ಆ ಕರ್ತೃತ್ವವು ಬ್ರಾಂತಿ ಎಂದು ಪ್ರತಿಪಾದಿಸುವುದು ಇದಕ್ಕೆ ಉದಾಹರಣೆ. ವಿಪರೀತಜ್ಞಾನ ಎಂಬುದು ಒಂದು ಪದಾರ್ಥಕ್ಕೆ ಪ್ರತಿಯಾಗಿ ಮತ್ತೊಂದು ಪದಾರ್ಥವನ್ನು ಅಲ್ಲಿ [ತಪ್ಪಾಗಿ] ಗ್ರಹಿಸುವುದೇ ಆಗಿದೆ. ಇದು ಧರ್ಮಿಯ ವಿಪರ್ಯಾಸವು.

೯. ಲಕ್ಷಣಕ್ಕೆ ಮೂರು ದೂಷಣಗಳು ಸಂಭವಿಸುತ್ತವೆ. ಅವ್ಯಾಪ್ತಿ, ಅತಿವ್ಯಾಪ್ತಿ ಮತ್ತು ಅಸಂಭವ ಎಂಬುವು ಅವು. ಲಕ್ಷ್ಯದ ಅಥವಾ ಲಕ್ಷಣ ಯಾವುದಕ್ಕೆ ಹೇಳಿದೆಯೋ ಅದರ ಒಂದು ಅಂಶದಲ್ಲಿ ಆ ಲಕ್ಷಣ ಇಲ್ಲದಿರುವುದು ಅವ್ಯಾಪ್ತಿ. 'ಕಪಿಲವರ್ಣವಿರುವುದು ಹಸುವಿನಲಕ್ಷಣ' ಎಂದು ಹಸುವಿಗೆ ಲಕ್ಷಣ ಹೇಳಿದರೆ ಬಿಳಿಯ ಬಣ್ಣದ ಹಸುವಿನಲ್ಲಿ ಅದರ ಅವ್ಯಾಪ್ತಿ ಸಂಭವಿಸುತ್ತದೆ. ಲಕ್ಷ್ಯವಾದ ಪದಾರ್ಥಕ್ಕಿಂತ ಬೇರೆ ಪದಾರ್ಥದಲ್ಲಿಯೂ ಲಕ್ಷಣವು ಅನ್ವಯಿಸಿದರೆ ಅದು 'ಅತಿವ್ಯಾಪ್ತಿ' ಆಗುತ್ತದೆ. ಲಕ್ಷ್ಯವಾದ ವಸ್ತುವಿನಲ್ಲಿ ಹೇಳಿದ ಆ ಲಕ್ಷಣ ಎಲ್ಲಿಯೂ ಇಲ್ಲದಿರುವುದೇ 'ಅಸಂಭವ' ಎನಿಸುವುದು. 'ಆತ್ಮನು ಕಣ್ಣಿಗೆ ಗೋಚರಿಸುವವನು' ಎಂದು ಆತ್ಮನ ಲಕ್ಷಣ ಹೇಳುವುದು ಅಸಂಭವಕ್ಕೆ ನಿದರ್ಶನ. ಈ ಮೊದಲು ನಾವು ಹೇಳಿರುವ

ವಿದ್ಯಮಾನತ್ವಮ್ ಅಸಂಭವಃ । ಯಥಾ—'ಚಕ್ಷುರ್ವಿಷಯೋ ಜೀವ' ಇತ್ಯುಕ್ತೇ ಅಸಂಭವ ಏವ । ಅತ್ರೋಕ್ತ ದೂಷಣತ್ರಯಾಭಾವಾತ್ ಪ್ರಮಾಲಕ್ಷಣಂ ಸ್ವಸ್ಥಮ್ ।

೧೦. ಸಾಧಕತಮಂ ಕರಣಮ್ । ಅತಿಶಯಿತಂ ಸಾಧಕಂ ಸಾಧಕತಮಮ್ । ಯಸ್ಮಿನ್ ಸತಿ ಅವಿಲಂಬೇನ ಜ್ಞಾನಮುತ್ಪದ್ಯತೇ ತತ್ "ಅತಿಶಯಿತಮ್" ಇತ್ಯುಚ್ಯತೇ । ತೇನ ಪ್ರಮಾಕರಣಂ ಪ್ರಮಾಣಮಿತಿ ಸಿದ್ಧಮ್ । ಅನಧಿಗತಾರ್ಥಗಂತೃ ಪ್ರಮಾಣಮಿತ್ಯಾದಿಕಂ ತು ತತ್ತದ್ವಾದಿಭಿರೇವ ನಿರಸ್ತತ್ವಾದನಾದರಣೀಯಮ್ ।

## ಪ್ರತ್ಯಕ್ಷ ಪ್ರಕರಣ

೧೧. ತಾನಿ ಪ್ರಮಾಣಾನಿ ಪ್ರತ್ಯಕ್ಷಾನುಮಾನಶಬ್ದಾಖ್ಯಾನಿ ತ್ರೀಣ್ಯೇವ ।

---

ಪ್ರಮೆಯ ಲಕ್ಷಣ ಈ ಮೂರೂ ದೋಷಗಳಿಂದ ಬಿಡಲ್ಪಟ್ಟಿರುವ ಕಾರಣ ಸಾಧುವಾಗಿದೆಯೆಂದು ನಿಶ್ಚಯವಾಗುತ್ತದೆ.

೧೦. ಈ ಪ್ರಮೆಯನ್ನುಂಟುಮಾಡಲು ಯಾವುದು ಅತ್ಯುತ್ತಮವಾದ ಸಾಧನವೋ ಅದು ಕರಣ. 'ಸಾಧಕತಮ' ಎಂದರೆ ಅತ್ಯಂತ ಪ್ರಧಾನವಾದ ಸಾಧಕ ಎಂದು ಅರ್ಥ. ಯಾವುದು ಇದ್ದಾಗ ವಿಳಂಬವಿಲ್ಲದೆ ಜ್ಞಾನ ಹುಟ್ಟುವುದೋ ಅದು ಅತಿಶಯಿತವಾದ ಸಾಧಕ ಎಂದು ಹೇಳಲ್ಪಡುತ್ತದೆ. ಆದುದರಿಂದ ಪ್ರಮಾಣ ಪ್ರಮೆಯನ್ನುಂಟುಮಾಡುತ್ತದೆ ಎಂದು ಸಿದ್ಧವಾಗುತ್ತದೆ. ಪ್ರಮಾಣಕ್ಕೆ ಇತರರು ಹೇಳುವ 'ಮೊದಲು ತಿಳಿಯದಿರುವುದನ್ನು ತಿಳಿಯಪಡಿಸುವುದು ಪ್ರಮಾಣ' ಮುಂತಾದ ಲಕ್ಷಣಗಳು ಆಯಾ ವಾದಿಗಳಿಂದಲೇ ತಿರಸ್ಕೃತವಾಗಿರುವ ಕಾರಣ ಆದರಣೀಯವಾದವಲ್ಲ.

## ಪ್ರತ್ಯಕ್ಷ ಪ್ರಕರಣ

೧೧. ಮೇಲೆ ಪ್ರಸ್ತಾಪಮಾಡಿರುವಂತೆ ಪ್ರಮಾಣಗಳು ಮೂರು ಮಾತ್ರ. ಅವು ಯಾವುವೆಂದರೆ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬುವು.

೧೨ ಅತ್ರ ಸಾಕ್ಷಾತ್ಕಾರಪ್ರಮಾಕರಣಂ ಪ್ರತ್ಯಕ್ಷಮ್ । ಅನುಮಾನಾದಿ ವ್ಯಾವೃತ್ತ್ಯರ್ಥಂ "ಸಾಕ್ಷಾತ್ಕಾರ" ಇತಿ । ದುಷ್ಟೇಂದ್ರಿಯಜ ವ್ಯಾವೃತ್ತ್ಯರ್ಥಂ "ಪ್ರಮಾ" ಇತಿ ।

೧೩. ತಚ್ಚ ಪ್ರತ್ಯಕ್ಷಂ ದ್ವಿವಿಧಂ–ನಿರ್ವಿಕಲ್ಪಕ ಸವಿಕಲ್ಪಕ ಭೇದಾತ್ । ನಿರ್ವಿಕಲ್ಪಕಂ ನಾಮ ಗುಣಸಂಸ್ಥಾನಾದಿವಿಶಿಷ್ಟಪ್ರಥಮಪಿಂಡಗ್ರಹಣಮ್ । ಸವಿಕಲ್ಪಕಂ ತು ಸಪ್ರತ್ಯವಮರ್ಶಂ ಗುಣಸಂಸ್ಥಾನಾದಿವಿಶಿಷ್ಟದ್ವಿತೀಯಾದಿ ಪಿಂಡಜ್ಞಾನಮ್ । ಉಭಯವಿಧಮಪಿ ಏತತ್ ವಿಶಿಷ್ಟವಿಷಯಮೇವ । ಅವಿಶಿಷ್ಟಗ್ರಾಹಿಣೋ ಜ್ಞಾನಸ್ಯಾನುಪಲಂಭಾತ್ ಅನುಪಪತ್ತೇಶ್ಚ ।

೧೪ ಗ್ರಹಣಪ್ರಕಾರಸ್ತು–ಆತ್ಮಾ ಮನಸಾ ಸಂಯುಜ್ಯತೇ, ಮನ

---

೧೨. ಇವುಗಳಲ್ಲಿ ಪ್ರತ್ಯಕ್ಷವು ಸಾಕ್ಷಾತ್ಕಾರದಿಂದ ಪ್ರಮೆಯನ್ನುಂಟು ಮಾಡುತ್ತದೆ. ಅನುಮಾನವೇ ಮೊದಲಾದುವುಗಳನ್ನು ಪ್ರತ್ಯೇಕಿಸುವುದಕ್ಕಾಗಿ 'ಸಾಕ್ಷಾತ್ಕಾರ' ಎಂಬ ಶಬ್ದವನ್ನು ಬಳಸಿದೆ. ದೋಷಯುಕ್ತವಾದ ಇಂದ್ರಿಯಗಳಿಂದ ಹುಟ್ಟುವ ಜ್ಞಾನವನ್ನು ಬೇರ್ಪಡಿಸಲು 'ಪ್ರಮಾ' ಎಂಬ ಶಬ್ದ ಪ್ರಯೋಗಿಸಿದೆ.

೧೩. ಈ ಪ್ರತ್ಯಕ್ಷವು ನಿರ್ವಿಕಲ್ಪಕ ಮತ್ತು ಸವಿಕಲ್ಪಕ ಎಂದು ಎರಡು ವಿಧ. ಗುಣ, ರೂಪ ಮೊದಲಾದುವುಗಳಿಂದ ವಿಶಿಷ್ಟವೇ ಆದ ಆಯಾ ಜಾತಿಯ ಪದಾರ್ಥದ ಮೊಟ್ಟಮೊದಲನೆಯ ವ್ಯಕ್ತಿಯ ಗ್ರಹಣಕ್ಕೆ ನಿರ್ವಿಕಲ್ಪಕ ಪ್ರತ್ಯಕ್ಷ ಎಂದು ಹೆಸರು. ಗುಣಗಳು, ರೂಪ ಇವುಗಳಿಂದ ಕೂಡಿದ ಅದೇ ಜಾತಿಯ ಎರಡನೆಯ ಮತ್ತು ಮುಂದಿನ ಇತರ ವ್ಯಕ್ತಿಗಳ ಜ್ಞಾನ ಸವಿಕಲ್ಪಕ ಪ್ರತ್ಯಕ್ಷ ಎನಿಸುವುದು. ಈ ಎರಡು ಬಗೆಯ ಪ್ರತ್ಯಕ್ಷಗಳಿಗೂ ಗುಣಗಳೇ ಮೊದಲಾದ ವಿಶೇಷಣಗಳಿಂದ ವಿಶಿಷ್ಟವಾದ ವಸ್ತುಗಳೇ ವಿಷಯಗಳಾಗಿರುತ್ತವೆ. ಏಕೆಂದರೆ ಗುಣ ರಹಿತವಾದ ಪದಾರ್ಥಗಳ ಜ್ಞಾನ ಉಪಲಬ್ಧವಾಗುವುದೂ ಇಲ್ಲ.[14] ಅದು ಉಪಪನ್ನವಾಗುವುದೂ ಇಲ್ಲ

೧೪. ಪ್ರತ್ಯಕ್ಷವುಂಟಾಗುವ ಬಗೆ ಹೀಗೆ ಇದೆ. ಆತ್ಮನು ಮನಸ್ಸಿ

ಇಂದ್ರಿಯೇಣ, ಇಂದ್ರಿಯಮಾರ್ಗೇಣೇತಿ । ಇಂದ್ರಿಯಾಣಾಂ ಪ್ರಾಪ್ಯಪ್ರಕಾಶಕಾರಿತ್ವನಿಯಮಾತ್ । ಅತೋ ಘಟಾದಿ ರೂಪಾರ್ಥಸ್ಯ ಚಕ್ಷುರಾದಿ ರೂಪೇಂದ್ರಿಯಸ್ಯ ಚ ಸನ್ನಿಕರ್ಷೇ ಸತಿ "ಅಯಂ ಘಟಃ" ಇತಿ ಚಾಕ್ಷುಷ ಜ್ಞಾನಂ ಜಾಯತೇ । ಏವಮೇವ ಸ್ಪಾರ್ಶನ ಪ್ರತ್ಯಕ್ಷಾದಯೋಽಪಿ ।

೧೫. ದ್ರವ್ಯಗ್ರಹಣೇ ಸಂಯೋಗಃ ಸಂಬಂಧಃ । ದ್ರವ್ಯಗತರೂಪಾದಿ ಗ್ರಹಣೇ ಸಮವಾಯಾನಂಗೀಕಾರಾತ್ ಸಂಯುಕ್ತಾಶ್ರಯಣಸಂಬಂಧಃ ।

೧೬. ನಿರ್ವಿಕಲ್ಪಕಸವಿಕಲ್ಪಕಭಿನ್ನಂ ಪ್ರತ್ಯಕ್ಷಂ ದ್ವಿವಿಧಮ್—ಅರ್ವಾಚೀನಂ ಅನರ್ವಾಚೀನಂ ಚೇತಿ । ಅರ್ವಾಚೀನಂ ಪುನರ್ದ್ವಿವಿಧಂ—ಇಂದ್ರಿಯ ಸಾಪೇಕ್ಷಂ ತದನಪೇಕ್ಷಂ ಚೇತಿ । ತದನಪೇಕ್ಷಂ ಚ ದ್ವಿವಿಧಮ್—ಸ್ವಯಂ ಸಿದ್ಧಂ

---

ನೊಡನೆ ಸೇರುತ್ತಾನೆ. ಮನಸ್ಸು ಇಂದ್ರಿಯದೊಡನೆ ಕೂಡುತ್ತದೆ. ಇಂದ್ರಿಯ ತಿಳಿಯಲ್ಪಡುವ ಪದಾರ್ಥದೊಡನೆ ಸಂಯೋಗವನ್ನು ಹೊಂದುತ್ತದೆ. ತಿಳಿಯಲ್ಪಡುವ ಪದಾರ್ಥಗಳೊಡನೆ ಇಂದ್ರಿಯಗಳು ಸಂಬಂಧವನ್ನು ಹೊಂದುವುದರಿಂದ ತಮ್ಮ ಪ್ರಕಾಶಕ ಕಾರ್ಯವನ್ನು ನಿರ್ವಹಿಸುತ್ತವೆ. ಆದುದರಿಂದ ಕಣ್ಣು ಮೊದಲಾದ ರೂಪವುಳ್ಳ ಇಂದ್ರಿಯವು 'ಘಟ' ಮೊದಲಾದ ಪದಾರ್ಥದೊಡನೆ ಸಂಬಂಧವನ್ನು ಹೊಂದಿದಾಗ 'ಇದು ಘಟ' ಎಂಬ ಚಾಕ್ಷುಷ ಜ್ಞಾನ ಉಂಟಾಗುತ್ತದೆ. ಹೀಗೆಯೇ ಸ್ಪರ್ಶಸಂಬಂಧವಾದ ಪ್ರತ್ಯಕ್ಷವೂ ಸಹ.

೧೫. ಒಂದು ದ್ರವ್ಯದ ಪ್ರತ್ಯಕ್ಷಜ್ಞಾನ ಉಂಟಾಗುವಾಗ ಆಗುವ ಇಂದ್ರಿಯಾರ್ಥ ಸಂಬಂಧವು ಸಂಯೋಗರೂಪವಾದುದು. ಒಂದು ಪದಾರ್ಥದ ಬಣ್ಣ ಮೊದಲಾದವು ಗ್ರಹಿಸಲ್ಪಡುವಾಗ 'ಸಂಯುಕ್ತಾಶ್ರಯಣ ಸಂಬಂಧ'[15] ಏರ್ಪಡುತ್ತದೆ. ಏಕೆಂದರೆ ಸಮವಾಯಿ ಸಂಬಂಧವು ನಮಗೆ ಒಪ್ಪಿಗೆಯಿಲ್ಲ.

೧೬. ನಿರ್ವಿಕಲ್ಪಕ ಮತ್ತು ಸವಿಕಲ್ಪಕ ಎಂದು ಎರಡು ವಿಧವಾಗಿರುವ ಪ್ರತ್ಯಕ್ಷ ಮತ್ತೆ ಎರಡು ಬಗೆಯಾಗಿದೆ—ಅರ್ವಾಚೀನ ಮತ್ತು ಅನರ್ವಾಚೀನ ಎಂದು. ಅರ್ವಾಚೀನ ಪ್ರತ್ಯಕ್ಷವೂ ಎರಡು ಬಗೆ—ಇಂದ್ರಿಯವನ್ನಪೇಕ್ಷಿಸುವುದು ಮತ್ತು ಇಂದ್ರಿಯ ನಿರಪೇಕ್ಷವಾದುದು ಎಂದು. ಇಂದ್ರಿಯ ನಿರಪೇಕ್ಷವಾದುದು

ದಿವ್ಯಂ ಚೇತಿ । ಸ್ವಯಂ ಸಿದ್ಧಂ ಯೋಗಜನ್ಯಮ್ । ದಿವ್ಯಂ ಭಗವತ್ಪ್ರಸಾದ ಜನ್ಯಮ್ । ಅನರ್ವಾಚೀನಂ ತು ಇಂದ್ರಿಯಾನಪೇಕ್ಷಂ ಮುಕ್ತನಿತ್ಯೇಶ್ವರ ಜ್ಞಾನಮ್ । ಅನರ್ವಾಚೀನಂ ತು ಪ್ರಸಂಗಾದುಕ್ತಮ್ । ಏವಂ ಸಾಕ್ಷಾತ್ಕಾರ ಪ್ರಮಾಕರಣಂ ಪ್ರತ್ಯಕ್ಷ ಮಿತಿ ಸಿದ್ಧಮ್ ।

೧೭. ನನು ಯಥಾವಸ್ಥಿತ ವ್ಯವಹಾರಾನುಗುಣ ಜ್ಞಾನಂ ಪ್ರಮೇತ್ಯುಕ್ತಂ। ಏವಂಚ ಸ್ಮೃತೇರಪಿ ಯಥಾವಸ್ಥಿತವ್ಯವಹಾರಾನುಗುಣತ್ವೇನ ಪ್ರಾಮಾಣ್ಯಾತ್ ಸ್ಮೃತೇರಪಿ ಪ್ರಮಾಣತ್ವೇನ ಪರಿಗಣನಾಚ್ಚ ತ್ರೀಣ್ಯೇವ ಪ್ರಮಾಣಾನೀತಿ ಕಥಂ ಪ್ರತಿಪಾದ್ಯತೇ? ಇತಿ ಚೇತ್, ಉಚ್ಯತೇ–ಸ್ಮೃತೇಃ ಪ್ರಾಮಾ

---

ಸ್ವಯಂಸಿದ್ಧ ಮತ್ತು ದಿವ್ಯ ಎಂದು ಎರಡು ಬಗೆ. ಸ್ವಯಂಸಿದ್ಧವಾದ ಪ್ರತ್ಯಕ್ಷ ಯೋಗದಿಂದ ಉಂಟಾಗುತ್ತದೆ. ದಿವ್ಯಪ್ರತ್ಯಕ್ಷ ಭಗವಂತನ ಕೃಪೆಯಿಂದ ಉಂಟಾಗುತ್ತದೆ. ಅನರ್ವಾಚೀನ ಪ್ರತ್ಯಕ್ಷಕ್ಕೆ ಇಂದ್ರಿಯಗಳ ಸಹಾಯದ ಅಪೇಕ್ಷೆಯೇ ಇಲ್ಲ. ನಿತ್ಯರು, ಮುಕ್ತರು ಮತ್ತು ಈಶ್ವರ ಇವರ ಪ್ರತ್ಯಕ್ಷಜ್ಞಾನ ಅನರ್ವಾಚೀನ ಪ್ರತ್ಯಕ್ಷ. ಪ್ರಸಂಗವಶಾತ್ ಇದನ್ನು ಹೇಳಲಾಯಿತು. ಹೀಗೆ ಪ್ರತ್ಯಕ್ಷವು ಸಾಕ್ಷಾತ್ಕಾರ ರೂಪವಾದ ಪ್ರಮೆಗೆ ಸಾಧನ ಎಂಬುದು ಸಿದ್ಧವಾಗಿದೆ.

೧೭. ಪ್ರಮಾ ಎಂಬುವುದಕ್ಕೆ ಲಕ್ಷಣವನ್ನು ಹೇಳುವಾಗ ಅದು 'ಯಥಾವಸ್ಥಿತ'ವಾಗಿಯೂ 'ವ್ಯವಹಾರಕ್ಕನುಗುಣ' ವಾಗಿಯೂ ಇರುವ ಜ್ಞಾನ ಎಂದು ಹೇಳಲಾಯಿತಷ್ಟೇ? ಇವೆರಡು ಲಕ್ಷಣಗಳೂ ಎಂದರೆ 'ಯಥಾವಸ್ಥಿತತ್ವ' ಮತ್ತು 'ವ್ಯವಹಾರಾನುಗುಣತ್ವ' ಗಳು ಸ್ಮೃತಿಗೂ ಹೊಂದಿಕೊಳ್ಳುವುದರಿಂದಲೂ, ಅದೂ ಒಂದು ಪ್ರಮಾಣ ಎಂದು ಎಣಿಸಲ್ಪಟ್ಟಿರುವುದರಿಂದಲೂ ಪ್ರಮಾಣಗಳು ಮೂರು ಮಾತ್ರ ಎಂದು ಹೇಳುವುದು ಹೇಗೆ ಎಂಬ ಆಕ್ಷೇಪ ತೋರುತ್ತದೆ. ಇದಕ್ಕೆ ಸಮಾಧಾನವನ್ನು ಹೀಗೆ ಹೇಳುತ್ತೇವೆ- ಸ್ಮೃತಿಗೆ ಪ್ರಾಮಾಣ್ಯವನ್ನು ಒಪ್ಪಿದರೂ ಅದಕ್ಕೆ ಸಂಸ್ಕಾರದ ಅಪೇಕ್ಷೆ ಇರುತ್ತದೆ. ಸ್ಮೃತಿಗೆ ಮೂಲವಾಗಿ ಪ್ರತ್ಯಕ್ಷವೇ ಇರುವುದರಿಂದ ಆ ಸ್ಮೃತಿಗೆ ಮೂಲಭೂತವಾದ ಪ್ರತ್ಯಕ್ಷದಲ್ಲಿಯೇ ಅದೂ ಸೇರಿ ಹೋಗುತ್ತದೆ.[1] ಆದುದರಿಂದಲೇ ಅದನ್ನು ಪ್ರತ್ಯೇಕವಾದ ಪ್ರಮಾಣ

ಣ್ಯಾಂಗೀ ಕಾರೇಽಪಿ ಸಂಸ್ಕಾರಸಾಪೇಕ್ಷತ್ವಾತ್ ತಸ್ಯಾಃ ಪ್ರತ್ಯಕ್ಷ ಮೂಲಭೂತ ತ್ವಾತ್ ಮೂಲಭೂತೇ ಪ್ರತ್ಯಕ್ಷೇಽಂತರ್ಭಾವ ಇತಿ ನ ಪೃಥಕ್ ಪ್ರಮಾಣತ್ವ ಕಲ್ಪನಮ್ । ಅತಃ ತ್ರೀಣ್ಯೇವೇತಿ ಪ್ರಮಾಣಾನಿ ಸಂಭವಂತಿ ।

೧೮. ಸ್ಮೃತಿರ್ನಾಮ ಪೂರ್ವಾನುಭವಜನ್ಯ–ಸಂಸ್ಕಾರಮಾತ್ರಜನ್ಯಂ ಜ್ಞಾನಂ । ಸಂಸ್ಕಾರೋ ಬೋಧಶ್ಚ "ಸದೃಶಾದೃಷ್ಟಚಿಂತಾದ್ಯಾಃ ಸ್ಮೃತಿ ಬೀಜಸ್ಯ ಬೋಧಕಾಃ" ಇತ್ಯುಕ್ತ ಪ್ರಕಾರೇಣ ಕ್ವಚಿತ್ ಸದೃಶದರ್ಶನಾದ್ಭ ವತಿ, ಕ್ವಚಿದದೃಷ್ಟಾತ್, ಕ್ವಚಿಚ್ಚಿಂತಯಾ । ಆದಿಶಬ್ದೇನ ಸಾಹಚರ್ಯ ಸ್ಯಾಪಿ ಗ್ರಹಣಾತ್ತೇನಾಪಿ ಚ ಭವತಿ ।

೧೯. ಸಾದೃಶ್ಯಜಾ ಯಥಾ–ದೇವದತ್ತಯಜ್ಞದತ್ತಯೋಃ ಸದೃ ಶಯೋಃ ದೇವದತ್ತದರ್ಶನೇನ ಯಜ್ಞದತ್ತಸ್ಮೃತಿಃ । ದ್ವಿತೀಯಾ ಯಥಾ–

---

ಎಂದು ಗಣನೆಮಾಡಿಲ್ಲ. ಇದರಿಂದ ಪ್ರಮಾಣಗಳ ಸಂಖ್ಯೆ ಮೂರೇ ಎಂಬುದು ಸಿದ್ಧವಾಗುತ್ತದೆ.

೧೮. ಸ್ಮೃತಿ ಎಂದರೇನು ? ಪೂರ್ವಾನುಭವದಿಂದ ಹುಟ್ಟಿದ ಸಂಸ್ಕಾರ ಮಾತ್ರದಿಂದ ಉದಯಿಸುವ ಜ್ಞಾನ ಸ್ಮೃತಿ. 'ಸದೃಶಪದಾರ್ಥದರ್ಶನ, ಅದೃಷ್ಟ, ಚಿಂತನೆ ಮೊದಲಾದವು ಸ್ಮರಣೆಯ ಮೂಲವನ್ನು (ಬೀಜ) ತಿಳಿಸು ವಂಥವು' ಎಂದು ಹೇಳಿರುವಂತೆ ಈ ಸಂಸ್ಕಾರದ ಉದ್ಬೋಧವು ಕೆಲವೆಡೆ ಗಳಲ್ಲಿ ಸದೃಶವಾದ ಪದಾರ್ಥಗಳ ದರ್ಶನದಿಂದಲೂ, ಮತ್ತು ಕೆಲವು ಸಂದರ್ಭಗಳಲ್ಲಿ ಸದೃಶವಾದ ಪದಾರ್ಥಗಳ ದರ್ಶನದಿಂದಲೂ, ಮತ್ತೆ ಕೆಲವು ಸಂದರ್ಭಗಳಲ್ಲಿ ಅದೃಷ್ಟದ ಕಾರಣದಿಂದಲೂ ಇನ್ನು ಕೆಲವೆಡೆಗಳಲ್ಲಿ ಚಿಂತನೆ ಯಿಂದಲೂ ಆಗುವುದು. ಇವೇ ಮೊದಲಾದವುಗಳೆಂದು ಹೇಳಿರುವುದರಲ್ಲಿ ಸಾಹಚರ್ಯವೂ ಸೇರುವುದು. ಕೆಲವು ಸಂದರ್ಭಗಳಲ್ಲಿ ಅದರಿಂದಲೂ ಆ ಸಂಸ್ಕಾರದ ಉದ್ಬೋಧವಾಗುವುದು.

೧೯. ಒಬ್ಬರನ್ನೊಬ್ಬರು ಹೋಲುವ ದೇವದತ್ತ ಮತ್ತು ಯಜ್ಞದತ್ತ ಎಂಬ ಇಬ್ಬರಿರುವಾಗ ದೇವದತ್ತನನ್ನು ನೋಡಿದಾಗ ಯಜ್ಞದತ್ತನ ನೆನಪು

ಯಾದೃಚ್ಛಿಕೀ ಕಾಲಾಂತರಾನುಭೂತ—ಶ್ರೀರಂಗಾದಿ—ದಿವ್ಯದೇಶಸ್ಮೃತಿಃ । ತೃತೀಯಾ ಯಥಾ-ಚಿಂತ್ಯಮಾನೇ ಸತಿ ಶ್ರೀವೇಂಕಟೇಶಸ್ಯ ಕಮನೀಯದಿವ್ಯ ಮಂಗಲ ವಿಗ್ರಹಸ್ಮೃತಿಃ ।

೨೦. ಸಮ್ಯಕ್ ಪೂರ್ವಮನುಭೂತಸ್ಯ ಸರ್ವಸ್ಯ ಸ್ಮೃತಿ ವಿಷಯತ್ವ ನಿಯಮಃ । ಕ್ವಚಿತ್ಕಾಲದೈರ್ಘ್ಯಾತ್ ವ್ಯಾಧ್ಯಾದಿನಾ ವಾ ಸಂಸ್ಕಾರಪ್ರಮೋಷಾತ್ ಸ್ಮೃತ್ಯಭಾವಃ ।

೨೧. ಯಥಾ ಸ್ಮೃತೇಃ ಪ್ರತ್ಯಕ್ಷೇऽಂತರ್ಭಾವ ಸ್ತಥಾ "ಸೋऽಯಂ ದೇವದತ್ತ" ಇತಿ ಪ್ರತ್ಯಭಿಜ್ಞಾಯಾ ಅಪಿ ಪ್ರತ್ಯಕ್ಷೇऽಂತರ್ಭಾವಃ । ಅಸ್ಮನ್ಮತೇ

---

ಬರುವುದು ಸಾದೃಶ್ಯದಿಂದ ಉಂಟಾಗುವ ಸ್ಮೃತಿಗೆ ಉದಾಹರಣೆ. ಯಾವುದೋ ಕಾಲದಲ್ಲಿ ಅನುಭವಿಸಿದ ಶ್ರೀರಂಗವೇ ಮುಂತಾದ ಪುಣ್ಯಕ್ಷೇತ್ರಗಳ ಯಾದೃಚ್ಛಿಕ ವಾದ ಸ್ಮರಣೆ ಅದೃಷ್ಟದಿಂದುಂಟಾಗುವ ಸ್ಮೃತಿಗೆ ನಿದರ್ಶನ. ಚಿಂತನೆಯಿಂದ ಬರುವ ಸ್ಮೃತಿಗೆ ಇದು ಉದಾಹರಣೆ—ಧ್ಯಾನದಲ್ಲಿ ಮುಳುಗಿರುವಾಗ ಶ್ರೀ ವೇಂಕಟೇಶನ ಭುವನಮೋಹಕವಾದ ದಿವ್ಯಮಂಗಳವಿಗ್ರಹದ ನೆನಪುಂಟಾಗು ವುದು. ಒಟ್ಟಿಗೆ ಸಂಚರಿಸುತ್ತಿರುವ ಯಜ್ಞದತ್ತ ದೇವದತ್ತರಲ್ಲಿ ಒಬ್ಬನನ್ನು ನೋಡಿದಾಗ ಇನ್ನೊಬ್ಬನ ನೆನಪು ಉಂಟಾಗುವುದು ನಾಲ್ಕನೆಯದಾದ ಸಾಹಚರ್ಯಕ್ಕೆ ನಿದರ್ಶನ.

೨೦. ಮೊದಲು ಚೆನ್ನಾಗಿ ಅನುಭವಕ್ಕೊಳಗಾದ ಎಲ್ಲವೂ ಸ್ಮೃತಿಗೆ ವಿಷಯವಾಗುವುದೆಂಬುದು ನಿಯಮ. ಆದರೆ ಕೆಲವು ಸಲ ಬಹಳ ದೀರ್ಘ ವಾದ ಕಾಲದ ಅಂತರದಿಂದಲೂ ಮತ್ತೆ ರೋಗವೇ ಮೊದಲಾದುವುಗಳಿಂದಲೂ ಸಂಸ್ಕಾರವು ಅಳಿಸಿ ಹೋಗುವುದರಿಂದ ಸ್ಮೃತಿ ಉಂಟಾಗುವುದಿಲ್ಲ.

೨೧ ಪ್ರತ್ಯಕ್ಷದಲ್ಲಿ ಸ್ಮೃತಿಯು ಅಂತರ್ಭವಿಸುವಂತೆಯೇ 'ಇವನೇ ಆ ದೇವದತ್ತನು' ಎಂಬ ಪ್ರತ್ಯಭಿಜ್ಞೆಯೂ ಪ್ರತ್ಯಕ್ಷದಲ್ಲಿಯೇ ಸೇರಿಹೋಗು ತ್ತದೆ.[17] ನಮ್ಮ ಸಿದ್ಧಾಂತದಲ್ಲಿ ಅಭಾವವೂ ಮತ್ತೊಂದು ಬಗೆಯ ಭಾವ ರೂಪವೇ ಆದ ಕಾರಣ[18] ಅದರ ಜ್ಞಾನವೂ ಪ್ರತ್ಯಕ್ಷದಲ್ಲಿಯೇ ಅಂತರ್ಭವಿಸು

ಅಭಾವಸ್ಯ ಭಾವಾಂತರರೂಪತ್ವಾತ್ ತಜ್ಞಾನಸ್ಯಾಪಿ ಪ್ರತ್ಯಕ್ಷೇಽಂತರ್ಭಾವಃ । ಭೂತಲೇ ಘಟಾತ್ಯಂತಾಭಾವೋ ಭೂತಲಂ ಏವ । ಘಟ ಪ್ರಾಗಭಾವೋ ನಾಮ ಮೃದೇವ । ಘಟಧ್ವಂಸಶ್ಚ ಕಪಾಲಮೇವ ।

೨೨. ಪ್ರಾಯಃ ಪುರುಷೇಣ ಅನೇನ ಭವಿತವ್ಯಂ ಇತ್ಯೇತದೂಹಃ। ಪುರಃ ಕಿಂ ಸಂಜ್ಞಕೋಽಯಂ ವೃಕ್ಷ ಇತಿ ಅನಧ್ಯವಸಾಯೋ ಜ್ಞಾನಂ ಸಂಶಯ ಉಕ್ತಃ। ಏತಯೋರಪಿ ಪ್ರತ್ಯಕ್ಷೇಽಂತರ್ಭಾವಃ । ಪುಣ್ಯಪುರುಷನಿಷ್ಠಾ ಪ್ರತಿಭಾಪಿ ಪ್ರತ್ಯಕ್ಷೇಽಂತರ್ಗತಾ ।

೨೩. ಸರ್ವಂ ವಿಜ್ಞಾನಂ ಯಥಾರ್ಥಮಿತಿ ವೇದಾಂತವಿದಾಂ ಮತಮಿತ್ಯುಕ್ತತ್ವಾತ್, ಭ್ರಮಾದಿಪ್ರತ್ಯಕ್ಷ ಜ್ಞಾನಂ ಯಥಾರ್ಥಮೇವ ।

೨೪. ಅಖ್ಯಾತ್ಯಾತ್ಮಖ್ಯಾತ್ಯನಿರ್ವಚನೀಯತಾಖ್ಯಾತ್ಯನ್ಯಥಾಖ್ಯಾತ್ಯಸತ್ ಖ್ಯಾತಿ ವಾದಿನೋ ನಿರಸ್ಯ ಸತ್ ಖ್ಯಾತಿ ಪಕ್ಷ ಸ್ವೀಕಾರಾತ್ ।

---

ವುದು. ಭೂತಲದಲ್ಲಿ ಮಡಕೆಯ ಅತ್ಯಂತಾಭಾವವೆಂದರೆ ಭೂತಲವೇ. ಮಡಕೆಯ ಪ್ರಾಗಭಾವ ಎಂದರೆ ಮಣ್ಣೇ, ಘಟದ ಪ್ರಧ್ವಂಸಾಭಾವವೆಂದರೆ ಕಪಾಲವೇ.

೨೨ 'ಪ್ರಾಯಶಃ ಇದು ಪುರುಷನೇ ಆಗಿರಬೇಕು' ಎಂದು ತರ್ಕಿಸುವುದೇ ಊಹೆ. 'ನನ್ನ ಮುಂದಿರುವ ಈ ವೃಕ್ಷವು ಯಾವುದು?' ಎಂಬಲ್ಲಿ ಸಂಭವಿಸುವ ನಿಶ್ಚಯಾತ್ಮಕವಲ್ಲದ ಜ್ಞಾನವು ಸಂಶಯವೆಂದು ಹೇಳಲಾಗಿದೆ. ಇವೆರಡೂ ಪ್ರತ್ಯಕ್ಷದಲ್ಲಿಯೇ ಸೇರಿಹೋಗುವುವು. ಪುಣ್ಯಪುರುಷರಲ್ಲಿ ಕಂಡು ಬರುವ ಪ್ರತಿಭೆಯೂ ಸಹ ಪ್ರತ್ಯಕ್ಷದಲ್ಲಿಯೇ ಸೇರುತ್ತದೆ.

೨೩. ಎಲ್ಲ ಜ್ಞಾನವೂ ಯಥಾರ್ಥವಾದುದು ಎಂಬುದೇ ವೇದಾಂತಗಳನ್ನರಿತವರ ಮತವೆಂದು ಹೇಳುವ ಕಾರಣ ಭ್ರಮೆಯೇ ಮೊದಲಾದ ಪ್ರತ್ಯಕ್ಷ ಜ್ಞಾನವೂ ಯಥಾರ್ಥವೇ ಆದುದಾಗಿದೆ.[19]

೨೪. ಅಖ್ಯಾತಿ, ಆತ್ಮಖ್ಯಾತಿ, ಅನಿರ್ವಚನೀಯ ತಾಖ್ಯಾತಿ, ಅನ್ಯಥಾಖ್ಯಾತಿ ಅಸತ್ ಖ್ಯಾತಿ ವಾದಿಗಳನ್ನು ಖಂಡಿಸಿ[20] ಸತ್ ಖ್ಯಾತಿ ಪಕ್ಷವನ್ನು ಅಂಗೀಕರಿಸಿರುವುದೂ ಇದಕ್ಕೆ ಕಾರಣ.

೨೫ ಸತ್‌ಖ್ಯಾತಿರ್ನಾಮ ವಿಷಯಸ್ಯ ಸತ್ಯತ್ವಮ್ । ತರ್ಹಿ ಭ್ರಮತ್ವಂ ಕಥಮ್? ಇತಿ ಚೇತ್, ವಿಷಯವ್ಯವಹಾರಬಾಧಾತ್ ಭ್ರಮತ್ವಂ । ತದುಪಪಾದಯಾಮಃ—ಪಂಚೀಕರಣಪ್ರಕ್ರಿಯಯಾ ಪೃಥಿವ್ಯಾದಿಷು ಸರ್ವತ್ರ ಸರ್ವಭೂತಾನಾಂ ವಿದ್ಯಮಾನತ್ವಾತ್ । ಅತ ಏವ ಶುಕ್ತಿಕಾದೌ ರಜತಾಂಶಸ್ಯ ವಿದ್ಯಮಾನತ್ವಾತ್ ಜ್ಞಾನವಿಷಯಸ್ಯ ಸತ್ಯತ್ವಮ್ । ತತ್ರ ರಜತಾಂಶಸ್ಯ ಸ್ವಲ್ಪತ್ವಾತ್ ತತ್ರ ನ ವ್ಯವಹಾರ ಇತಿ ತತ್ ಜ್ಞಾನಂ ಭ್ರಮಃ । ಶುಕ್ತ್ಯಂಶ ಭೂಯಸ್ತ್ವಜ್ಞಾನಾತ್ ಭ್ರಮನಿವೃತ್ತಿಃ ।

೨೬ ಸ್ವಪ್ನಾದಿಜ್ಞಾನಂ ತು ಸತ್ಯಮೇವ । ತತ್ತತ್ಪುರುಷಾನುಭಾವ್ಯತಯಾ ತತ್ತತ್ಕಾಲಾವಸಾನಾನ್ ರಥಾದೀನ್ ಪರಮಪುರುಷಃ ಸೃಜತೀತಿ ಶ್ರುತ್ಯಾವಗಮ್ಯತೇ ।

---

೨೫ ಯಾವ ವಿಷಯವನ್ನು ಕುರಿತ ಜ್ಞಾನ ಉಂಟಾಗುವುದೋ ಆ ವಿಷಯ ಸತ್ಯವಾದುದೆಂದು ಅಂಗೀಕರಿಸುವುದು ಸತ್‌ಖ್ಯಾತಿ. ಹಾಗಾದರೆ ಭ್ರಮೆಯು ಹೇಗೆ ಸಂಭವಿಸುವುದು ಎಂದು ಕೇಳಿದರೆ ಒಂದು ವಿಷಯದ ವ್ಯವಹಾರಕ್ಕೆ ಬಾಧೆ ಉಂಟಾಗುವುದೇ ಭ್ರಮೆಯುಳ್ಳದೆಂದು ಉತ್ತರಿಸುತ್ತೇವೆ. ಇವನ್ನೇ ಹೀಗೆ ವಿವರಿಸುತ್ತೇವೆ ಪಂಚೀಕರಣ ಪ್ರಕ್ರಿಯೆಯಿಂದ ಪೃಥಿವಿಯೇ ಮೊದಲಾದ ಪದಾರ್ಥಗಳಲ್ಲಿ ಎಲ್ಲದರಲ್ಲಿಯೂ ಎಲ್ಲಾ ಪಂಚಭೂತಗಳ ಅಂಶಗಳು ಇವೆ ಆದುದರಿಂದಲೇ ಕಪ್ಪೆಯ ಚಿಪ್ಪೇ ಮೊದಲಾದುವುಗಳಲ್ಲಿ ಬೆಳ್ಳಿಯ ಅಂಶಗಳೂ ಇರುವುದರಿಂದ ರಜತಜ್ಞಾನಕ್ಕೆ ಅದು ಸತ್ಯವಾದ ವಿಷಯವಾಗಿದೆ. ಅಲ್ಲಿ ರಜತಾಂಶವು ಅತ್ಯಲ್ಪವಾಗಿದ್ದು ಅದು ವ್ಯವಹಾರಕ್ಕೆ ಬರದ ಕಾರಣ ಚಿಪ್ಪಿನಲ್ಲಿ ರಜತಜ್ಞಾನ ಭ್ರಮೆ ಎನ್ನಿಸುತ್ತದೆ. ಅಲ್ಲಿ ಶುಕ್ತಿಕೆಯ ಅಂಶ ಅತ್ಯಧಿಕವಾಗಿದೆ ಎಂಬ ಜ್ಞಾನದಿಂದ ಆ ಭ್ರಮೆ ಕಳಚಿಹೋಗುತ್ತದೆ

೨೬ ಕನಸಿನಲ್ಲುಂಟಾಗುವ ಜ್ಞಾನವೂ ನಿಜವಾದುದೇ ಆಯಾ ಪುರುಷರಿಂದಲೇ ಅನುಭವಿಸಲ್ಪಡುವುದಕ್ಕಾಗಿ ಅಷ್ಟು ಕಾಲ ಮಾತ್ರ ಇರುವ ರಥವೇ ಮೊದಲಾದುವುಗಳನ್ನು ಪರಮ ಪುರುಷನು (ಅವರವರ ಕರ್ಮಕ್ಕನುಸಾರವಾಗಿ) ಸೃಷ್ಟಿ ಮಾಡುತ್ತಾನೆಂದು ಶ್ರುತಿಯಿಂದ ತಿಳಿದುಬರುತ್ತದೆ

೨೭. "ಪೀತಃ ಶಂಖಃ" ಇತ್ಯಾದೌ ನಯನವರ್ತಿಪಿತ್ತದ್ರವ್ಯ ಸಂಯುಕ್ತಾ ನಾಯನರಶ್ಮಯಃ ಶಂಖಾದಿಭಿಃ ಸಹ ಸಂಯುಜ್ಯಂತೇ । ತತ್ರ ಪಿತ್ತಗತಪೀತಿಮಾಭಿಭೂತಃ ಶಂಖಗತಶುಕ್ಲಿಮಾ ನ ಗೃಹ್ಯತೇ । ಅತಃ ಸುವರ್ಣಾನುಲಿಪ್ತಶಂಖವತ್ "ಪೀತಃ ಶಂಖಃ" ಇತಿ ಪ್ರತೀಯತೇ ಸೂಕ್ಷ್ಮತ್ವಾತ್ ಪೀತಿಮಾ ಸ್ವನಯನನಿಷ್ಕ್ರಾಂತತಯಾ ಸ್ವೇನೈವ ಗೃಹ್ಯತೇ, ನ ತು ಅನ್ಯೈಃ ।

೨೮ ಜಪಾಕುಸುಮಸಮೀಪವರ್ತಿ ಸ್ಫಟಿಕಮಣಿರಪಿ "ರಕ್ತ" ಇತಿ ಗೃಹ್ಯತೇ । ತತ್ ಜ್ಞಾನಂ ಸತ್ಯಮೇವ ।

೨೯. ಮರೀಚಿಕಾಯಾಂ ಜಲಜ್ಞಾನಮಪಿ ಪಂಚೀಕರಣಪ್ರಕ್ರಿಯಯಾ ಪೂರ್ವೋಕ್ತವದುಪಪದ್ಯತೇ । ಪಂಚೀಕರಣಪ್ರಕ್ರಿಯಾ ತು ಉತ್ತರತ್ರ ವಕ್ಷ್ಯತೇ ।

---

೨೭. 'ಶಂಖವು ಹಳದಿಯಾಗಿದೆ' ಎಂಬ ಪ್ರತ್ಯಕ್ಷ ಜ್ಞಾನಕ್ಕೆ ವಿವರಣೆ ಹೀಗೆ: ಇಲ್ಲಿ ಕಣ್ಣಿನಲ್ಲಿರುವ ಪಿತ್ತ ದ್ರವ್ಯದೊಡನೆ ಚೆನ್ನಾಗಿ ಕೂಡಿಕೊಂಡ ಕಣ್ಣಿನ ರಶ್ಮಿಗಳು ಶಂಖವೇ ಮೊದಲಾದವುಗಳೊಡನೆ ಸಂಯೋಗ ಹೊಂದುತ್ತವೆ. ಆಗ ಶಂಖದ ಬಿಳುಪು ಪಿತ್ತಗತವಾದ ಹಳದಿಯಿಂದ ಆವೃತವಾಗುತ್ತದೆ. ಆ ಕಾರಣ ಶಂಖದ ಬಿಳುಪು ಗ್ರಹಿಸಲ್ಪಡುವುದಿಲ್ಲ. ಆದ್ದರಿಂದಲೇ ಚಿನ್ನದಿಂದ ಬಳಿಯಲ್ಪಟ್ಟ ಶಂಖದಂತೆ ಆಗಿ 'ಶಂಖ ಹಳದಿಯಾಗಿದೆ' ಎಂಬ ಪ್ರತ್ಯಕ್ಷ ಜ್ಞಾನ ಉದಯಿಸುತ್ತದೆ. ತನ್ನ ಕಣ್ಣಿನಿಂದ ಹೊರಡುವ ಹಳದಿಯ ಬಣ್ಣ ಬಹಳ ಸೂಕ್ಷ್ಮವಾಗಿರುವುದರಿಂದ ಆ ಬಣ್ಣ ತನ್ನಿಂದಲೇ ಗ್ರಹಿಸಲ್ಪಡುತ್ತದೆ; ಇತರರಿಂದ ಗ್ರಹಿಸಲ್ಪಡುವುದಿಲ್ಲ.

೨೮. ಹೀಗೆಯೇ ಕೆಂಬಣ್ಣದ ಜಪಾಕುಸುಮದ ಸಮೀಪದಲ್ಲಿರುವ ಸ್ವಚ್ಛವಾದ ಸ್ಫಟಿಕ ಮಣಿಯೂ 'ಕೆಂಪಾಗಿ' ಗ್ರಹಿಸಲ್ಪಡುತ್ತದೆ. ಆ ಪ್ರತ್ಯಕ್ಷ ಜ್ಞಾನವೂ ಯಥಾರ್ಥವಾದುದೇ.

೨೯. ಬಿಸಿಲುಗುದುರೆಯಲ್ಲುಂಟಾಗುವ ಜಲಜ್ಞಾನವೂ ಮೇಲೆ ಹೇಳಿದ ಪಂಚೀಕರಣ ಪ್ರಕ್ರಿಯೆಯ ಕಾರಣ ಉಪಪನ್ನವಾಗುತ್ತದೆ.[21] ಪಂಚೀಕರಣ ಪ್ರಕ್ರಿಯೆಯನ್ನು ಮುಂದೆ ವಿವರಿಸುತ್ತೇವೆ

೩೦. ದಿಗ್ಭ್ರಮೋऽಪಿ ತಥೈವ । ದಿಶಿ ದಿಗಂತರಸ್ಯ ವಿದ್ಯಮಾನತ್ವಾತ್ ಅವಚ್ಛೇದಕಮಂತರೇಣ ದಿಗಿತಿ ದ್ರವ್ಯಾಂತರಾನಂಗೀಕಾರಾಚ್ಚ ।

೩೧. ಅಲಾತಚಕ್ರಾದೌ ತು ಶೈಘ್ರ್ಯಾತ್ತದಂತರಾಲಾಗ್ರಹಣಾತ್ ತತ್ತದ್ದೇಶ–ಸಂಯುಕ್ತ–ತತ್ತದ್ವಸ್ತುನ ಏವ ಚಕ್ರಾಕಾರೇಣ ಗ್ರಹಣಮ್ । ತದಪಿ ಸತ್ಯಮೇವ ।

೩೨. ದರ್ಪಣಾದಿಷು ನಿಜಮುಖಾದಿಪ್ರತೀತಿರಪಿ ಯಥಾರ್ಥಾ । ದರ್ಪಣಾದಿಪ್ರತಿಹತಗತಯೋಃ ನಾಯನರಶ್ಮ್ಯೋಃ ದರ್ಪಣಾದಿಗ್ರಹಣ

---

೩೦. ಒಂದು ದಿಕ್ಕನ್ನು ಮತ್ತೊಂದು ದಿಕ್ಕೆಂದು ತಿಳಿಯುವ ದಿಗ್ಭ್ರಮೆಯೂ ಹಾಗೆಯೇ ಯಥಾರ್ಥವಾದುದು. ದಿಕ್ಕೊಂದರಲ್ಲಿ ಮತ್ತೊಂದು ದಿಕ್ಕಿರುವುದ ರಿಂದಲೂ ದಿಗ್ವಿಭಾಗಮಾಡುವ (ಅವಚ್ಛೇದಕ) ಉಪಾಧಿಗಳನ್ನು ಬಿಟ್ಟರೆ ದಿಕ್ಕೆಂಬುವ ಬೇರೆ ಪದಾರ್ಥವೊಂದನ್ನು ನಾವು ಅಂಗೀಕರಿಸದೆ ಇರುವುದ ರಿಂದಲೂಇದು ಹೀಗೆಯೇ ಸರಿ.[22]

೩೧. (ಪಂಜನ್ನು ವೇಗವಾಗಿ ತಿರುಗಿಸುವಾಗ ಕಾಣುವ) ಪಂಜಿನ ಚಕ್ರವೇ ಮೊದಲಾದುವುಗಳಲ್ಲಿಯಾದರೋ ಪಂಜಿನ ಚಕ್ರದಂತೆಯೇ ಪ್ರತ್ಯಕ್ಷ ಗ್ರಹಣವಾಗುತ್ತದೆ. ಚಲನೆಯ ಶೀಘ್ರ ಗತಿಯ ಕಾರಣದಿಂದಲೂ, ಎರಡು ಬಿಂದುಗಳ ನಡುವಣ ಪ್ರದೇಶವನ್ನು ಗ್ರಹಿಸುವುದಕ್ಕಾಗದೆ ಇರುವುದರಿಂದಲೂ ಒಂದೊಂದು ಬಿಂದುವಿನೊಡನೆಯೂ ಸಂಯುಕ್ತವಾದ ಆಯಾ ವಸ್ತುವೇ ಚಕ್ರಾಕಾರವಾಗಿ ತೋರುತ್ತದೆ. ಆದುದರಿಂದ ಆ ಪ್ರತ್ಯಕ್ಷವೂ ಸತ್ಯವಾದುದೇ.

೩೨. ಕನ್ನಡಿಯೇ ಮೊದಲಾದುವುಗಳಲ್ಲಿ ಕಾಣುವ ಮುಖವೇ ಮೊದಲಾದುವುಗಳ ಜ್ಞಾನವೂ ಯಥಾರ್ಥವೇ ಆದುದು. ಕನ್ನಡಿಯೇ ಮೊದಲಾದುವುಗಳಿಂದ ತಡೆಯಲ್ಪಟ್ಟ ಗತಿಯುಳ್ಳ ಕಣ್ಣಿನ ಕಿರಣಗಳು ಕನ್ನಡಿಯೇ ಮೊದಲಾದುವುಗಳೊಡನೆ ತಮ್ಮ ಮುಖವೇ ಮೊದಲಾದುವನ್ನೂ ಗ್ರಹಿಸುತ್ತವೆ. ಅಲ್ಲಿಯೂ ಸಹ ಈ ಗ್ರಹಣಕ್ರಿಯೆ ಅತಿ ಶೀಘ್ರವಾಗಿ ಆಗುವ ಕಾರಣದಿಂದಲೂ, ದರ್ಪಣ ಗ್ರಹಣ ಮತ್ತು ಮುಖ ಗ್ರಹಣಗಳ ಅಂತರಾಳ

ಪೂರ್ವಕಂ ನಿಜಮುಖಾದಿ ಗೃಹ್ಣಂತಿ । ತತ್ರಾಪ್ಯತಿಶೈಘ್ರ್ಯಾದಂತರಾಲಾಗ್ರಹಣಾತ್ ತಥಾ ಪ್ರತೀತಿಃ ।

೩೩. ದ್ವಿಚಂದ್ರಜ್ಞಾನಾದಾವಪಿ ಅಂಗುಲ್ಯವಷ್ಟಂಭತಿಮಿರಾದಿಭಿಃ ನಯನತೇಜೋಗತಿಭೇದೇನ ಸಾಮಗ್ರೀಭೇದಾತ್ ಸಾಮಗ್ರೀದ್ವಯಮ್ ಅನ್ಯೋನ್ಯನಿರಪೇಕ್ಷಂ ಚಂದ್ರದ್ವಯಗ್ರಹಣೇ ಹೇತುರ್ಭವತಿ । ಸಾಮಗ್ರೀದ್ವಯಂ ಪಾರಮಾರ್ಥಿಕಂ, ತೇನ ದ್ವಿಚಂದ್ರಜ್ಞಾನಂ ಭವತಿ ।

೩೪. ಅತಃ ಸರ್ವಂ ಜ್ಞಾನಂ ಸತ್ಯಂ ಸವಿಶೇಷವಿಷಯಂ ಚ । ನಿರ್ವಿಶೇಷ ವಸ್ತುನೋಽಗ್ರಹಣಾತ್ ।

೩೫. ಏವಂ ಭೂತಂ ಪ್ರತ್ಯಕ್ಷಂ ಪ್ರಥಮತೋ ಭೇದಮೇವ

---

ವನ್ನು ಗ್ರಹಿಸುವುದಕ್ಕಾಗದೆ ಇರುವುದರಿಂದಲೂ ಕನ್ನಡಿಯೇ ಮೊದಲಾದುವಲ್ಲಿ ಮುಖವು ಇರುವಂತೆ ಗ್ರಹಿಕೆಯಾಗುತ್ತದೆ.

೩೩. ದ್ವಿಚಂದ್ರಜ್ಞಾನದಲ್ಲಿ ಆಗುವುದು ಇದು : ಕಣ್ಣನ್ನು ಬೆರಳಿಂದ ಅದುಮುವುದರಿಂದಲೂ ಹಾಗೂ ಕಣ್ಣಿನ ತಿಮಿರದೋಷದಿಂದಲೂ ಕಣ್ಣಿನಿಂದ ಹೊರಡುವ ಕಿರಣಗಳ ಗತಿ ಬೇರೆ ಬೇರೆಯಾಗಿ ಭಿನ್ನ ಭಿನ್ನವಾದ ಎರಡು ದೃಷ್ಟಿ ಸಾಮಗ್ರಿಗಳುಂಟಾಗುತ್ತವೆ. ಹೀಗೆ ಅನ್ಯೋನ್ಯನಿರಪೇಕ್ಷವಾದ ಈ ಎರಡು ಸಾಮಗ್ರಿಗಳು ಎರಡು ಚಂದ್ರನನ್ನು ಕಾಣುವುದಕ್ಕೆ ಕಾರಣ. ಈ ಸಾಮಗ್ರೀದ್ವಯ ಯಥಾರ್ಥವಾದುದು. ಆದ್ದರಿಂದಲೇ ದ್ವಿಚಂದ್ರಜ್ಞಾನ ಪಾರಮಾರ್ಥಿಕವಾಗಿ ಆಗುತ್ತದೆ.

೩೪. ಆದ್ದರಿಂದ ಜ್ಞಾನವೆಲ್ಲವೂ ಸತ್ಯವಾದುದೂ ಮತ್ತು ಸವಿಶೇಷವಾದ ವಸ್ತುವನ್ನು ವಿಷಯವನ್ನಾಗಿ ಹೊಂದಿದುದೂ ಆಗಿದೆ. ಏಕೆಂದರೆ ನಿರ್ವಿಶೇಷ ವಸ್ತುವನ್ನು ಯಾವಾಗಲೂ ಗ್ರಹಿಸಲಾಗುವುದಿಲ್ಲ.

೩೫. ಈ ಬಗೆಯ ಪ್ರತ್ಯಕ್ಷವು ನೊಟ್ಟಮೊದಲಾಗಿ ಭೇದವನ್ನೇ ಗ್ರಹಿಸುತ್ತದೆ. ಭೇದವೆಂಬುದಕ್ಕೆ ವ್ಯವಹಾರದೆಶೆಯಲ್ಲಿ ಪ್ರತಿ ಯೋಗಿಯ

ಗೃಹ್ಣಾತಿ । ಭೇದ ಇತಿ ವ್ಯವಹಾರೇತು ಪ್ರತಿಯೋಗ್ಯಪೇಕ್ಷಾ ನ ಸ್ವರೂಪೇ । ತೇನ ಅನವಸ್ಥಾನ್ಯೋನ್ಯಾಶ್ರಯದೋಷೋಪಿ ನಾಸ್ತಿ । ಉಪರ್ಯುಪರಿ ಅಪೇಕ್ಷಾಽನವಸ್ಥಾ । ಪರಸ್ಪರಾಪೇಕ್ಷೋಽನ್ಯೋನ್ಯಾಶ್ರಯಃ ।

೩೬. ನನು "ದಶಮಸ್ತ್ವಮಸಿ" ಇತ್ಯೇತದಪಿ ಪ್ರತ್ಯಕ್ಷಂ ಕಿಂ ನಸ್ಯಾತ್? ಇತಿ ಚೇತ್ ನ । "ತ್ವಂ" ಇತ್ಯೇತಸ್ಯ ಪ್ರತ್ಯಕ್ಷತ್ವೇಽಪಿ "ದಶಮೋಽಹಮ್" ಇತ್ಯಸ್ಯ ವಾಕ್ಯಜನ್ಯತ್ವಾತ್ । ಯದಿ "ದಶಮೋಽಹಂ" ಇತ್ಯಸ್ಯ ಪ್ರತ್ಯಕ್ಷ ವಿಷಯತ್ವಂ ತರ್ಹಿ "ಧರ್ಮವಾನ್ ತ್ವಮಸಿ" ಇತ್ಯೇತಸ್ಯಾಪಿ ಪ್ರತ್ಯಕ್ಷತ್ವಂ ಸ್ಯಾತ್ । ಅಂಗೀಕಾರೇ ಅತಿಪ್ರಸಂಗಾತ್ । ಅತ ಏವ "ತತ್ತ್ವಮಸಿ" ಇತಿ ವಾಕ್ಯಸ್ಯ ನಾಪರೋಕ್ಷ ಜ್ಞಾನಜನಕತ್ವಮ್ ।

೩೭. ಏತೇನ ಪ್ರತ್ಯಕ್ಷ ಪ್ರಮಾಕರಣಂ ಪ್ರಮಾಣಮ್ । ಪ್ರಮಾ ಚ

---

ಅಪೇಕ್ಷೆ ಇರುತ್ತದೆ. ಆದರೆ ಅದಕ್ಕೆ ತನ್ನ ಸ್ವರೂಪದಲ್ಲಿ ಪ್ರತಿ ಯೋಗಿಯ ಅಪೇಕ್ಷೆ ಇಲ್ಲ. ಆದ್ದರಿಂದಲೇ ಅನವಸ್ಥೆ ಅಥವಾ ಅನ್ಯೋನ್ಯಾಶ್ರಯ ದೋಷಕ್ಕೆ ಇಲ್ಲಿ ಅವಕಾಶವಿಲ್ಲ. ಒಂದಕ್ಕೆ ಮತ್ತೊಂದು ಅದಕ್ಕೆ ಮಗುದೊಂದು ಹೀಗೆ ಮೇಲೆ ಮೇಲೆ ಅಪೇಕ್ಷೆ ಇರುವುದು ಅನವಸ್ಥೆ. ಇದಕ್ಕೆ ಅದರ, ಅದಕ್ಕೆ ಇದರ ಪರಸ್ಪರಾಪೇಕ್ಷೆ ಇರುವುದು ಅನ್ಯೋನ್ಯಾಶ್ರಯ.[23]

೩೬. 'ನೀನು ಹತ್ತನೆಯವನಾಗಿದ್ದೀಯೆ' ಎಂಬುದೂ ಏಕೆ ಪ್ರತ್ಯಕ್ಷವಾಗಬಾರದು[24] ಎಂದರೆ ಹಾಗಾಗುವುದಿಲ್ಲವೆನ್ನುತ್ತೇವೆ. ಏಕೆಂದರೆ 'ನೀನು' ಎಂಬುವುದು ಪ್ರತ್ಯಕ್ಷಕ್ಕೊಳಗಾದರೂ 'ನಾನು ಹತ್ತನೆಯವನು' ಎಂಬ ಜ್ಞಾನವು ವಾಕ್ಯದಿಂದ ಹುಟ್ಟಿದ ಜ್ಞಾನವಾಗಿದೆ. 'ನಾನು ಹತ್ತನೆಯವನು' ಎಂಬ ಜ್ಞಾನ ಒಂದು ವೇಳೆ ಪ್ರತ್ಯಕ್ಷಕ್ಕೆ ವಿಷಯವಾಗುವುದಾದರೆ 'ನೀನು ಧರ್ಮವಂತ' ಎಂಬ ಜ್ಞಾನಕ್ಕೂ ಪ್ರತ್ಯಕ್ಷತ್ವ[25] ಉಂಟಾಗಬೇಕಾಗುತ್ತದೆ. ಹಾಗೆ ಒಪ್ಪುವುದು ಅತಿ ಪ್ರಸಂಗಕ್ಕವಕಾಶ ನೀಡುತ್ತದೆ. ಆದ್ದರಿಂದಲೇ 'ತತ್ತ್ವಮಸಿ' ಎಂಬ ವಾಕ್ಯ ಪ್ರತ್ಯಕ್ಷಜ್ಞಾನವನ್ನುಂಟುಮಾಡುವುದಿಲ್ಲ.

೩೭. 'ಪ್ರತ್ಯಕ್ಷ ಪ್ರಮೆಯನ್ನುಂಟುಮಾಡುವುದು ಪ್ರಮಾಣ. ಅತ

ಆತ್ಮ ಚೈತನ್ಯಮೇವ। ಚೈತನ್ಯಂ ಚ ತ್ರಿವಿಧಮ್–ಅಂತಃ ಕರಣಾವಚ್ಛಿನ್ನ ಚೈತನ್ಯಂ ಅಂತಃಕರಣ ವೃತ್ತ್ಯವ ಚ್ಛಿನ್ನ ಚೈತನ್ಯಂ, ವಿಷಯಾವ ಚ್ಛಿನ್ನ ಚೈತನ್ಯಂ ಚೇತಿ। ಯದಾ ತ್ರಯಾಣಾಮೈಕ್ಯಂ ತದಾ ಸಾಕ್ಷಾತ್ಕಾರಃ। ಸೋಽಪಿ ನಿರ್ವಿಶೇಷ ವಿಷಯ ಏವ ಅಭೇದಮೇವ ಗೃಹ್ಣಾತೀತ್ಯಾದಿ ಕುದೃಷ್ಟಿ ಕಲ್ಪನಾ ನಿರಸ್ತಾ।

೩೮. ನಿರ್ವಿಕಲ್ಪಕಂ ತು ನಾಮಜಾತ್ಯಾದಿ–ಯೋಜನಾಹೀನಂ ವಸ್ತು ಮಾತ್ರಾವಗಾಹಿ ಕಿಂಚಿದಿದಮಿತ್ಯಾದಿ ನೈಯಾಯಿಕಮತಮಪಿ ನಿರಸ್ತಮ್।

೩೯. ನನು "ಕಾಣಾದಂ ಪಾಣಿನೀಯಂ ಚ ಸರ್ವಶಾಸ್ತ್ರೋಪಕಾರಕಮ್" ಇತ್ಯುಕ್ತತ್ವಾತ್ ಕಥಂ ಗೌತಮಮತನಿರಾಸಃ? ಇತಿ ಚೇತ್, ಉಚ್ಯತೇ।

---

ಚೈತನ್ಯವೇ ಪ್ರಮೆ. ಚೈತನ್ಯವಾದರೋ ಅಂತಃಕರಣದಿಂದ ಅವಚ್ಛಿನ್ನವಾದ ಚೈತನ್ಯ, ಅಂತಃಕರಣ ವೃತ್ತ್ಯವಚ್ಛಿನ್ನಚೈತನ್ಯ ಮತ್ತು ವಿಷಯಾವಚ್ಛಿನ್ನ ಚೈತನ್ಯ ಎಂದು ಮೂರು ವಿಧ. ಇವು ಮೂರೂ ಏಕೀಭವಿಸಿದಾಗ ಸಾಕ್ಷಾತ್ಕಾರವುಂಟಾಗುತ್ತದೆ. ಆ ಸಾಕ್ಷಾತ್ಕಾರವೂ ನಿರ್ವಿಶೇಷವಾದ ವಸ್ತುವನ್ನು ವಿಷಯವನ್ನಾಗಿ ಹೊಂದಿದೆ. ಅದು ಅಭೇದವನ್ನೇ ಗ್ರಹಿಸುತ್ತದೆ' ಎಂಬ ಕುದೃಷ್ಟಿ ಕಲ್ಪನೆಯು[26] ಮೇಲೆ ಹೇಳಿದ ನಿರೂಪಣೆಯಿಂದ ನಿರಾಕೃತವಾಗಿದೆ.

೩೮. ಇದರಿಂದ— ನಿರ್ವಿಕಲ್ಪಕವೆಂಬುದು ಹೆಸರು, ಜಾತಿ ಮುಂತಾದ ಯೋಜನೆಗಳಿಂದ ಬಿಡಲ್ಪಟ್ಟ ವಸ್ತುಮಾತ್ರವನ್ನು ಕುರಿತ 'ಇದು ಯಾವುದೋ ಒಂದು' ಎಂಬ ಜ್ಞಾನಮಾತ್ರವೆಂಬ ನಯ್ಯಾಯಿಕರ ಮತವೂ[27] ಖಂಡಿಸಲಾಗಿದೆ.

೩೯. 'ಕಣಾದರ[28] ಮತ್ತು ಪಾಣಿನಿಗಳ[29] ಶಾಸ್ತ್ರಗಳು ಎಲ್ಲ ಶಾಸ್ತ್ರಗಳಿಗೂ ಉಪಕಾರಕಗಳಾಗಿವೆ' ಎಂದು ಹೇಳುವಲ್ಲಿ ಗೌತಮ[30] ಮತವನ್ನು ಖಂಡಿಸಬಹುವುದೇ ಎಂದು ಆಕ್ಷೇಪಿಸಿದರೆ ಹೀಗೆ ಉತ್ತರಿಸುತ್ತೇವೆ. ನಾವು ನ್ಯಾಯದರ್ಶನವನ್ನು ಸಮಗ್ರವಾಗಿ ನಿರಾಕರಣಮಾಡುವುದಿಲ್ಲ. ಇದರಲ್ಲಿ ಯುಕ್ತಿಯುಕ್ತವಾದುದನ್ನು ನಾವು ಸ್ವೀಕಾರಮಾಡುತ್ತೇವೆ–ಬೇರೆಯವರು ಕಟ್ಟಿಸಿದ ಕೆರೆಯಿಂದ ನೀರನ್ನು ಸ್ವೀಕರಿಸುವಂತೆ. ಆದರೆ ಕೆರೆಯಲ್ಲಿರುವ ಕೆಸರೂ ಸಹ ತೆಗೆದುಕೊಳ್ಳಲ್ಪಡುವುದಿಲ್ಲವಷ್ಟೇ?

ಯಾವದಿಹ ಯುಕ್ತಿಯುಕ್ತಂ ತಾವತ್ ಸ್ವೀಕ್ರಿಯತೇ । ಪರಕಲ್ಪಿತ ತಟಾಕೋಪಜೀವನವತ್ । ನ ಖಲು ತಟಾಕಸ್ಥಃ ಪಂಕೋऽಪಿ ಸ್ವೀಕ್ರಿಯತೇ ।

೪೦. ಅತಃ ಪರಮಾಣುಕಾರಣತ್ವ–ವೇದಪೌರುಷೇಯತ್ವ–ಈಶ್ವರಾನುಮಾನಿಕತ್ವ–ಜೀವವಿಭುತ್ವಾನಿ, ಸಾಮಾನ್ಯಸಮವಾಯವಿಶೇಷಾಣಾಂ ಪದಾರ್ಥತ್ವೇನ ಸ್ವೀಕಾರಃ, ಉಪಮಾನಾದೇಃ ಪೃಥಕ್ ಪ್ರಮಾಣತ್ವಕಲ್ಪನಂ ಸಂಖ್ಯಾಪರಿಮಾಣ–ಪೃಥಕ್ತ್ವ–ಪರತ್ವ–ಅಪರತ್ವ ಗುರುತ್ವ ದ್ರವತ್ವಾದೀನಾಂ ಪೃಥಕ್ ಗುಣತ್ವಕಲ್ಪನಂ, ದಿಶೋऽಪಿ ದ್ರವ್ಯತ್ವಕಲ್ಪನಮಿತ್ಯಾದಿ ಸೂತ್ರಕಾರಾದಿ ವಿರುದ್ಧಾ ಪ್ರಕ್ರಿಯಾ ನಾಸ್ಮಾಭಿಃ ಸ್ವೀಕ್ರಿಯತೇ ಇತಿ ನ ವಿರೋಧಃ ।

ಇತಿ ಶ್ರೀವಾಧೂಲಕುಲತಿಲಕ ಶ್ರೀಮನ್ಮಹಾಚಾರ್ಯಸ್ಯ ಪ್ರಥಮದಾಸೇನ ಶ್ರೀನಿವಾಸದಾಸೇನ ವಿರಚಿತಾಯಾಂ ಯತೀಂದ್ರಮತ ದೀಪಿಕಾಯಾಂ ಪ್ರತ್ಯಕ್ಷ ನಿರೂಪಣಂ ನಾಮ ಪ್ರಥಮೋऽವತಾರಃ

---

೪೦. ಆದ್ದರಿಂದಲೇ ಇವರು ಪ್ರತಿಪಾದಿಸುವ—ಪ್ರಪಂಚಕ್ಕೆ ಪರಮಾಣುಗಳೇ ಕಾರಣವೆನ್ನುವ ಪರಮಾಣು ಕಾರಣವಾದ,[31] ವೇದವು ಪೌರುಷೇಯವೆಂಬ ವಾದ,[32] ಈಶ್ವರನನ್ನು ಅನುಮಾನದಿಂದ ಸ್ಥಾಪಿಸುವ ವಾದ,[33] ಜೀವನು ವಿಭುವೆಂಬ ವಾದ,[34] ಸಾಮಾನ್ಯ, ವಿಶೇಷ, ಸಮವಾಯ ಇವು ಬೇರೆ ಬೇರೆ ಪದಾರ್ಥಗಳೆಂಬ ವಾದ,[35] ಉಪಮಾನವೇ ಮೊದಲಾದುವು ಬೇರೆ ಪ್ರಮಾಣಗಳೆಂದು ಸಮರ್ಥಿಸುವ ವಾದ,[33] ಸಂಖ್ಯಾ, ಪರಿಮಾಣ, ಪೃಥಕ್ತ್ವ, ಪರತ್ವ, ಅಪರತ್ವ, ಗುರುತ್ವ, ದ್ರವತ್ವ ಮುಂತಾದುವುಗಳು ಬೇರೆ ಬೇರೆ ಗುಣಗಳೆಂದು ಸಾರುವ ವಾದ, ದಿಕ್ಕನ್ನು ಒಂದು ದ್ರವ್ಯವೆಂದು ಕಲ್ಪನೆಮಾಡುವ ವಾದ ಇವೇ ಮೊದಲಾದ ಸೂತ್ರಕಾರರೇ ಮೊದಲಾದವರ ಮತಕ್ಕೆ ವಿರುದ್ಧವಾಗಿರುವ ಪ್ರಕ್ರಿಯೆಗಳನ್ನು ನಾವು ಸ್ವೀಕರಿಸದೆ ಇರುವುದರಿಂದ ಯಾವ ವಿರೋಧವೂ ಉಂಟಾಗದು.

ಇಂತು ವಾಧೂಲ ಕುಲತಿಲಕನೂ ಮಹಾಚಾರ್ಯರ ಪ್ರಾಥಮದಾಸನೂ ಆದ ಶ್ರೀನಿವಾಸದಾಸನಿಂದ ವಿರಚಿತವಾದ ಯತೀಂದ್ರ ಮತದೀಪಿಕೆಯಲ್ಲಿ ಪ್ರತ್ಯಕ್ಷ ನಿರೂಪಣವೆಂಬ ಮೊದಲನೆಯ ಅವತಾರ ಮುಗಿದುದು.

### ದ್ವಿತೀಯೋಽವತಾರಃ

## ಅ ನು ಮಾ ನ ಮ್

೧. ಅಥಾನುಮಾನಂ ನಿರೂಪ್ಯತೇ । ವ್ಯಾಪ್ಯಸ್ಯ ವ್ಯಾಪ್ಯತ್ವಾನುಸಂಧಾನಾತ್ ವ್ಯಾಪಕವಿಶೇಷಪ್ರಮಿತಿಃಅನುಮಿತಿಃ । ತತ್ಕರಣಮನುಮಾನಮ್ । ವ್ಯಾಪ್ಯಸ್ಯ ಧೂಮಸ್ಯ ಅಗ್ನಿವ್ಯಾಪ್ಯತ್ವಾನುಸಂಧಾನಾತ್ ವ್ಯಾಪಕವಿಶೇಷಪ್ರಮಿತಿರ್ವಹ್ನಿಪ್ರಮಿತಿಃ ।

೨. ಅನಧಿಕದೇಶಕಾಲನಿಯತಂ ವ್ಯಾಪ್ಯಮ್ । ಅನ್ಯೂನದೇಶಕಾಲವರ್ತಿ ವ್ಯಾಪಕಮ್ । ತದಿದಮವಿನಾಭೂತಂ ವ್ಯಾಪ್ಯಮ್ ; ತತ್ಪ್ರತಿ ಸಂಬಂಧಿ ವ್ಯಾಪಕಮತಿ ।

---

### ಎರಡನೆಯ ಅವತಾರ

## ಅನುಮಾನ

೧. ಈಗ ಅನುಮಾನ ಪ್ರಮಾಣವನ್ನು ನಿರೂಪಿಸುತ್ತೇವೆ. ವ್ಯಾಪ್ಯವಾದುದರ[37] ವ್ಯಾಪ್ತಿಯ ಅನುಸಂಧಾನದಿಂದ ಉಂಟಾಗುವ ವ್ಯಾಪಕ ವಿಶೇಷದ ತತ್ತ್ವಜ್ಞಾನಕ್ಕೆ ಅನುಮಿತಿ ಎಂದು ಹೆಸರು. ಈ ಅನುಮಿತಿಜ್ಞಾನವನ್ನು ಉಂಟುಮಾಡುವುದು ಅನುಮಾನ. ವ್ಯಾಪ್ಯವಾದ ಹೊಗೆ ಅಗ್ನಿಯಿಂದ ವ್ಯಾಪ್ಯವಾಗಿದೆ. ಇದರ ಅನುಸಂಧಾನದಿಂದ ವ್ಯಾಪಕವಾದ ಅಗ್ನಿಯ ಯಥಾರ್ಥಜ್ಞಾನ ಉಂಟಾಗುವುದು. ಇದು ಅಗ್ನಿಯನ್ನು ಕುರಿತ ಪ್ರಮಿತಿಯಾಗಿದೆ.

೨. ಕಾಲ ಮತ್ತು ದೇಶಕ್ಕನ್ವಯಿಸಿದಂತೆ (ವ್ಯಾಪಕಕ್ಕಿಂತ) ನಿಯಮೇನ ಅಧಿಕವಾಗಿಲ್ಲದಿರುವುದು ವ್ಯಾಪ್ಯ. ಕಾಲ ದೇಶಗಳಿಗೆ ಸಂಬಂಧಿಸಿದಂತೆ (ವ್ಯಾಪ್ಯಕ್ಕಿಂತ) ಕಡಿಮೆಯಾಗಿಲ್ಲದಿರುವುದು ವ್ಯಾಪಕವೆನ್ನಿಸುವುದು. ಈ ವ್ಯಾಪ್ಯ ವ್ಯಾಪಕಗಳ ಸಂಬಂಧ ಒಂದರೊಡನೊಂದು ಕೂಡಿಯೇ ಇರುವುದಾಗಿದೆ. ವ್ಯಾಪಕವು ವ್ಯಾಪ್ಯಕ್ಕೆ ಪ್ರತಿಸಂಬಂಧಿಯಾಗಿದೆ.

೩. ತೇನ ನಿರುಪಾಧಿಕತಯಾ ನಿಯತಸಂಬಂಧೋ ವ್ಯಾಪ್ತಿರಿತ್ಯುಚ್ಯತೇ | ಸೇಯಂ "ಯತ್ರಧೂಮಸ್ತತ್ರವಹ್ನಿಃ" ಇತಿ | ವ್ಯಾಪ್ತಿ ರ್ಭೂರ್ಯೋದರ್ಶನಾತ್ ಗೃಹ್ಯತೇ

೪. ವ್ಯಾಪ್ತಿರ್ದ್ವಿವಿಧಾ–ಅನ್ವಯವ್ಯತಿರೇಕಭೇದಾತ್ | ಸಾಧನವಿಧೌ ಸಾಧ್ಯವಿಧಿರೂಪೇಣ ಪ್ರವೃತ್ತಾ ವ್ಯಾಪ್ತಿರನ್ವಯವ್ಯಾಪ್ತಿಃ| ಯಥಾ "ಯೋ ಯೋ ಧೂಮವಾನ್ ಸ ಸೋಽಗ್ನಿಮಾನ್" ಇತಿ | ಸಾಧ್ಯನಿಷೇಧೇ ಸಾಧನ ನಿಷೇಧರೂಪೇಣ ಪ್ರವೃತ್ತಾ ವ್ಯಾಪ್ತಿರ್ವ್ಯ-ರೇಕವ್ಯಾಪ್ತಿಃ | ಯಥಾ ಯೋಽನಗ್ನಿಃ ಸಃ ನಿರ್ಧೂಮ" ಇತಿ |

---

೩. ಆದುದರಿಂದ ಯಾವ ಉಪಾಧಿಗಳಿಗೂ[38] ಒಳಪಡದೆ ನಿಯತವಾಗಿರುವ ವ್ಯಾಪ್ಯವ್ಯಾಪಕ ಸಂಬಂಧಕ್ಕೆ ವ್ಯಾಪ್ತಿ ಎಂದು ಹೆಸರು. 'ಎಲ್ಲಿ ಹೊಗೆಯೋ ಅಲ್ಲಿ ಬೆಂಕಿ' ಎಂದು ಇದು ಹೇಳಲ್ಪಡುತ್ತದೆ. ಎಡೆಬಿಡದೆ ಇರುವ ವ್ಯಾಪ್ಯವ್ಯಾಪಕಗಳನ್ನನೇಕಬಾರಿ ಕಾಣುವುದರಿಂದ[39] ಈ ವ್ಯಾಪ್ತಿ ಗ್ರಹಿಸಲ್ಪಡುತ್ತದೆ.

೪. ವ್ಯಾಪ್ತಿ ಎರಡು ಬಗೆ. ಅನ್ವಯ ವ್ಯಾಪ್ತಿ ಮತ್ತು ವ್ಯತಿರೇಕ ವ್ಯಾಪ್ತಿ ಎಂಬುವು ಅವು. ಅನ್ವಯವ್ಯಾಪ್ತಿಯಲ್ಲಿ ಸಾಧನವಾದ ಹೊಗೆಯನ್ನು ಸಮರ್ಥಿಸುವುದರ ಮೂಲಕ ಸಾಧ್ಯವಾದ ಬೆಂಕಿಯನ್ನು ನಿರ್ಧರಿಸುವ ವ್ಯಾಪ್ತಿಯ ಕ್ರಮಕ್ಕೆ ಅನ್ವಯ ವ್ಯಾಪ್ತಿ' ಎಂದು ಹೆಸರು. 'ಯಾವುದು ಹೊಗೆಯುಳ್ಳದೋ ಅದು ಬೆಂಕಿಯನ್ನುಳ್ಳದು' ಎಂಬುವುದು ಇದಕ್ಕೆ ಉದಾಹರಣೆ. ಸಾಧ್ಯವಾದ ಬೆಂಕಿಯನ್ನು ನಿಷೇಧಿಸುವ ಮೂಲಕ ಸಾಧನವಾದ ಹೊಗೆಯನ್ನು ನಿಷೇಧಿಸುವ ವ್ಯಾಪ್ತಿಕ್ರಮಕ್ಕೆ 'ವ್ಯತಿರೇಕ ವ್ಯಾಪ್ತಿ' ಎಂದು ಹೆಸರು. 'ಯಾವದು ಬೆಂಕಿಯನ್ನು ಹೊಂದಿಲ್ಲವೋ ಅದು ಹೊಗೆಯನ್ನು ಹೊಂದಿಲ್ಲ' ಎಂಬುದು ಇದಕ್ಕೆ ನಿದರ್ಶನ.

೫. ಸೇಯಮುಭಯವಿಧಾ ವ್ಯಾಪ್ತಿಃಉಪಾಧಿಸಂಭವೇ ದುಷ್ಯತಿ । ಸಾಧ್ಯ ವ್ಯಾಪಕತ್ವೇ ಸತಿ ಸಾಧನಾವ್ಯಾಪಕತ್ವಮ್ ಉಪಾಧಿಃ। ಯಥಾ ವಹ್ನಿನಾ ಧೂಮೇ ಸಾಧ್ಯಮಾನೇ ಆರ್ದ್ರೇಂಧನಸಂಬಂಧ ಉಪಾಧಿಃ। ಮೈತ್ರೀತನಯ ತ್ವೇನ ಶ್ಯಾಮತ್ವೇ ಸಾಧ್ಯಮಾನೇ ಶಾಕಪಾಕಜತ್ವಂ ಉಪಾಧಿಃ।

೬. ಸ ಚೋಪಾಧಿರ್ದ್ವಿವಿಧಃ–ನಿಶ್ಚಿತಃ ಶಂಕಿತಶ್ಚೇತಿ। ನಿಶ್ಚಿತೋ ಯಥಾ– "ವಿಪ್ರತಿಪನ್ನಾ ಸೇವಾ ದುಃಖಹೇತುಃ ಸೇವಾತ್ವಾತ್, ರಾಜಸೇವಾವತ್" ಇತ್ಯತ್ರ ಪಾಪಾರಬ್ಧತ್ವಂ ಉಪಾಧಿಃ। ಅಯಂ ತು ಈಶ್ವರಸೇವಯಾಂ ನಾಸ್ತೀತಿ ನಿಶ್ಚಯಾದಯಂ ನಿಶ್ಚಿತೋಪಾಧಿಃ। ಶಂಕಿತೋ ಯಥಾ–"ವಿಪ್ರತಿಪನ್ನೋ ಜೀವಃ ಏತತ್ ಶರೀರಾವಸಾನೇ ಮುಕ್ತಿಮಾನ್, ನಿಷ್ಪನ್ನಸಮಾಧಿತ್ವಾತ್,

---

೫. ಇವೆರಡು ಬಗೆಯ ವ್ಯಾಪ್ತಿಗಳೂ ಉಪಾಧಿಗಳಿದ್ದಾಗ ದೋಷ ಯುಕ್ತವಾಗುತ್ತವೆ. ಯಾವುದು ನಿಯತವಾಗಿ ಸಾಧ್ಯವನ್ನು ವ್ಯಾಪಿಸಿದೆಯೋ ಆದರೆ ಸಾಧನವನ್ನು ವ್ಯಾಪಿಸಿಲ್ಲವೋ ಅದು ಉಪಾಧಿ ಎನಿಸುವುದು. ಬೆಂಕಿ ಯಿಂದ ಹೊಗೆಯನ್ನು ಅನುಮಾನ ಮಾಡುವಾಗ ಹಸಿಯ ಸೌದೆಯ ಸಂಬಂಧ ವನ್ನು ಹೊಂದಿರುವುದು ಉಪಾಧಿ.[40] ಮೈತ್ರಿಯ ಮಗನಾದ/ ಕಾರಣ ಕಂದು ಬಣ್ಣದವನಾಗಿದ್ದಾನೆಂದು ಅನುಮಾನಮಾಡುವಾಗ ಯಾವದೋ ಬಗೆಯ ತರಕಾರಿಯ ಪಾಕದಿಂದುಂಟಾಗಿರುವುದು ಉಪಾಧಿ.

೬. ಈ ಉಪಾಧಿ ನಿಶ್ಚಿತವಾದುದು ಮತ್ತು ಶಂಕಿತವಾದುದು ಎಂದು ಎರಡು ಬಗೆ. 'ವಿವಾದಾಸ್ಪದವಾದ ಈಶ್ವರ ಸೇವೆ ದುಃಖಕ್ಕೆ ಕಾರಣ, ಅದೂ ಸೇವೆಯಾಗಿರುವುದರಿಂದ ರಾಜಸೇವೆಯಂತೆ' ಎಂಬ ಅನುಮಾನದಲ್ಲಿ ಪಾಪದ ಕಾರಣ ಸೇವೆಮಾಡಬೇಕಾಗಿಬಂದಿರುವುದು ಉಪಾಧಿ. ಈ ಉಪಾಧಿ ಈಶ್ವರ ಸೇವೆಯಲ್ಲಿ ಇಲ್ಲವೆಂಬುದು ನಿಶ್ಚಿತವಾದ ಕಾರಣ ಇದು ನಿಶ್ಚಿತೋಪಾಧಿ. ಶಂಕಿತೋಪಾಧಿಯು ಮುಂದೆ ಹೇಳುವಂತಿರುವುದು. 'ಸಮಾಧಿಯು ನಿಷ್ಪನ್ನ ವಾಗಿರುವುದರಿಂದ ಶುಕ ಮುಂತಾದವರಂತೆ ಈಗ ವಿಚಾರಕ್ಕೊಳಗಾಗಿರುವಾಗ ಜೀವನು ಈ ದೇಹದ ಅವಸಾನಕಾಲದಲ್ಲಿ ಮುಕ್ತಿಯನ್ನು ಹೊಂದುತ್ತಾನೆ' ಎಂಬಲ್ಲಿ ಕರ್ಮದ ಆತ್ಯಂತಿಕವಾದ ನಾಶ ಉಪಾಧಿ. ನಿಷ್ಪನ್ನ ಸಮಾಧಿಯನು

ಶುಕಾದಿವತ್" ಇತ್ಯತ್ರ ಕರ್ಮಾತ್ಯಂತಪರಿಕ್ಷಯ ಉಪಾಧಿಃ | ಸ ಚ ನಿಷ್ಪನ್ನ ಸಮಾಧೌ ವಿಪ್ರತಿಪನ್ನೇ ಜೀವೇ, ಅಸ್ತಿ ನಾಸ್ತೀತಿ ಸಂದಿಗ್ಧತ್ವಾತ್‌ಶಂಕಿತೋಪಾಧಿಃ | ಅತೋ ನಿರುಪಾಧಿಕ ಸಂಬಂಧವತ್ ವ್ಯಾಪ್ಯಮಿತಿ ಸಿದ್ಧಮ್ |

೭. ವ್ಯಾಪ್ಯಂ ಸಾಧನಂ ಲಿಂಗಂ ಇತಿ ನಾರ್ಥಾಂತರಮ್ |

೮. ತಸ್ಯ ದ್ವೇ ರೂಪೇ ಅನುಮಿತ್ಯಂಗಭೂತೇ–ವ್ಯಾಪ್ತಿಃ ಪಕ್ಷಧರ್ಮತಾ ಚೇತಿ | ಪಂಚರೂಪಾಣ್ಯಪಿ ಸಂತಿ | ತಾನಿ ಚ ಪಕ್ಷಸತ್ವಂ ಸಪಕ್ಷಸತ್ವಂ ವಿಪಕ್ಷಾತ್ ವ್ಯಾವೃತ್ತಿಃ ಅಬಾಧಿತವಿಷಯತ್ವಂ ಅಸತ್ಪ್ರತಿಪಕ್ಷತ್ವಂ ಚೇತಿ |

೯. ಸಿಸಾಧಯಿಷಿತಧರ್ಮವಿಶಿಷ್ಟೋ ಧರ್ಮೀ ಪಕ್ಷಃ | ಯಥಾ ಅಗ್ನಿಮತ್ವಾದಿ ಸಾಧನೇ ಪರ್ವತಾದಿಃ |

---

ಹೊಂದಿರುವ ಈ ಜೀವನಲ್ಲಿ ಕರ್ಮದ ಅತ್ಯಂತ ನಾಶ ಇದೆ ಅಥವಾ ಇಲ್ಲವೆಂಬುದು ಸಂದಿಗ್ಧವಾದ ಕಾರಣ ಇದು ಶಂಕಿತೋಪಾಧಿ. ಆದುದರಿಂದ ಉಪಾಧಿಗಳ ಸಂಬಂಧವಿಲ್ಲದುದು ವ್ಯಾಪ್ಯ ಎಂಬುದು ಸಿದ್ಧವಾಗುತ್ತದೆ.

೭. ವ್ಯಾಪ್ಯ, ಸಾಧನ ಮತ್ತು ಲಿಂಗ ಎಂಬುವು ಬೇರೆ ಬೇರೆ ಅರ್ಥವನ್ನು ಹೊಂದಿಲ್ಲ. ಇವುಗಳೆಲ್ಲ ಒಂದನ್ನೇ ಕುರಿತವು.

೮. ವ್ಯಾಪ್ಯಕ್ಕೆ ವ್ಯಾಪ್ತಿ ಮತ್ತು ಪಕ್ಷಧರ್ಮತಾ[41] ಎಂದು ಎರಡು ರೂಪಗಳಿವೆ. ಇವುಗಳೆರಡೂ ಅನುಮಿತಿಗೆ ಅಂಗವಾಗಿವೆ. ಅದು ಐದು ರೂಪಗಳನ್ನೂ ಹೊಂದಿದೆ. ಪಕ್ಷಸತ್ತ್ವ, ಸಪಕ್ಷಸತ್ತ್ವ, ವಿಪಕ್ಷದಿಂದ ವ್ಯಾವೃತ್ತವಾಗಿರುವುದು, ಅಬಾಧಿತವಾದ ವಿಷಯವನ್ನು ಹೊಂದಿರುವುದು ಮತ್ತು ಅಸತ್ಪ್ರತಿ ಪಕ್ಷತ್ವ ಎಂಬುವು ಈ ಐದು ರೂಪಗಳು.[42]

೯. ನಾವು ಅನುಮಾನದಿಂದ ಸಾಧಿಸಲಿಚ್ಛಿಸುವ ಧರ್ಮವನ್ನು ಹೊಂದಿರುವ ಧರ್ಮಿಯು ಪಕ್ಷ. ಯಾವುದರಲ್ಲಿ ಬೆಂಕಿ ಮೊದಲಾದವನ್ನು ಸಾಧಿಸಬೇಕಾಗಿದೆಯೋ ಅಂಥ ಪರ್ವತ ಮೊದಲಾದವು ಪಕ್ಷಗಳು.

೧೦. ನಿಸಾಧಯಿಷಿತಸಜಾತೀಯಧರ್ಮವಾನ್ ಸಪಕ್ಷಃ। ಯಥಾ ಮಹಾನಸಾದಿಃ।

೧೧. ಸಾಧ್ಯತಜ್ಜಾತೀಯಶೂನ್ಯೋ ವಿಪಕ್ಷಃ। ಯಥಾ ಮಹಾಹ್ರದಾದಿಃ।

೧೨. ಪ್ರಬಲೇನ ಪ್ರಮಾಣೇನ ಪಕ್ಷೇ ನಿಶ್ಚಿತಸಾಧ್ಯಾಭಾವವತ್ತ್ವಂ ಬಾಧಿತವಿಷಯತ್ವಂ। ಯಥಾ—"ಮಹಾಹ್ರದೋಽಗ್ನಿಮಾನ್" ಇತ್ಯಾದಿ। ತದಭಾವಸ್ತು ಅಬಾಧಿತವಿಷಯತ್ವಂ।

೧೩. ಸಮಬಲತಯಾ ಪ್ರತೀಯಮಾನ ಪ್ರಮಾಣೋಪರೋಧಾಭಾವಃ—ಅಸತ್ಪ್ರತಿಪಕ್ಷತ್ವಮ್।

೧೪. ಏವಂ ಭೂತಂ ವ್ಯಾಪ್ಯಂ ದ್ವಿವಿಧಮ್ ಅನ್ವಯವ್ಯತಿರೇಕಿ–ಕೇವಲಾನ್ವಯಿ ಭೇದಾತ್।

---

೧೦. ಊಹೆಯಿಂದ ಸಾಧಿಸಲಿಚ್ಛಿಸಲಾಗಿರುವ ಧರ್ಮಗಳನ್ನೇ ಹೊಂದಿರುವುವು ಸಪಕ್ಷಗಳು. ಅಡಿಗೆಮನೆ ಮೊದಲಾದವು ಇಂಥವು. (ಇವುಗಳಲ್ಲಿಯೂ ಬೆಂಕಿ ಮತ್ತು ಹೊಗೆಗಳ ವ್ಯಾಪ್ತಿಯು ಗ್ರಹಿಸಲ್ಪಡುವುದು.)

೧೧. ಸಾಧ್ಯದಿಂದಲೂ ಅದಕ್ಕೆ ಸಜಾತೀಯವಾದುದರಿಂದಲೂ ಬಿಡಲ್ಪಟ್ಟಿರುವುದು ವಿಪಕ್ಷ. ಸರೋವರ ಮೊದಲಾದವು ಇದಕ್ಕೆ ನಿದರ್ಶನ. (ಇಲ್ಲಿ ಬೆಂಕಿ ಮೊದಲಾದುವು ಇರುವುದೇ ಇಲ್ಲ).

೧೨. ಪ್ರಬಲವಾದ ಪ್ರಮಾಣದಿಂದ ಪಕ್ಷದಲ್ಲಿ ಸಾಧ್ಯವಿಲ್ಲವೆಂದು ನಿಶ್ಚಯವಾಗಿರುವುದು ಬಾಧಿತ ವಿಷಯತ್ವ. 'ಸರೋವರವು ಬೆಂಕಿಯುಳ್ಳುದು ಮುಂತಾದವು ಇದಕ್ಕೆ ನಿದರ್ಶನ. ಇದರ ಅಭಾವವೇ ಅಬಾಧಿತವಿಷಯತ್ವ.

೧೩. ಗೋಚರಿಸುತ್ತಿರುವ ಪ್ರಮಾಣವೊಂದಕ್ಕೆ ಹಾಗೆಯೇ ಸಮಬಲವಾದ ವಿರೋಧವಿಲ್ಲದಿರುವಿಕೆಯ ಗ್ರಹಣವೇ ಅಸತ್ಪ್ರತಿಪಕ್ಷತ್ವ ಎನ್ನಿಸುವುದು.

೧೪. ಈ ಬಗೆಯ ವ್ಯಾಪ್ಯವು ಎರಡು ವಿಧವಾಗಿದೆ. ಕೇವಲಾನ್ವಯಿ ಮತ್ತು ಕೇವಲವ್ಯತಿರೇಕಿ ಎಂಬುವು ಅವು.

೧೫. ಪೂರ್ವೋಕ್ತಪಂಚರೂಪೋಪನ್ನಂ ವ್ಯಾಪ್ಯಂ ಅನ್ವಯವ್ಯತಿರೇಕಿ । ಯಥಾ—"ಪರ್ವತೋಽಗ್ನಿಮಾನ್ ಧೂಮವತ್ತ್ವಾತ್; ಯೋಯೋ ಧೂಮವಾನ್ ಸ ಸೋಽಗ್ನಿಮಾನ್, ಯಥಾ ಮಹಾನಸಃ"; "ಯೋಽನಗ್ನಿಃ ಸ ನಿರ್ಧೂಮಃ, ಯಥಾ ಮಹಾಹ್ರದಃ" ಇತಿ ।

೧೬. ತಾದೃಶಮೇವ ವಿಪಕ್ಷರಹಿತಂ ವ್ಯಾಪ್ಯಂ ಕೇವಲಾನ್ವಯಿ । ಯಥಾ—"ಬ್ರಹ್ಮ ಶಬ್ದವಾಚ್ಯಂ, ವಸ್ತುತ್ವಾತ್, ಘಟವತ್" । ವಿಪಕ್ಷಾಭಾವಾತ್ ಕೇವಲಾನ್ವಯಿ ಚತೂರೂಪೋಪಪನ್ನಮ್ ।

---

೧೫. ಮೊದಲು ತಿಳಿಸಿದಂಥ ಐದು ರೂಪಗಳನ್ನೂ ಒಳಗೊಂಡ ವ್ಯಾಪ್ಯವು ಅನ್ವಯವ್ಯತಿರೇಕಿ[43] ಎನ್ನಿಸುವುದು. ಅದರ ಕ್ರಮ ಕೆಳಗೆ ತೋರಿಸಿರುವಂತೆ ಇರುವುದು.

ಹೊಗೆಯನ್ನು ಹೊಂದಿರುವುದರಿಂದ ಪರ್ವತವು ಬೆಂಕಿಯನ್ನು ಹೊಂದಿದೆ.

ಯಾವ ಯಾವುದು ಹೊಗೆಯನ್ನು ಹೊಂದಿದೆಯೋ ಅದೆಲ್ಲಾ ಬೆಂಕಿಯನ್ನು ಹೊಂದಿದೆ.

ಅಡಿಗೆಯ ಮನೆಯೋಪಾದಿಯಲ್ಲಿ

ಯಾವ ಯಾವುದು ಬೆಂಕಿಯನ್ನು ಹೊಂದಿಲ್ಲವೋ ಅದು ಹೊಗೆಯನ್ನು ಹೊಂದಿಲ್ಲ. ಸರೋವರದೋಪಾದಿಯಲ್ಲಿ.

೧೬. ವಿಪಕ್ಷವಿಲ್ಲದಿರುವ ಇಂಥ ವ್ಯಾಪ್ಯಕ್ಕೆ ಕೇವಲಾನ್ವಯಿ[44] ಎಂದು ಹೆಸರು.

'ಘಟದೋಪಾದಿಯಲ್ಲಿ ವಸ್ತುವಾಗಿರುವ ಕಾರಣ ಬ್ರಹ್ಮ ಶಬ್ದವಾಚ್ಯವಾದುದು', ಎಂಬುದು ಇದಕ್ಕೆ ನಿದರ್ಶನ

ವಿಪಕ್ಷವೇ ಇಲ್ಲದಿರುವ ಕಾರಣ ಕೇವಲಾನ್ವಯಿಯು ನಾಲ್ಕು ರೂಪಗಳನ್ನು ಮಾತ್ರ ಹೊಂದಿರುತ್ತದೆ.

೧೭. ಕೇವಲವ್ಯತಿರೇಕಿಣಿ ಸಾಧ್ಯಾಪ್ರಸಿದ್ಧೇಸ್ತದ್ವ್ಯತಿರೇಕವ್ಯಾಪ್ತಿಃ ದುರ್ಗ್ರಹಾ । ಅತಃ ಕೇವಲವ್ಯತಿರೇಕಿನಿರಾಸಃ ॥

೧೮. ಕೇವಲಾನ್ವಯಿನಿ ಅನ್ವಯವ್ಯತಿರೇಕಿಣಿ ಚ ಅತ್ಯಂತಾತೀಂದ್ರಿಯಾರ್ಥಗೋಚರತಾ ನಿರಸ್ತಾ ।

೧೯. ತದೇತದನುಮಾನಂ ಸ್ವಾರ್ಥಂ ಪರಾರ್ಥಂ ಚೇತಿ ದ್ವಿಧಾ ವಿಭಜ್ಯ ಕೇಚಿದಾಹುಃ ।

೨೦. ಸರ್ವೇಷಾಮನುಮಾನಾನಾಂ ಸ್ವಪ್ರತಿಸಂಧಾನಾದಿಬಲೇನ ಪ್ರವೃತ್ತತಯಾ ಸ್ವವ್ಯವಹಾರಮಾತ್ರಹೇತುತ್ವಮಿತಿ ಸ್ವಾರ್ಥಾನುಮಾನಮೇವ ಇತ್ಯಪರೇ ।

---

೧೭. ಕೇವಲ ವ್ಯತಿರೇಕಿವ್ಯಾಪ್ತ್ಯದಲ್ಲಿ ಸಾಧ್ಯವು ತಿಳಿಯಲ್ಪಡದೆಯೇ ಇರುವುದರಿಂದ ಆ ವ್ಯತಿರೇಕವ್ಯಾಪ್ತಿಯು ಗ್ರಹಿಸಲ್ಪಡಲಾಗುವುದಿಲ್ಲ. ಆದುದರಿಂದಲೇ ಕೇವಲ ವ್ಯತಿರೇಖಿಯನ್ನು ನಿರಾಕರಿಸಿದೆ.[45]

೧೮. ಕೇವಲಾನ್ವಯಿಯಲ್ಲೂ ಹಾಗೆಯೇ ಅನ್ವಯವ್ಯತಿರೇಕಿಯಲ್ಲಿಯೂ ಅತ್ಯಂತವಾಗಿ ಅತೀಂದ್ರಿಯುವಾದ ಅರ್ಥಗಳು ಅನುಮಾನ ಗೋಚರವಾಗುವುದೆಂಬುದನ್ನು ತಳ್ಳಿಹಾಕಲಾಗಿದೆ.

೧೯. ಈ ಅನುಮಾನವನ್ನು ಸ್ವಾರ್ಥಾನುಮಾನ[46] ಮತ್ತು ಪರಾರ್ಥಾನುಮಾನ ಎಂದು ಕೆಲವರು ವಿಭಾಗಮಾಡುತ್ತಾರೆ.

೨೦. ಎಲ್ಲಾ ಅನುಮಾನಗಳೂ ಅವರವರಿಗೇ ಅರಿವನ್ನುಂಟುಮಾಡುವುದರ ಮೂಲಕ ಅವರವರ ವ್ಯವಹಾರಕ್ಕೇ ಕಾರಣಗಳಾಗಿರುವುದರಿಂದ ಅನುಮಾನಗಳೆಲ್ಲಾ ಸ್ವಾರ್ಥಾನುಮಾನಗಳೇ ಎಂದು ಇತರರು ಪ್ರತಿಪಾದಿಸಿದ್ದಾರೆ.

೨೧. ತದನುಮಾನಬೋಧಕವಾಕ್ಯಂ ಪ್ರತಿಜ್ಞಾಹೇತೂದಾಹರಣೋಪನಯ–ನಿಗಮನರೂಪ ಪಂಚಾವಯವ ಸಂಯುಕ್ತಮ್ ।

೨೨. ತತ್ರ ಪಕ್ಷವಚನಂ ಪ್ರತಿಜ್ಞಾ । ಯಥಾ–"ಪರ್ವತೋಽಗ್ನಿಮಾನ್" ಇತಿ ।

೨೩. ಲಿಂಗಸ್ಯ ವಚನಂ ಹೇತುಃ । ಯಥಾ–"ಧೂಮವತ್ವಾತ್" ಇತಿ ।

೨೪. ವ್ಯಾಪ್ತಿನಿರ್ದೇಶಪೂರ್ವಕಂ ದೃಷ್ಟಾಂತವಚನಂ ಉದಾಹರಣಮ್ । ತತ್ ದ್ವಿಧಾ–ಅನ್ವಯವ್ಯತಿರೇಕಭೇದಾತ್ । ಯಥಾ–"ಯೋ ಯೋ ಧೂಮವಾನ್ ಸ ಸೋಽಗ್ನಿಮಾನ್, ಯಥಾ ಮಹಾನಸಃ" ಇತ್ಯನ್ವಯೋದಾಹರಣಮ್ ।"ಯೋಽನಗ್ನಿಃ ಸ ನಿರ್ಧೂಮಃ, ಯಥಾ ಮಹಾಹ್ರದ" ಇತಿ ವ್ಯತಿರೇಕೋದಾಹರಣಮ್ ।

---

೨೧. ಈ ಅನುಮಾನವನ್ನು ಬೋಧಿಸುವ ವಾಕ್ಯವು ಪ್ರತಿಜ್ಞೆ, ಹೇತು, ಉದಾಹರಣ, ಉಪನಯ ಮತ್ತು ನಿಗಮನ ಎಂಬ ಐದು ಅವಯವಗಳನ್ನೊಳಗೊಂಡಿದೆ.

೨೨. ಪಕ್ಷವನ್ನು ವಿಧಾಯಕಮಾಡುವ ವಾಕ್ಯ ಪ್ರತಿಜ್ಞೆ. 'ಪರ್ವತವು ಅಗ್ನಿಯನ್ನುಳ್ಳದು' ಎಂಬುದು ಪ್ರತಿಜ್ಞೆ.

೨೩. ಕಾರಣ ಅಥವಾ ವ್ಯಾಪ್ಯವನ್ನು ಹೇಳುವ ವಚನವೇ ಹೇತು 'ಹೊಗೆಯನ್ನು ಹೊಂದಿರುವುದರಿಂದ' ಎಂಬುದು ಹೇತು.

೨೪. ವ್ಯಾಪ್ತಿಯನ್ನು ನಿರ್ದೇಶ ಮಾಡಿದ ನಂತರ ದೃಷ್ಟಾಂತವನ್ನು ಹೇಳುವ ವಾಕ್ಯವೇ ಉದಾಹರಣ. ಇದು ಅನ್ವಯ ಮತ್ತು ವ್ಯತಿರೇಕಗಳಿಗನುಗುಣವಾಗಿ ಎರಡು ವಿಧವಾಗಿದೆ. 'ಯಾವಯಾವದು ಹೊಗೆಯನ್ನುಳ್ಳದೋ ಅದು ಬೆಂಕಿಯನ್ನು ಹೊಂದಿದೆ. ಅಡಿಗೆ ಮನೆಯಂತೆ' ಎಂಬುದು ಅನ್ವಯೋದಾಹರಣೆ 'ಯಾವಯಾವದು ಬೆಂಕಿಯನ್ನು ಹೊಂದಿಲ್ಲವೋ ಅದು ಹೊಗೆಯನ್ನು ಹೊಂದಿಲ್ಲ. ಸರೋವರದಂತೆ' ಎಂಬುದು ವ್ಯತಿರೇಕೋದಾಹರಣೆ.

೨೫. ದೃಷ್ಟಾಂತನಿದರ್ಶನೇನ ವ್ಯಾಪ್ತತಯಾ ಪಕ್ಷೇ ಹೇತೂಪಸಂಹಾರವಾಕ್ಯಂ ಉಪನಯಃ । ಸೋಽಪಿ ದ್ವಿವಿಧಃ–ಅನ್ವಯವ್ಯತಿರೇಕಭೇದಾತ್ । "ತಥಾ ಧೂಮವಾನ್" ಇತಿ ಅನ್ವಯೋಪನಯಃ । "ಅಯಂ ಚ ನ ತಥಾ ನಿರ್ಧೂಮ" ಇತಿ ವ್ಯತಿರೇಕೋಪನಯಃ ।

೨೬. ಹೇತುಪೂರ್ವಕಂ ಪಕ್ಷೇ ಸಾಧ್ಯೋಪಸಂಹಾರವಾಕ್ಯಂ ನಿಗಮನಂ । ಅಯಮಪಿ ದ್ವಿವಿಧಸ್ತಥೈವ । ಯಥಾ–"ತಸ್ಮಾದಗ್ನಿಮಾನ್" ಇತಿ ಅನ್ವಯೇನ ನಿಗಮನಮ್ । "ತಸ್ಮಾದಯಂ ನಿರಗ್ನಿರ್ನಭವತಿ" ಇತಿ ವ್ಯತಿರೇಕೇಣ ।

೨೭. ಏವಂ ಪಂಚಾವಯವವಾದಿನೋ ನೈಯಾಯಿಕಾಃ ।

೨೮. ಪ್ರತಿಜ್ಞಾ ಹೇತೂದಾಹರಣರೂಪತ್ರ್ಯವಯವವಾದಿನೋ ಮೀಮಾಂಸಕಾಃ ।

---

೨೫. ದೃಷ್ಟಾಂತವನ್ನು ನಿರ್ದೇಶಿಸುವ ಮೂಲಕ ಪಕ್ಷದಲ್ಲಿ ವ್ಯಾಪ್ತಿಯನ್ನುಳ್ಳ ಹೇತುವಿನ ಉಪಸಂಹಾರವಾಕ್ಯವು ಉಪನಯ ಎನ್ನಿಸುವುದು. ಇದೂ ಅನ್ವಯ ಮತ್ತು ವ್ಯತಿರೇಕಿ ಎಂದು ಎರಡು ವಿಧ. 'ಹಾಗೆಯೇ ಹೊಗೆಯನ್ನುಳ್ಳದು' ಎಂಬುದು ಅನ್ವಯೋಪನಯ. 'ಇದೂ ಸಹ ಹಾಗೆಯೇ ಹೊಗೆಯನ್ನು ಹೊಂದಿಲ್ಲ' ಎನ್ನುವುದು ವ್ಯತಿರೇಕೋಪನಯ.

೨೬. ಹೇತುವಿನ ಮೂಲಕ ಪಕ್ಷದಲ್ಲಿ ಸಾಧ್ಯವನ್ನು ಸಾಧಿಸುವ ನಿರ್ಣಯವಾಕ್ಯ ನಿಗಮನವೆನ್ನಿಸುವುದು. ಇದೂ ಸಹ ಎರಡು ಬಗೆಯಾಗಿದೆ. 'ಆದ ಕಾರಣ ಅಗ್ನಿಯನ್ನು ಹೊಂದಿದೆ' ಎಂಬುದು ಅನ್ವಯ ಮುಖೇನ ಆಗುವ ನಿಗಮನ. 'ಆದಕಾರಣ ಇದು ಅಗ್ನಿಯಿಲ್ಲದುದಾಗಿದೆ' ಎಂಬುದು ವ್ಯತಿರೇಕ ಮುಖೇನ ಆಗುವ ನಿಗಮನ.

೨೭. ನಯ್ಯಾಯಿಕರು ಇಂಥ ಪಂಚಾವಯವದ ವಾಕ್ಯವನ್ನು ಸಮರ್ಥಿಸುತ್ತಾರೆ.

೨೮. ಮೀಮಾಂಸಕರಾದರೋ ಪ್ರತಿಜ್ಞೆ, ಹೇತು ಮತ್ತು ಉದಾಹರಣೆ ಎಂಬ ಮೂರು ಅವಯವಗಳುಳ್ಳ ವಾಕ್ಯವು ಸಾಕೆಂದು ವಾದಿಸುತ್ತಾರೆ.[48]

೨೯ ಉದಾಹರಣೋಪನಯರೂಪಾವಯವದ್ವಯವಾದಿನಃ ಸೌಗತಾಃ ।

೩೦. ಅಸ್ಮಾಕಂ ತ್ವನಿಯಮಃ । ಕ್ವಚಿತ್ ಪಂಚಾವಯವಃ ಕ್ವಚಿತ್ತ್ರ್ಯವಯವಃ ಕ್ವಚಿತ್ ದ್ವ್ಯವಯವಃ । ಉದಾಹರಣೋಪನಯಾಭ್ಯಾಮೇವ ವ್ಯಾಪ್ತಿಪಕ್ಷಧರ್ಮತಯೋಃ ಸಿದ್ಧತ್ವಾತ್ ತಾವತೈವ ಅನುಮಿತ್ಯುಪಪತ್ತೇಶ್ಚ । ಮೃದು–ಮಧ್ಯಮ–ಕಠೋರಧಿಯಾಂ ವಿಸ್ತರಸಂಗ್ರಹಾಭ್ಯಾಂ ವ್ಯವಹಾರ ಉಪಪದ್ಯತೇ ಇತ್ಯನಿಯಮ ಏವ । ಏವಂ ಪಂಚಾವಯವ ಸಂಯುಕ್ತಃ ಸದ್ಧೇತುರೇವ ವಹ್ನ್ಯನುಮಾಪಕಃ । ಸದ್ಧೇತುರಿತ್ಯುಕ್ತತ್ವಾತ್ ಧೂಮಸದೃಶ ಧೂಲೀಪಟಲಾನ್ನ ವಹ್ನ್ಯನುಮಿತಿಃ ।

---

೨೯. ಬೌದ್ಧರು ಉದಾಹರಣ ಮತ್ತು ಉಪನಯ ಎಂಬ ಎರಡೇ ಅವಯವಗಳು ಸಾಕೆಂದು ವಾದಿಸುತ್ತಾರೆ.[49]

೩೦. ನಮಗೋ ಎಂದರೆ ಈ ವಿಷಯದಲ್ಲಿ ಅವಯವದ ಸಂಖ್ಯೆಯನ್ನು ನಿರ್ಧರಗೊಳಿಸಬೇಕೆಂಬ ನಿರ್ಬಂಧವಿಲ್ಲ. ಕೆಲವಡೆಗಳಲ್ಲಿ ಐದು ಅವಯವಗಳೂ ಕೆಲವಡೆಗಳಲ್ಲಿ ಮೂರು ಅವಯವಗಳೂ ಮತ್ತೆ ಕೆಲವಡೆಗಳಲ್ಲಿ ಎರಡೇ ಅವಯವಗಳೂ ಇರಬಹುದು. ಏಕೆಂದರೆ ಉದಾಹರಣ ಮತ್ತು ಉಪನಯ ಇವುಗಳೆರಡರಿಂದಲೇ ವ್ಯಾಪ್ತಿ ಹಾಗೂ ಪಕ್ಷಧರ್ಮತೆ ಇವುಗಳು ಸಿದ್ಧವಾಗುತ್ತವೆ. ಅಷ್ಟರಿಂದಲೇ ಅನುಮಾನವು ಉಪಪನ್ನವಾಗುತ್ತದೆ. ಅತ್ಯಂತ ಮಂದವಾದ ಬುದ್ಧಿಯುಳ್ಳವರು, ಮಧ್ಯಮ ಮಟ್ಟದ ಬುದ್ಧಿಯುಳ್ಳವರು ಮತ್ತು ತೀಕ್ಷ್ಣ ಮತಿಗಳು ಇವರೊಡನೆ ವ್ಯವಹರಿಸುವಾಗ ಈ ಅವಯವಗಳ ವಿಸ್ತಾರ ಮತ್ತು ಸಂಗ್ರಹವು ಉಪಪನ್ನವಾಗುವುದರಿಂದ ಈ ಪಂಚಾವಯವಗಳ ಪ್ರಯೋಗದ ವಿಚಾರದಲ್ಲಿ ಕಟ್ಟುನಿಟ್ಟಾದ ನಿಯಮವೇನಿಲ್ಲ. ಈ ಪಂಚಾವಯವಗಳಿಂದ ಕೂಡಿದ ಸದ್ಧೇತುವೇ ಬೆಂಕಿಯ ಅನುಮಾನಕ್ಕೆ ಕಾರಣ. ಸದ್ಧೇತು ಎಂದು ಹೇಳಿರುವುದರಿಂದ ಹೊಗೆಯಂತೆ ಕಾಣುವ ಧೂಳಿಯ ಪಟಲದಿಂದ ಬೆಂಕಿಯ ಅನುಮಾನ ಸಾಧ್ಯವಿಲ್ಲ.

೩೧. ಅನ್ಯೇ ಹೇತುವದ್ಭಾಸಮಾನಾ ಹೇತ್ವಾಭಾಸಾಃ । ತೇ ಚ ಅಸಿದ್ಧ–ವಿರುದ್ಧ–ಅನೈಕಾಂತಿಕ–ಪ್ರಕರಣಸಮ–ಕಾಲಾತ್ಯಯಾಪದಿಷ್ಟ ಭೇದೇನ ಪಂಚಪ್ರಕಾರಾಃ ।

೩೨. ತತ್ರ ಅಸಿದ್ಧಃ ತ್ರಿವಿಧಃ–ಸ್ವರೂಪಾಸಿದ್ಧಃ ಆಶ್ರಯಾಸಿದ್ಧಃ ವ್ಯಾಪ್ಯತ್ವಾಸಿದ್ಧಶ್ಚೇತಿ ।

೩೩. ಸ್ವರೂಪಾಸಿದ್ಧೋ ಯಥಾ–"ಅನಿತ್ಯೋ ಜೀವಃ, ಚಾಕ್ಷುಷತ್ವಾತ್, ಘಟವತ್" ಇತಿ ।

೩೪. ಆಶ್ರಯಾಸಿದ್ಧಸ್ತು–"ವ್ಯೋಮಾರವಿಂದಂ ಸುರಭಿ, ಅರವಿಂದತ್ವಾತ್, ಸರೋಜಾರವಿಂದವತ್" ಇತಿ । ವ್ಯೋಮಾರವಿಂದಮಾಶ್ರಯಃ । ಸ ಚಾಸಿದ್ಧಃ ।

೩೫. ವ್ಯಾಪ್ಯತ್ವಾಸಿದ್ಧೋ ದ್ವಿವಿಧಃ–ಏಕೋ ವ್ಯಾಪ್ತಿಗ್ರಾಹಕ

---

೩೧. ಹೇತುವಿನಂತೆ ತೋರುವುವು ಹೇತ್ವಾಭಾಸಗಳು. ಅವು ಅಸಿದ್ಧ, ವಿರುದ್ಧ, ಅನೈಕಾಂತಿಕ, ಪ್ರಕರಣಸಮ, ಕಾಲಾತ್ಯಯಾಪದಿಷ್ಟ ಎಂದು ಐದು ಬಗೆಯಾಗಿವೆ.[50]

೩೨. ಅದರಲ್ಲಿಯೂ ಅಸಿದ್ಧವು ಸ್ವರೂಪಾಸಿದ್ಧ, ಆಶ್ರಯಾಸಿದ್ಧ ಮತ್ತು ವ್ಯಾಪ್ಯತ್ವಾಸಿದ್ಧ ಎಂದು ಮೂರು ವಿಧ.

೩೩. 'ಘಟದಂತೆ ಕಣ್ಣಿಗೆ ಗೋಚರನಾಗುವ ಕಾರಣ ಜೀವನು ಅನಿತ್ಯನು' ಎನ್ನುವುದು ಸ್ವರೂಪಾಸಿದ್ಧಕ್ಕೆ ಉದಾಹರಣೆ.

೩೪. 'ಸರೋವರದ ಕಮಲದ ಹಾಗೆ ಅರವಿಂದತ್ವವನ್ನು ಹೊಂದಿರುವ ಕಾರಣ ಆಕಾಶಕಮಲವು ಸುಗಂಧವನ್ನು ಹೊಂದಿದೆ' ಎಂಬುದು ಆಶ್ರಯಾಸಿದ್ಧಕ್ಕೆ ಉದಾಹರಣೆ. ಅದು ಅಸಿದ್ಧವೇ ಸರಿ.

೩೫. ವ್ಯಾಪ್ಯತ್ವಾಸಿದ್ಧವು ಎರಡು ವಿಧ; ಒಂದು ಬಗೆಯಲ್ಲಿ ವ್ಯಾಪ್ತಿ

ಪ್ರಮಾಣಾಭಾವಾತ್, ಅಪರಸ್ತು ಉಪಾಧಿಸದ್ಭಾವಾತ್ । ಆದ್ಯೋ ಯಥಾ –"ಯತ್ ಸತ್ ತತ್ ಕ್ಷಣಿಕಂ" ಇತಿ। ಕ್ಷಣಿಕತ್ವಸತ್ವಯೋಃ ವ್ಯಾಪ್ತಿ ಗ್ರಾಹಕ ಪ್ರಮಾಣಾಸಿದ್ಧೇಃ। ದ್ವಿತೀಯೋ ಯಥಾ–"ಅಗ್ನೀಷೋಮೀಯಾ ಹಿಂಸಾ ಅಧರ್ಮಸಾಧಿಕಾ, ಹಿಂಸಾತ್ವಾತ್, ಕ್ರತುಬಾಹ್ಯಹಿಂಸಾವತ್" ಇತಿಅತ್ರ ನಿಷಿದ್ಧತ್ವಮುಪಾಧಿಃ । ಅತೋ ಹಿಂಸಾತ್ವಹೇತುಃ ಸೋಪಾಧಿಕಃ ।

೩೬. ಸಾಧ್ಯವಿಪರೀತ ವ್ಯಾಪ್ತೋ ಹೇತುಃ ವಿರುದ್ಧಃ। ತದ್ಯಥಾ–"ನಿತ್ಯಾ ಪ್ರಕೃತಿಃ, ಕೃತಕತ್ವಾತ್, ಕಾಲವತ್"। ಕೃತಕತ್ವಹೇತುಃ ಸಾಧ್ಯಾಭಾವ ವ್ಯಾಪ್ತಃ ।

೩೭. ಸವ್ಯಭಿಚಾರೋऽನೈಕಾಂತಿಕಃ। ಸ ಚ ದ್ವಿವಿಧಃ–ಸಾಧಾರಣಃ ಅಸಾಧಾರಣಶ್ಚೇತಿ ।

---

ಯನ್ನು ಗ್ರಹಿಸಲು ಅವಶ್ಯಕವಾದ ಪ್ರಮಾಣವೇ ಇರುವುದಿಲ್ಲ. ಮತ್ತೊಂದರಲ್ಲಿ ವ್ಯಾಪ್ಯದಲ್ಲಿ ಉಪಾಧಿ ಇರುತ್ತದೆ. 'ಯಾವಯಾವದು ಇದೆಯೋ ಅದೆಲ್ಲಾ ಕ್ಷಣಿಕ' ಎಂಬುವುದು ಮೊದಲನೆಯದಕ್ಕೆ ಉದಾಹರಣೆ. ಪದಾರ್ಥದ ಇರುವಿಕೆಗೂ ಅದರ ಕ್ಷಣಿಕತ್ವಕ್ಕೂ ವ್ಯಾಪ್ತಿಯನ್ನು ಗ್ರಹಿಸಲು ಬೇಕಾದ ಪ್ರಮಾಣ ಇಲ್ಲಿ ಅಸಿದ್ಧವಾಗಿರುವುದೇ ಅದಕ್ಕೆ ಕಾರಣ. 'ಯಾಗವನ್ನು ಬಿಟ್ಟು ಇತರ ಸಂದರ್ಭಗಳಲ್ಲಿ ಆಗುವ ಹಿಂಸೆಯಂತೆ ಇದೂ ಹಿಂಸೆಯನ್ನೊಳಗೊಂಡಿರುವುದರಿಂದ ಅಗ್ನಿಷೊಮೀಯ ಯಾಗದಲ್ಲಿ ಮಾಡುವ ಹಿಂಸೆಯೂ ಸಹ ಅಧರ್ಮ ಸಾಧಕವಾದುದು' ಎಂಬುವುದು ಎರಡನೆಯದಕ್ಕೆ ಉದಾಹರಣೆ. ಇಲ್ಲಿ (ಪ್ರಾಣಿಹಿಂಸೆಯ) ನಿಷಿದ್ಧತ್ವ ಉಪಾಧಿ. ಆದುದರಿಂದ ಹಿಂಸೆಯ ಸ್ವರೂಪವನ್ನೇ ಹೊಂದಿರುವ ಹೇತು ಉಪಾಧಿಯಿಂದ ಕೂಡಿದುದಾಗಿದೆ.[51]

೩೬. ಸಾಧ್ಯಕ್ಕೆ ವಿಪರೀತವಾದುದರಿಂದ ವ್ಯಾಪ್ತವಾದ (ಕಾರಣವು) ಹೇತುವು ವಿರುದ್ಧವೆನ್ನಿಸುವುದು. 'ಕಾಲದ ಹಾಗೆಯೇ ಕೃತಕವಾದ ಕಾರಣ ಪ್ರಕೃತಿಯು ನಿತ್ಯವಾದುದು' ಎಂಬುದು ಇದಕ್ಕೆ ಉದಾಹರಣೆ. ಇಲ್ಲಿ ಕೃತಕತ್ವ ಎಂಬ ಹೇತು ಸಾಧ್ಯದ (ನಿತ್ಯತ್ವದ) ಅಭಾವದಿಂದ ವ್ಯಾಪ್ತವಾಗಿದೆ.[52]

೩೭. ಅನೈಕಾಂತಿಕ ಎಂಬುದಕ್ಕೆ ಸವ್ಯಭಿಚಾರವೆಂದು ಹೆಸರಿದೆ. ಇದು ಸಾಧಾರಣ ಮತ್ತು ಅಸಾಧಾರಣ ಎಂದು ಎರಡು ವಿಧ.[53]

೩೮. ಪಕ್ಷ–ಸಪಕ್ಷ–ವಿಪಕ್ಷವೃತ್ತಿಃ ಸಾಧಾರಣಃ | ಯಥಾ–"ಶಬ್ದೋ ನಿತ್ಯಃ, ಪ್ರಮೇಯತ್ವಾತ್, ಕಾಲವತ್" | ಅಸಾಧಾರಣಸ್ತು ವಿಪಕ್ಷ ಸಪಕ್ಷ ವ್ಯಾವೃತ್ತಃ | ಯಥಾ–"ಭೂಮಿರ್ನಿತ್ಯಾ, ಗಂಧವತ್ವಾತ್" ಇತಿ |

೩೯. ಪ್ರಕರಣಸಮಸ್ತು ಸಾಧ್ಯವಿಪರೀತಸಾಧಕಹೇತ್ವಂತರವಾನ್ | ಯಥಾ–"ಈಶ್ವರೋಽನಿತ್ಯಃ, ನಿತ್ಯಧರ್ಮರಹಿತತ್ವಾತ್" | "ಈಶ್ವರೋ ನಿತ್ಯಃ, ಅನಿತ್ಯಧರ್ಮರಹಿತತ್ವಾತ್" ಇತಿ | ಅಯಮೇವ ಸತ್ಪ್ರತಿಪಕ್ಷಃ |

೪೦. ಕಾಲಾತ್ಯಯಾಪದಿಷ್ಟೋ ಯಥಾ–"ಯಸ್ಯ ಹೇತೋಃ ಸಾಧ್ಯಾಭಾವವಾನ್ ಪಕ್ಷಃ ಸ ಕಾಲಾತ್ಯಯಾಪದಿಷ್ಟಃ" | ಯಥಾ–"ಅಗ್ನಿರನುಷ್ಣಃ

---

೩೮. ಪಕ್ಷದಲ್ಲಿಯೂ, ಸಪಕ್ಷದಲ್ಲಿಯೂ ವಿಪಕ್ಷದಲ್ಲಿಯೂ ಇರುವ ಹೇತು ಸಾಧಾರಣಾ ನೈಕಾಂತಿಕವಾದುದು. 'ಕಾಲದ ಹಾಗೆಯೇ ಪ್ರಮೇಯತ್ವವನ್ನು ಹೊಂದಿರುವ ಕಾರಣ (ತಿಳಿಯಲ್ಪಡುವ ಕಾರಣ) ಶಬ್ದವು ನಿತ್ಯವಾದುದು' ಎಂಬುದು ಇದಕ್ಕೆ ಉದಾಹರಣೆ[54]. ಸಪಕ್ಷದಲ್ಲಾಗಲೀ ವಿಪಕ್ಷದಲ್ಲಾಗಲೀ ಇಲ್ಲದೆಯೇ ಇರುವ ಹೇತು ಅಸಾಧಾರಣಾನೈಕಾಂತಿಕ. 'ಗಂಧವತ್ವವನ್ನು ಹೊಂದಿರುವ ಕಾರಣದಿಂದ ಭೂಮಿಯು ನಿತ್ಯವಾದುದು' ಎಂಬುದು ಇದಕ್ಕೆ ಉದಾಹರಣೆ.[55]

೩೯. ಸಾಧ್ಯಕ್ಕೆ ವಿರುದ್ಧವಾದುದನ್ನು ಸಾಧಿಸುವ ಬೇರೆ ಹೇತುವನ್ನು ಹೊಂದಿರುವುದು ಪ್ರಕರಣಸಮ ಎನ್ನಿಸುವುದು[56].

'ನಿತ್ಯಧರ್ಮಗಳಿಂದ ರಹಿತನಾಗಿರುವ ಕಾರಣ ಈಶ್ವರನು ಅನಿತ್ಯನು' ಎಂಬುದು ಇದಕ್ಕೆ ಉದಾಹರಣೆ. 'ಅನಿತ್ಯಧರ್ಮಗಳಿಂದ ರಹಿತನಾಗಿರುವ ಕಾರಣ ಈಶ್ವರನು ನಿತ್ಯನು' ಎಂಬುದು ಇದಕ್ಕೆ ವಿರುದ್ಧವಾಗಿ ಸಾಧಿತವಾಗುತ್ತದೆ. ಇದೇ ಸತ್ಪ್ರತಿಪಕ್ಷ ಎಂಬುದು.

೪೦. ಸಾಧ್ಯವು ಇಲ್ಲದೇ ಇರುವ ಪಕ್ಷದಲ್ಲಿ ಇರುವ ಹೇತು ಕಾಲಾತ್ಯಯಾಪದಿಷ್ಟ ಎನ್ನಿಸುವುದು. 'ಜಲದಂತೆ ಪದಾರ್ಥವಾಗಿರುವ ಕಾರಣ ಅಗ್ನಿಯು ಉಷ್ಣವಾಗಿಲ್ಲ' ಎಂಬುದು ಇದಕ್ಕೆ ನಿದರ್ಶನ. ಪ್ರತ್ಯಕ್ಷ ಪ್ರಮಾಣದಿಂದ ಅಗ್ನಿಯ ಉಷ್ಣತ್ವವು ಸಿದ್ಧವಾಗಿರುವುದರಿಂದ ಇದು ಬಾಧಿತವಾಗುತ್ತದೆ.

ಪದಾರ್ಥತ್ವಾತ್, ಜಲವತ್" | ಅಯಂ ಚ ಪ್ರತ್ಯಕ್ಷೇಣ ಉಷ್ಣತ್ವಾವಧಾರ ಣಾತ್ ಬಾಧಿತಃ |

೪೧. ಏವಮನುಮಾನೇ ನಿರೂಪಿತೇ ಉಪಮಾನಾದೇರನುಮಾನಾದಾವಂತರ್ಭಾವಃ | ಯಥಾ ಅತಿದೇಶವಾಕ್ಯಾರ್ಥಸ್ಮರಣ–ಸಹಕೃತ–ಗೋಸಾದೃಶ್ಯ ವಿಶಿಷ್ಟಪಿಂಡಜ್ಞಾನಮ್ ಉಪಮಾನಮ್ | ಗವಯಮಜಾನನ್ನಪಿ 'ಯಥಾ ಗೌಃ ತಥಾ ಗವಯ' ಇತಿ ಕುತಶ್ಚಿದಾರಣ್ಯಕವಾಕ್ಯಾತ್ ಶ್ರುತ್ವಾ ವನಂ ಗತೋ ವಾಕ್ಯಾರ್ಥಂ ಸ್ಮರನ್ ಯದಾ ಗೋಸಾದೃಶ್ಯವಿಶಿಷ್ಟಪಿಂಡಂ ಪಶ್ಯತಿ ತದಾ ತದ್ವಾಕ್ಯಾರ್ಥಸ್ಮರಣ–ಸಹಕೃತ–ಸದೃಶ–ಪಿಂಡಜ್ಞಾನಂ ಜಾಯತೇ | ತದುಪಮಾನಮ್ ಇತ್ಯುಚ್ಯತೇ | ಸ್ಮರಣರೂಪತ್ವಾತ್ ತಸ್ಯ ಪ್ರತ್ಯಕ್ಷೇಽಂತರ್ಭಾವಃ | ವ್ಯಾಪ್ತಿಗ್ರಹಣಾಪೇಕ್ಷತ್ವಾತ್ ಅನುಮಾನೇ ಅಂತರ್ಭಾವಃ | ವಾಕ್ಯಜನ್ಯತ್ವಾತ್ ಶಬ್ದೇ ವಾ ಅಂತರ್ಭಾವ ಊಹ್ಯಃ |

೪೨. ಅರ್ಥಾಪತ್ತಿರ್ನಾಮ ದಿವಾ ಅಭುಂಜಾನಸ್ಯ ಪುರುಷಸ್ಯ ಪೀನತ್ವ

---

೪೧. ಹೀಗೆ ಮಾಡಿರುವ ಅನುಮಾನದ ನಿರೂಪಣೆಯಲ್ಲಿ ಉಪಮಾನ ಮೊದಲಾದುವುಗಳೂ ಸೇರಿಹೋಗುತ್ತವೆ. ಅತಿದೇಶವಾಕ್ಯದ[57] ಅರ್ಥವನ್ನು ಸ್ಮರಿಸಿಕೊಳ್ಳುವಿಕೆಯಿಂದ ಸಹಕೃತವಾದ ಹಸುವಿನ ಹೋಲಿಕೆಯಿಂದ ಕೂಡಿದ ಆಕೃತಿಯ ಜ್ಞಾನ ಉಪಮಾನ. ಗವಯವನ್ನು ತಿಳಿಯದವನಾದರೂ 'ಹಸುವಿನಂತೆಯೇ ಗವಯವೂ' ಎಂದು ಯಾವನೋ ಆರಣ್ಯಕನಿಂದ ಹೇಳಲ್ಪಟ್ಟ ಮಾತನ್ನು ಕೇಳಿ ಕಾಡಿಗೆ ಹೋದವನು ಹಸುವಿಗೆ ಸದೃಶವಾದ ವ್ಯಕ್ತಿಯನ್ನು ನೋಡಿದಾಗ ಆ ಆರಣ್ಯಕನ ವಾಕ್ಯವನ್ನು ಸ್ಮರಿಸಿಕೊಂಡವನಾಗುತ್ತಾನೆ. ಆಗ ಆ ವಾಕ್ಯಾರ್ಥದ ನೆನಪಿನೊಡನೆ ಉಂಟಾದ ಗೋಸದೃಶವಾದ ವ್ಯಕ್ತಿಯ ಜ್ಞಾನವುಂಟಾಗುತ್ತದೆ. ಆ ಜ್ಞಾನವನ್ನು ಉಪಮಾನವೆನ್ನುತ್ತಾರೆ. ಅದು ಸ್ಮರಣರೂಪವಾದ ಕಾರಣ ಪ್ರತ್ಯಕ್ಷದಲ್ಲಿ ಸೇರಿಹೋಗುತ್ತದೆ. ಅದಕ್ಕೆ ವ್ಯಾಪ್ತಿ ಗ್ರಹಣದ ಅಪೇಕ್ಷೆಯೂ ಇರುವುದರಿಂದ ಅನುಮಾನದಲ್ಲಿ ಸೇರಿಹೋಗುತ್ತದೆ. ವಾಕ್ಯದಿಂದ ಆ ಜ್ಞಾನ ಹುಟ್ಟುವ ಕಾರಣ ಶಬ್ದದಲ್ಲಿಯಾದರೂ ಸೇರಿಹೋಗುತ್ತದೆ ಎಂದು ಊಹಿಸಬೇಕು[58].

೪೨. ಹಗಲು ಊಟಮಾಡದ ಮನುಷ್ಯನ ದೇಹಪುಷ್ಟಿಯನ್ನು

ದರ್ಶನಾತ್ ರಾತ್ರೌ ಭೋಜನಂ ಕಲ್ಪ್ಯತೇ । ಏತಸ್ಯಾ ಅನುಮಾನೇ ಅಂತರ್ಭಾವಃ ।

೪೩. ತರ್ಕೋನಾಮ ವ್ಯಾಪ್ಯಾಂಗೀಕಾರೇಣ ವ್ಯಾಪಕಪ್ರಸಂಜನಮ್ । ತದ್ಯಥಾ–"ಪರ್ವತೋ ವಹ್ನಿಮಾನ್, ಧೂಮವತ್ತ್ವಾತ್, ಇತ್ಯನುಮಾನೇ, 'ಧೂಮೋಽಸ್ತು ವಹ್ನಿರ್ಮಾಸ್ತು' ಇತ್ಯುಕ್ತೇ, 'ಯದಿ ವಹ್ನಿರ್ನ ಸ್ಯಾತ್ ತರ್ಹಿ ಧೂಮೋಽಪಿ ನ ಸ್ಯಾತ್' ಇತಿ ; ಏತಸ್ಯ ಪ್ರಮಾಣಾನುಗ್ರಾಹಕತ್ವಮ್ ।

೪೪. ತರ್ಕಾನುಗೃಹೀತ ಪ್ರಮಾಣಪೂರ್ವಕತತ್ತ್ವಾವಧಾರಣಂ ನಿಶ್ಚಯಃ ।

೪೫. ವೀತರಾಗಕಥಾ ವಾದಃ ।

೪೬. ಪಕ್ಷದ್ವಯಸಾಧನವತೀ ವಿಜಿಗೀಷುಕಥಾ ಜಲ್ಪಃ ।

---

ಕಾಣುವ ಕಾರಣ ರಾತ್ರಿಯಲ್ಲಿ ಅವನು ಭೋಜನ ಮಾಡುವನೆಂಬುದನ್ನು ಕಲ್ಪಿಸುವುದು ಅರ್ಥಾಪತ್ತಿ ಎನ್ನಿಸುವುದು. ಇದು ಅನುಮಾನದಲ್ಲಿ ಅಂತರ್ಭಾವ ಆಗುತ್ತದೆ[59].

೪೩. ವ್ಯಾಪ್ಯವನ್ನು ಅಂಗೀಕಾರ ಮಾಡುವುದರ ಮೂಲಕ ವ್ಯಾಪಕವನ್ನು ಅಂಗೀಕರಿಸುವುದು ತರ್ಕ ಎನಿಸುವುದು. 'ಹೊಗೆಯನ್ನು ಹೊಂದಿರುವುದರಿಂದ ಬೆಟ್ಟವು ಬೆಂಕಿಯನ್ನು ಹೊಂದಿದೆ' ಎಂಬ ಅನುಮಾನದಲ್ಲಿ 'ಹೊಗೆ ಇರಲಿ ಬೆಂಕಿ ಇಲ್ಲದಿರಲಿ' ಎಂದು ಹೇಳಿದರೆ 'ಒಂದು ಪಕ್ಷ ಬೆಂಕಿ ಇಲ್ಲದೆ ಹೋಗಿದ್ದರೆ ಹೊಗೆಯೂ ಇಲ್ಲದೆಯೇ ಇರುತ್ತಿತ್ತು' ಎಂದು ನಿರಾಕರಿಸುವುದು ತರ್ಕ. ಈ ತರ್ಕವು ಪ್ರಮಾಣಕ್ಕೆ ಸಹಾಯಕವಾಗಿದೆ.

೪೪. ತರ್ಕದ ಬೆಂಬಲವನ್ನು ಪಡೆದ ಪ್ರಮಾಣದ ಮೂಲಕ ಮಾಡುವ ತತ್ತ್ವ ನಿರ್ಧಾರವು ನಿಶ್ಚಯವೆನ್ನಿಸುವುದು.

೪೫. ರಾಗಾದಿಗಳಿಗೊಳಗಾಗದೆ ಎರಡು ಪಕ್ಷಗಳವರು ಮಾಡುವ ಚರ್ಚೆಗೆ ವಾದ ಎಂದು ಹೆಸರು.

೪೬. ತಾವೇ ಜಯಿಸಬೇಕೆಂಬ ಇಚ್ಛೆಯಿಂದ ಎರಡು ಪಕ್ಷಗಳವರು ಸಾಧಿಸುವ ಚರ್ಚೆಗೆ ಜಲ್ಪವೆಂದು ಹೆಸರು.

೪೭. ಸ್ವಪಕ್ಷಸ್ಥಾಪನಹೀನಾ ತು ವಿತಂಡಾ ।

೪೮. ಅವಿವಕ್ಷಿತ ಶಬ್ದಾರ್ಥಾರೋಪೇಣ ದೂಷಣಂ ಛಲಮ್ ।

೪೯. ಸ್ವವ್ಯಾಪಿದೂಷಣಂ ಜಾತಿಃ । ಅಸದುತ್ತರಂ ಜಾತಿರಿತಿವಾ ।

೫೦. ಪರಾಜಯಹೇತುರ್ನಿಗ್ರಹಸ್ಥಾನಮ್ । ಇತ್ಯೇಷಾಮನುಮಾನಾಂಗತ್ವಾತ್ ಅನುಮಾನೇ ಅಂತರ್ಭಾವಃ ।

೫೧. ಕ್ವಚಿತ್ ಕ್ವಚಿತ್ ನೈಯಾಯಿಕಮತಾನುಸಾರೇಣ ಉಕ್ತಮಿತಿ ನ ವಿರೋಧಃ । ಇತ್ಯನುಮಾನಂ ನಿರೂಪಿತಮ್ ।

ಇತಿ ವಾಧೂಲ ಕುಲ ತಿಲಕ ಶ್ರೀಮನ್ಮಹಾಚಾರ್ಯಸ್ಯ ಪ್ರಥಮದಾಸೇನ ಶ್ರೀನಿವಾಸದಾಸೇನ ವಿರಚಿತಾಯಾಂ ಯತೀಂದ್ರಮತದೀಪಿಕಾಯಾಂ ಅನುಮಾನ ನಿರೂಪಣಂ ನಾಮ ದ್ವಿತೀಯೋಽವತಾರಃ

೪೭. ತನ್ನ ಪಕ್ಷದ ಸ್ಥಾಪನೆಯನ್ನು ಮಾಡದಿರುವ (ಆದರೆ ಮತ್ತೊಂದು ಪಕ್ಷವನ್ನು ವಿರೋಧಿಸುವ) ಚರ್ಚೆಗೆ ವಿತಂಡಾ ಎಂದು ಹೆಸರು.

೪೮. (ಪ್ರತಿಪಕ್ಷಿ ಬಳಸಿದ) ಶಬ್ದಕ್ಕೆ ಅವರು ಉದ್ದೇಶಿಸದೆ ಇರುವ ಅರ್ಥವನ್ನಾರೋಪಿಸಿ ದೂಷಣೆಮಾಡುವುದು 'ಛಲ'[60].

೪೯. ತನ್ನ ಪಕ್ಷಕ್ಕೂ ವ್ಯಾಪಿಸಿರುವ ದೂಷಣವನ್ನೆತ್ತಿ ಹೇಳುವುದು 'ಜಾತಿ' ಎನ್ನಿಸುವುದು ಅಥವಾ ತಪ್ಪಾದ ಉತ್ತರವನ್ನು ಕೊಡುವದು ಜಾತಿ[61].

೫೦. ವಾದಿಯೊಬ್ಬನ ಪರಾಜಯಕ್ಕೆ ಕಾರಣವಾದ ಹೇತು ನಿಗ್ರಹಸ್ಥಾನ[62]. ಇವುಗಳೆಲ್ಲಾ ಅನುಮಾನಕ್ಕೆ ಅಂಗಗಳಾದ ಕಾರಣ ಅನುಮಾನದಲ್ಲಿ ಸೇರಿಸಲ್ಪಟ್ಟಿವೆ.

೫೧. ಒಂದೊಂದು ಸಂದರ್ಭದಲ್ಲಿ ನಯ್ಯಾಯಿಕರ ಮತಕ್ಕನುಸಾರವಾಗಿ ವಿವರಣೆ ಮಾಡಿರುವುದರಿಂದ ಯಾವ ವಿರೋಧವೂ ಇಲ್ಲ. ಇದುವರಗೆ ಅನುಮಾನವನ್ನು ನಿರೂಪಿಸಲಾಯಿತು.

ಇಂತು ವಾಧೂಲಕುಲತಿಲಕನೂ ಮಹಾಚಾರ್ಯರ ಪ್ರಥಮದಾಸನೂ ಆದ ಶ್ರೀನಿವಾಸದಾಸನಿಂದ ವಿರಚಿತವಾದ ಯತೀಂದ್ರಮತದೀಪಿಕೆಯಲ್ಲಿ ಅನುಮಾನ ನಿರೂಪಣೆ ಎಂಬ ಎರಡನೆಯ ಅವತಾರ ಮುಗಿದುದು.

# ತೃತೀಯೋಽವತಾರಃ

## ಶಬ್ದಃ

೧. ಅನುಮಾನನಿರೂಪಣಾನಂತರಂ ಶಬ್ದೋ ನಿರೂಪ್ಯತೇ | ಅನಾಪ್ತಾನುಕ್ತ–ವಾಕ್ಯಜನಿತ–ತದರ್ಥವಿಜ್ಞಾನಂ ಶಾಬ್ದಜ್ಞಾನಮ್ | ತತ್ಕರಣಂ ಶಬ್ದಪ್ರಮಾಣಮ್ | 'ಅನಾಪ್ತಾನುಕ್ತ' ಇತ್ಯುಕ್ತತ್ವಾತ್ ವೇದಸ್ಯ ಪೌರುಷೇಯತ್ವಮತನಿರಾಸಃ | ಕರಣದೋಷ–ಬಾಧಕಪ್ರತ್ಯಯಾಭಾವವತ್ ವಾಕ್ಯಂ ವಾ |

೨. ಸರ್ಗಾದೌ ಭಗವಾನ್ ಚತುರ್ಮುಖಾಯ ಪೂರ್ವಪೂರ್ವಕ್ರಮವಿಶಿಷ್ಟಾನ್ ವೇದಾನ್ ಸ್ಮೃತ್ವಾ ಸ್ಮೃತ್ವಾ ಉಪದಿಶತೀತ್ಯುಕ್ತ್ಯಾ ವೇದಸ್ಯ ನಿತ್ಯತ್ವಮಪೌರುಷೇಯತ್ವಂ ಚ ಸಿದ್ಧಮಿತಿ ಕರಣದೋಷಾಭಾವೋ ಬಾಧಕಪ್ರತ್ಯಯಾ ಭಾವಶ್ಚ |

---

# ಮೂರನೆಯ ಅವತಾರ

## ಶಬ್ದ

೧. ಅನುಮಾನ ಪ್ರಮಾಣವನ್ನು ವಿವರಿಸಿದ ಮೇಲೆ ಈಗ ಶಬ್ದಪ್ರಮಾಣದ[63] ನಿರೂಪಣೆ ಮಾಡಲಾಗುತ್ತದೆ. ಆಪ್ತನಿಂದ ಹೇಳಲ್ಪಡುವ ವಾಕ್ಯದಿಂದ ಉಂಟಾದ ಅರ್ಥವಿಜ್ಞಾನಕ್ಕೆ ಶಾಬ್ದಜ್ಞಾನ ಎಂದು ಹೇಳುತ್ತೇವೆ. ಈ ಜ್ಞಾನವನ್ನುಂಟುಮಾಡುವ ಸಾಧನ ಶಬ್ದಪ್ರಮಾಣ. 'ಅನಾಪ್ತನಿಂದ ಹೇಳಲ್ಪಡದಿರುವುದು' ಎಂದು ಹೇಳಿರುವುದರಿಂದ ವೇದ ಪೌರುಷೇಯ ಎಂದು ಹೇಳುವವರ ಅಭಿಪ್ರಾಯವನ್ನು ನಿರಾಕರಿಸಿದೆ. ಅಥವಾ ಯಾವ ವಾಕ್ಯವು ಇಂದ್ರಿಯ ದೋಷಗಳು ಮತ್ತು ಭಾಧಕ ಪ್ರತ್ಯಯಗಳಿಂದ ಬಿಡಲ್ಪಟ್ಟಿದೆಯೋ ಅದು ಶಬ್ದಪ್ರಮಾಣ.

೨. ಸೃಷ್ಟಿಕಾಲದಲ್ಲಿ ಮೊದಲು ಅವು ಇದ್ದ ಕ್ರಮದಲ್ಲಿಯೇ ವೇದಗಳನ್ನು ಭಗವಂತನು ಸ್ಮರಿಸಿಕೊಂಡು, ಚತುರ್ಮುಖಬ್ರಹ್ಮನಿಗೆ ಉಪದೇಶಿಸುತ್ತಾನೆಂದು (ಶ್ರುತಿಯಲ್ಲಿ) ಹೇಳಿರುವುದರಿಂದ ವೇದಗಳ ನಿತ್ಯತ್ವ ಮತ್ತು

೩. ನನು ವೇದವಾಕ್ಯಾನಾಂ ಮೀಮಾಂಸಕೈಃ ಕಾರ್ಯಪರತಯೈವ ಪ್ರಾಮಾಣ್ಯಸ್ವೀಕಾರಾತ್ ಸಿದ್ಧಬ್ರಹ್ಮಪರವಾಕ್ಯಾನಾಂ ವ್ಯುತ್ಪತ್ತ್ಯಸಂಭವಾಚ್ಚ ಕಥಂ ಪ್ರಾಮಾಣ್ಯಮ್ ? ಇತಿ ಚೇತ್, ನ । ಸಿದ್ಧಬ್ರಹ್ಮಪರವಾಕ್ಯಾನಾಂ ಅಪಿ ಉಪಾಸನಾನ್ವಯಸ್ವೀಕಾರಾತ್ । 'ಪಿತಾ ತೇ ಸುಖಮಾಸ್ತೇ' ಇತಿ ಲೌಕಿಕಸಿದ್ಧ–ಪರವಾಕ್ಯಸ್ಯಾಪಿ ಬೋಧಕತ್ವದರ್ಶನಾತ್ ಬಾಲಾನಾಂ ಲೋಕೇ ಮಾತಾಪಿತೃಪ್ರಭೃತಿಭಿಃ ಅಂಬಾತಾತಮಾತುಲಚಂದ್ರಾದಿಷು ಅಂಗುಲ್ಯಾ ನಿರ್ದಿಶ್ಯ ತದಭಿಧಾಯಕಶಬ್ದಾನ್ ಪ್ರಯುಂಜಾನೈಃ ಕ್ರಮೇಣ ಭೂಯಃ ಶಿಕ್ಷಿತಾನಾಂ ತತ್ತದರ್ಥಬುದ್ಧ್ಯುತ್ಪತ್ತಿದರ್ಶನಾತ್ ವೇದೇऽಪಿ ಪರಿನಿಷ್ಪನ್ನೇ ಅಪ್ಯರ್ಥೇ ಶಬ್ದಸ್ಯ ಬೋಧಕತ್ವಮ್ ಸಂಭವತೀತಿ ನ ಅಪ್ರಾಮಾಣ್ಯಶಂಕಾವಕಾಶಃ ।

---

ಅಪೌರುಷೇಯತ್ವ ಸಿದ್ಧವಾಯಿತು. ಆದ್ದರಿಂದಲೇ ಇದಕ್ಕೆ ಇಂದ್ರಿಯ ದೋಷಗಳ ಸೋಂಕೂ ಇಲ್ಲ; ಬಾಧಕ ಜ್ಞಾನವೂ ಸಂಭವಿಸುವುದಿಲ್ಲ.

೩. ವೇದವಾಕ್ಯಗಳು ಕಾರ್ಯಪರವಾದಾಗ ಮಾತ್ರ ಪ್ರಮಾಣವೆಂದು ಮೀಮಾಂಸಕರು ಅಂಗೀಕರಿಸುವುದರಿಂದಲೂ ಸಿದ್ಧ ವಸ್ತುವಾದ ಬ್ರಹ್ಮವನ್ನು ಬೋಧಿಸುವ ವಾಕ್ಯಗಳಿಗೆ ಉತ್ಪತ್ತಿಯೇ ಸಂಭವಿಸುವುದಿಲ್ಲವಾದುದರಿಂದಲೂ ವೇದ ವಾಕ್ಯಗಳಿಗೆ ಪ್ರಮಾಣ್ಯವು ಸಂಭವಿಸುವುದಿಲ್ಲವೆಂಬ ಆಕ್ಷೇಪ ಸಲ್ಲದು[64]. ಸಿದ್ಧವಾದ ಬ್ರಹ್ಮ ವಸ್ತುವನ್ನು ಬೋದಿಸುವ ವಾಕ್ಯಗಳೂ ಉಪಾಸನೆಯನ್ನು ವಿಧಿಸುವುದರಲ್ಲಿ ಅನ್ವಯಿಸುವುವೆಂದು ಅಂಗೀಕರಿಸಿರುವುದು ಇದಕ್ಕೆ ಕಾರಣ. ಸಿದ್ಧವಾದ ಪದಾರ್ಥಗಳನ್ನು ಬೋಧಿಸುವ ಶಕ್ತಿ ವಾಕ್ಯಗಳಿಗೆ ಇದೆ ಎಂಬುದನ್ನು 'ನಿನ್ನ ತಂದೆ ಸುಖವಾಗಿದ್ದಾನೆ' ಮುಂತಾದ ವಾಕ್ಯಗಳಲ್ಲಿ ಕಾಣಬಹುದು. ಲೌಕಿಕವಾದ ಅನುಭವದಲ್ಲಿಯೂ ತಂದೆ, ತಾಯಿ ಮುಂತಾದವರು ಮಕ್ಕಳಿಗೆ ಅವರ ತಾಯಿ, ತಂದೆ, ಮಾವ, ಚಂದ್ರ ಮುಂತಾದವರನ್ನು ತಮ್ಮ ಬೆರಳಿನಿಂದ ತೋರುತ್ತಾ ಅವರವರನ್ನು ಕುರಿತ ಶಬ್ದಗಳನ್ನು ಪ್ರಯೋಗಿಸುತ್ತಾ ಕಲಿಸುತ್ತಾರೆ. ಹಾಗೆಯೇ ವೇದದಲ್ಲಿಯೂ ಸಹ ಸಿದ್ಧವಾದ ವಸ್ತುಗಳನ್ನೂ ಕೂಡ ತಿಳಿಸುವ (ಬೋಧಕ) ಶಕ್ತಿಯು ಶಬ್ದಗಳಿಗೆ ಉಂಟಾಗುತ್ತದೆ. ಆದುದರಿಂದ ಅಂಥ ವಾಕ್ಯಗಳು ಅಪ್ರಮಾಣವೆಂಬ ಶಂಕೆಗೆ ಅವಕಾಶವೇ ಇಲ್ಲ[65].

೪. ತರ್ಹಿ ಅಭಿಚಾರಾದಿ ಪ್ರತಿಪಾದಕವೇದಾಂಶಸ್ಯ ಕಥಂ ಪ್ರಾಮಾಣ್ಯಮ್ ಇತಿ ನ ಶಂಕನೀಯಮ್ । ತಸ್ಯ ದೃಷ್ಟಫಲದರ್ಶನೇನ ಅದೃಷ್ಟ ಸ್ವರ್ಗಾದಿ ಫಲಸಾಧನಾದೌ ಪ್ರವೃತ್ತಿಪ್ರಯೋಜಕತ್ವಾತ್.

೫. ಯೂಪಾದಿತ್ಯವಾಕ್ಯಂ ತು ಆದಿತ್ಯವತ್ ಯೂಪಪ್ರಕಾಶನ ಪರಮ್ । ಅತಃ ಕೃತ್ಸ್ನಸ್ಯ ವೇದಸ್ಯ ಪ್ರಾಮಾಣ್ಯಮ್ ।

೬. ಸ ಚ ವೇದಃ ಕರ್ಮಬ್ರಹ್ಮಪ್ರತಿಪಾದಕ—ಪೂರ್ವೋತ್ತರ ಭಾಗಾಭ್ಯಾಂ ದ್ವಿಧಾ ಭಿನ್ನಃ । ಆರಾಧನಕರ್ಮಪ್ರತಿಪಾದಕಂ ಪೂರ್ವ ಕಾಂಡಮ್ । ಆರಾಧ್ಯಪ್ರತಿಪಾದಕಂ ಉತ್ತರಕಾಂಡಮ್ । ಉಭಯೋರ್ಮೀಮಾಂಸಯೋಃ ಐಕಶಾಸ್ತ್ರ್ಯಮ್ ।

---

೪. ಹಾಗೆಯೇ ಅಭಿಚಾರವೇ ಮೊದಲಾದುವನ್ನು ಪ್ರತಿವಾದಿಸುವ ವೇದ ಭಾಗಕ್ಕೆ ಪ್ರಾಮಾಣ್ಯವನ್ನು ಅಂಗೀಕರಿಸುವ ವಿಚಾರದಲ್ಲಿಯೂ ಸಂದೇಹಕ್ಕವ ಕಾಶವಿಲ್ಲ. ಏಕೆಂದರೆ ಇವು ಕಣ್ಣಿಗೆ ಕಾಣಿಸುವ ಫಲಗಳನ್ನು ತೋರಿಸುವುದರ ಮೂಲಕ ಕಣ್ಣಿಗೆ ಕಾಣದ ಸ್ವರ್ಗವೇ ಮೊದಲಾದ ಫಲಗಳ ಸಾಧನೆಯಲ್ಲಿ ಪ್ರಯತ್ನವನ್ನು ಮೂಡಿಸುವುದರಲ್ಲಿ ಸಹಾಯಕವಾಗುತ್ತವೆ.

೫. 'ಯೂಪಸ್ತಂಭವು ಆದಿತ್ಯ' ಮುಂತಾದ ವಾಕ್ಯಗಳು ಆದಿತ್ಯನಂತೆ ಯೂಪ ಪ್ರಕಾಶಿಸುತ್ತಿದೆಯೆಂಬುದನ್ನು ತಿಳಿಸುತ್ತದೆ. ಆದ್ದರಿಂದಲೂ ಸಮಗ್ರವಾಗಿ ವೇದವು ಪ್ರಮಾಣ.

೬. ಈ ವೇದವು ಎರಡು ಭಾಗವನ್ನು ಹೊಂದಿದೆ. ಕರ್ಮವನ್ನು ಪ್ರತಿಪಾದಿಸುವ ಪೂರ್ವಭಾಗ ಮತ್ತು ಬ್ರಹ್ಮವನ್ನು ಪ್ರತಿಪಾದಿಸುವ ಉತ್ತರ ಭಾಗ ಎಂಬುವು ಅವು. (ಬ್ರಹ್ಮವಸ್ತುವಿನ) ಆರಾಧನ ರೂಪವಾದ ಕರ್ಮವನ್ನು ಪ್ರತಿಪಾದಿಸುವುದು ಪೂರ್ವಕಾಂಡ. ಆರಾಧನಕ್ಕೆ ವಿಷಯವಾದುದನ್ನು (ಬ್ರಹ್ಮವನ್ನು) ಪ್ರತಿಪಾದಿಸುವುದು ಉತ್ತರಕಾಂಡ. ಈ ಎರಡು ಮೀಮಾಂಸೆಗಳೂ ಕೂಡಿ ಒಂದೇ ಶಾಸ್ತ್ರವಾಗಿದೆ[67].

೭. ಭಾಗದ್ವಯಾತ್ಮಕೋ ವೇದಃ ಋಗ್ಯಜುಃ ಸಾಮಾಥರ್ವಣರೂಪೇಣ ಚತುರ್ಧಾವಸ್ಥಿತಃ । ಪುನರನಂತ ಪ್ರಕಾರಶ್ಚ ।

೮. ಋಗಾದಿಬಹುಪ್ರಕಾರವಾನ್ ವೇದೋ ಮಂತ್ರಾರ್ಥವಾದ–ವಿಧಿ ರೂಪೇಣ ತ್ರಿವಿಧಃ ।

೯. ಅನುಷ್ಠೇಯಾರ್ಥಪ್ರಕಾಶಕೋ ಮಂತ್ರಃ ।

೧೦. ವಿಧ್ಯಧೀನಪ್ರವೃತ್ತ್ಯುತ್ತಂಭಕವಾಕ್ಯವಿಶೇಷಃ ಅರ್ಥವಾದಃ ।

೧೧. ಹಿತಾನು ಶಾಸನವಾಕ್ಯಮಿಹ ವಿಧಿಃ । ಸ ಚ ತ್ರಿವಿಧಃ–ಅಪೂರ್ವ ಪರಿಸಂಖ್ಯಾ–ನಿಯಮ ಭೇದಾತ್ । ತೇ ಪುನರ್ನಿತ್ಯ–ನೈಮಿತ್ತಿಕ–ಕಾಮ್ಯಾದಿ ಭೇದಾತ್ ಬಹುವಿಧಾಃ ।

೧೨. 'ವ್ರೀಹೀನ್ ಪ್ರೋಕ್ಷತಿ' (ತೈ. ಬ್ರಾ.) ಇತಿ ಅಪೂರ್ವ ವಿಧಿಃ ।

---

೭. ಹೀಗೆ ಎರಡು ಭಾಗಗಳನ್ನು ಹೊಂದಿರುವ ವೇದ ಋಕ್ಕು, ಯಜುಸ್ಸು, ಸಾಮ, ಅಥರ್ವ ಎಂಬ ರೂಪದಲ್ಲಿ ನಾಲ್ಕು ಬಗೆಯಾಗಿದೆ. ಹಾಗೆಯೇ ಅದು ಅನಂತ ಪ್ರಕಾರಗಳನ್ನು ಹೊಂದಿದೆ.

೮. ಋಕ್ಕು ಮುಂತಾದ ಅನೇಕ ಪ್ರಕಾರಗಳನ್ನುಳ್ಳ ವೇದವು ಮಂತ್ರ, ಅರ್ಥವಾದ, ವಿಧಿ ಎಂದು ಮೂರು ವಿಧವಾಗಿದೆ.

೯. ಅನುಷ್ಠಿಸಬೇಕಾದ ವಿಷಯವನ್ನು ತಿಳಿಸುವುದು ಮಂತ್ರ[68].

೧೦. ವಿಧಿ ವಾಕ್ಯಕ್ಕೆ ಅಧೀನವಾಗಿರುವ ಕಾರ್ಯವನ್ನಾಚರಿಸುವಂತೆ ಪ್ರಶಂಸಿಸಿ ಪ್ರೇರಿಸುವ ವಾಕ್ಯವಿಶೇಷವು ಅರ್ಥವಾದ[69].

೧೧. ನಮಗೆ ಹಿತವಾದುದನ್ನು ನೇಮಿಸುವ ವಾಕ್ಯ ವಿಧಿವಾಕ್ಯ. ಇದು ಅಪೂರ್ವ ವಿಧಿ, ಪರಿಸಂಖ್ಯಾವಿಧಿ ಮತ್ತು ನಿಯಮ ವಿಧಿ ಎಂದು ಮೂರು ಬಗೆ. ಅವುಗಳೂ ನಿತ್ಯ, ನೈಮಿತ್ತಿಕ, ಕಾಮ್ಯ ಎಂದೆಂದು ಅನೇಕ ವಿಧಗಳಾಗಿವೆ.

೧೨. 'ಅಕ್ಕಿಯಕಾಳನ್ನು (ಜಲದಿಂದ) ಪ್ರೋಕ್ಷಿಸುತ್ತಾನೆ' ಎಂಬುದು ಅಪೂರ್ವ ವಿಧಿ[70].

೧೩. ಮನೋಮಯತ್ವಾದ್ಯುಪಾಸನವಿಧಿಃ ವಿಶಿಷ್ಟ ವಿಧಿಃ ।

೧೪. 'ಇಮಾಮಗೃಭ್ಣನ್' ಇತಿ ಅಶ್ವರಶನಾವಿಧಿಃ ಪರಿಸಂಖ್ಯಾವಿಧಿಃ ।

೧೫. ಗುರ್ವಭಿಗಮನಾದಿವಿಧಿರ್ನಿಯಮವಿಧಿಃ ।

೧೬. ಸಂಧ್ಯೋಪಾಸನಾದಿರ್ನಿತ್ಯವಿಧಿಃ ।

೧೭. ಜಾತೇಷ್ಟ್ಯಾದಿ ವಿಧಿಃ ನೈಮಿತ್ತಿಕವಿಧಿಃ ।

೧೮. ಜ್ಯೋತಿಷ್ಟೋಮಾದಿವಿಧಿಃ ಕಾಮ್ಯವಿಧಿಃ ।

೧೯. ಏವಂ ವಿಧ್ಯರ್ಥವಾದ ಮಂತ್ರಾತ್ಮಕಸ್ಯ ವೇದಸ್ಯ ಛಂದಃ ಕಲ್ಪಃ ಶಿಕ್ಷಾ ನಿರುಕ್ತಂ ಜ್ಯೋತಿಷಂ ವ್ಯಾಕರಣಮ್ ಇತ್ಯೇತಾನಿ ಅಂಗಾನಿ ।

---

೧೩. ಮನೋಮಯತ್ವವೇ ಮೊದಲಾದುವುಗಳೊಡನೆ ಉಪಾಸನೆ ಮಾಡಬೇಕೆಂದು ವಿಧಿಸುವ ವಿಧಿ ವಿಶಿಷ್ಟ ವಿಧಿ[71].

೧೪. 'ಈ ರಶನೆಯನ್ನು (ಪೂರ್ವಿಕರು) ಹಿಡಿದರು' ಎಂಬ ಮಂತ್ರದೊಡನೆ ಅಶ್ವದ ರಶನೆಯನ್ನು ಹಿಡಿಯಲು ವಿಧಿಸುವ ವಿಧಿಯು **ಪರಿಸಂಖ್ಯಾ** ವಿಧಿ[72].

೧೫. ಶಿಷ್ಯನು ಗುರುವಿನೆಡೆಗೆ ಸಮೀಪಿಸುವುದಕ್ಕನ್ವಯಿಸುವ ವಿಧಿ **ನಿಯಮ** ವಿಧಿ[73].

೧೬. ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಮಾಡಬೇಕಾದ ಸಂಧ್ಯೋಪಾಸನೆಯೇ ಮೊದಲಾದುವಕ್ಕೆ ಅನ್ವಯಿಸುವ ವಿಧಿ ನಿತ್ಯವಿಧಿ.

೧೭. ಜಾತಕರ್ಮವೇ ಮೊದಲಾದುವಕ್ಕನ್ವಯಿಸುವ ವಿಧಿಯು **ನೈಮಿತ್ತಿಕ** ವಿಧಿ ಎನ್ನಿಸುವುದು[74].

೧೮. ಜೋತಿಷ್ಟೋಮವೇ ಮೊದಲಾದುವನ್ನು ವಿಧಿಸುವ ವಿಧಿ **ಕಾಮ್ಯ** ವಿಧಿ[75].

೧೯. ಹೀಗೆ ವಿಧಿ, ಅರ್ಥವಾದ ಮತ್ತು ಮಂತ್ರಗಳನ್ನುಳ್ಳ ವೇದಕ್ಕೆ ಛಂದಸ್ಸು, ಕಲ್ಪ, ಶಿಕ್ಷಾ, ನಿರುಕ್ತ, ಜ್ಯೋತಿಷ ಮತ್ತು ವ್ಯಾಕರಣ ಎಂಬ ಆರೂ ಅಂಗಗಳು.

೨೦. ಛಂದಃ ಅನುಷ್ಟುಪ್ ತ್ರಿಷ್ಟುಬಾದಿ ಪ್ರತಿಪಾದನರೂಪಃ |

೨೧. ಶ್ರೌತಸ್ಮಾರ್ತ ಪ್ರಯೋಗ ಪ್ರತಿಪಾದನ ಪರಃ ಕಲ್ಪಃ |

೨೨. ಶಿಕ್ಷಾ ವರ್ಣನಿರ್ಣಯಾತ್ಮಿಕಾ |

೨೩. ನಿರುಕ್ತಂ ಅಪೂರ್ವಾರ್ಥ ಪ್ರತಿಪಾದಕಮ್ |

೨೪. ಜ್ಯೋತಿಷಂ ಅಧ್ಯಯನ ತದರ್ಥಾನುಷ್ಠಾನಕಾಲನಿರ್ಣಯಾತ್ಮಕಮ್ |

೨೫. ವ್ಯಾಕರಣಂ ತು ಸುಶಬ್ದ–ಸ್ವರಾದಿ–ಸಮರ್ಥನಪರಮ್ |

೨೬. ಏವಂ ಸಾಂಗಸ್ಯ ವೇದಸ್ಯ ಪ್ರಾಮಾಣ್ಯಂ ಸಿದ್ಧಮ್ |

---

೨೦. ಅನುಷ್ಟುಪ್, ತ್ರಿಷ್ಟುಪ್ ಮುಂತಾದ ಛಂದಸ್ಸುಗಳನ್ನು ವಿವೇಚಿಸುವ ಶಾಸ್ತ್ರ ಛಂದಸ್ಸು.

೨೧. ಶ್ರೌತ ಮತ್ತು ಸ್ಮಾರ್ತ ಕರ್ಮಗಳನ್ನು ಪ್ರತಿಪಾದಿಸುವ ಶಾಸ್ತ್ರ ಭಾಗವು ಕಲ್ಪ.

೨೨. (ಅಕಾರಾದಿ) ವರ್ಣಗಳ (ಮಂತ್ರಸ್ವರ ಮುಂತಾದುವುಗಳ) ಸ್ವರೂಪವನ್ನು ನಿರ್ಣಯಿಸುವ ಶಾಸ್ತ್ರ ಶಿಕ್ಷಾ.

೨೩. ಪದಗಳ ಅಪೂರ್ವಾರ್ಥಗಳನ್ನು ನಿರುಕ್ತ ಪ್ರತಿಪಾದಿಸುತ್ತದೆ.

೨೪. ವೇದಾಧ್ಯಯನವನ್ನೂ, ವೇದೋಕ್ತವಾದ ಕರ್ಮಗಳ ಅನುಷ್ಠಾನವನ್ನೂ ಯಾವ ಯಾವ ಕಾಲದಲ್ಲಿ ಮಾಡಬೇಕೆಂಬುದನ್ನು ನಿಶ್ಚಯಿಸುವ ಶಾಸ್ತ್ರ ಜ್ಯೋತಿಷ.

೨೫. ಸಾಧು ಶಬ್ದಗಳ ಪ್ರಯೋಗ ಮತ್ತು ಸ್ವರ ಮುಂತಾದುವನ್ನು ನಿರ್ಧರಿಸುವುದು ವ್ಯಾಕರಣ.

೨೬. ಷಡಂಗಗಳೊಡನೆ ಕೂಡಿದ ವೇದದ ಪ್ರಾಮಾಣ್ಯ ಹೀಗೆ ಸಿದ್ಧವಾಗಿದೆ.

೨೭. ಅಥ ಶ್ರುತ್ಯವಿರುದ್ಧಾಚಾರ–ವ್ಯವಹಾರ–ಪ್ರಾಯಶ್ಚಿತ್ತಾದಿ ಪ್ರತಿಪಾದಿಕಾ ಆಪ್ತಪ್ರಣೀತಾ ಸ್ಮೃತಿಃ ಪ್ರಮಾಣಮ್ ।

೨೮. ಹಿರಣ್ಯಗರ್ಭಾದೀನಾಮಾಪ್ತತ್ವೇಽಪಿ ತೇಷಾಂ ಗುಣತ್ರಯವಶ್ಯತ್ವಸಂಭವಾತ್ ತತ್ ಕರ್ತೃಕ–ಯೋಗ–ಕಪಿಲಾದಿ ಸ್ಮೃತೀನಾಂ ಮನ್ವಾದಿ ಸ್ಮೃತ್ಯವಿರುದ್ಧಾಂಶ ಏವ ಪ್ರಮಾಣಮ್ । ತತ್ತ್ವ ವಿಪರ್ಯಾಸಾತ್ ವಿರುದ್ಧಾಂಶೋಽಪ್ರಮಾಣಮ್ ।

೨೯. ವೇದೋಪಬೃಂಹಣರೂಪ – ಇತಿಹಾಸಪುರಾಣಯೋರಪಿ ಪ್ರಾಮಾಣ್ಯಂ ಸ್ವತಃ ಸಿದ್ಧಮ್ ।

೩೦. ತತ್ರ ಭಾರತರಾಮಾಯಣಯೋಃ ಕ್ವಚಿತ್ ಕ್ವಚಿತ್ ವಿರೋಧಭಾನೇಽಪಿ ತತ್ತ್ವಾಂಶೇ ವೇದಾಂತವಾಕ್ಯವದವಿರೋಧೋ ಜ್ಞೇಯಃ ।

---

೨೭. (ಶ್ರುತಿಗಳಂತೆ) ಸ್ಮೃತಿಗಳೂ ಪ್ರಮಾಣ. ಇವು ಪರಮಾಪ್ತರುಗಳಿಂದ ಹೇಳಲ್ಪಟ್ಟಿವೆ. ಇವು ಶ್ರುತಿಗೆ ವಿರುದ್ಧವಲ್ಲದ ಆಚಾರಗಳು, ವ್ಯವಹಾರಗಳು ಹಾಗೂ ಪ್ರಯಶ್ಚಿತ್ತಗಳು ಮುಂತಾದವುಗಳನ್ನು ನಿರೂಪಿಸುತ್ತವೆ.

೨೮. ಹಿರಣ್ಯಗರ್ಭ ಮುಂತಾದವರು ಆಪ್ತರೇ ಆದಾಗ್ಯೂ ಅವರಿಗೂ ಸತ್ವರಜಸ್ತಮಸ್ಸೆಂಬ ಗುಣತ್ರಯಗಳು ಸಂಭವಿಸುವ ಕಾರಣ ಅವರು ರಚಿಸಿರುವ ಯೋಗ[76], ಕಪಿಲ[77], ಮುಂತಾದ ಸ್ಮೃತಿಗಳಲ್ಲಿ ಯಾವ ಯಾವ ಭಾಗಗಳು ಮನುಸ್ಮೃತಿ ಮುಂತಾದ ಸ್ಮೃತಿಗಳಿಗೆ ವಿರುದ್ಧವಾಗಿಲ್ಲವೋ ಅವು ಮಾತ್ರ ಪ್ರಮಾಣ. ಮನುಸ್ಮೃತಿಯೇ ಮೊದಲಾದವುಗಳಿಗೆ ವಿರುದ್ಧವಾದ ಅಂಶವು ತತ್ತ್ವವನ್ನು ತಲೆಕೆಳಕುಮಾಡುವ ಕಾರಣ ಪ್ರಮಾಣವಲ್ಲ

೨೯. ವೇದಕ್ಕೆ ಉಪಬೃಂಹಣಗಳಾಗಿರುವ[78] ಪುರಾಣಗಳ ಮತ್ತು ಇತಿಹಾಸಗಳ ಪ್ರಾಮಾಣ್ಯವೂ ಸ್ವತಃ ಸಿದ್ಧವೇ ಆಗಿದೆ.

೩೦. ಅವುಗಳಲ್ಲಿ ಭಾರತ ಮತ್ತು ರಾಮಾಯಣಗಳಲ್ಲಿ ಕೆಲಕೆಲವು ಎಡೆಗಳಲ್ಲಿ ಪರಸ್ಪರ ವಿರೋಧವು ಕಾಣುತ್ತಿದ್ದರೂ ತತ್ತ್ವಪ್ರತಿಪಾದಕವಾದ

೩೧. ಸರ್ಗಾದಿಪಂಚಕಪ್ರತಿಪಾದಕಪುರಾಣೇಷ್ವಪಿ ಸಾತ್ವಿಕ ರಾಜಸ ತಾಮಸಭೇದ ಭಿನ್ನೇಷು ತತ್ತ್ವಾಂಶೇ ವಿರೋಧಾಭಾವಾತ್ ವಿರುದ್ಧಾಂಶೋಽಪ್ರಮಾಣಮ್, ಅನ್ಯತ್ ಸರ್ವಂ ಪ್ರಮಾಣಮ್ | ಪಾಶುಪತಾದ್ಯಾಗಮಾ ಅಪಿ ತಥೈವ |

೩೨. ಆಗಮ–ದಿವ್ಯ–ತಂತ್ರ – ತಂತ್ರಾಂತರ – ಸಿದ್ಧಾಂತಭೇದಭಿನ್ನಸ್ಯ ಶ್ರೀಪಾಂಚರಾತ್ರಾಗಮಸ್ಯ ಕ್ವಚಿದಪಿ ವೇದ ವಿರೋಧಾಭಾವಾತ್ ಕಾರ್ತ್ಸ್ನ್ಯೇನ ಪ್ರಾಮಾಣ್ಯಮ್ | ಏವಂ ವೈಖಾನಸಾಗಮಸ್ಯಾಪಿ |

೩೩. ಧರ್ಮಶಾಸ್ತ್ರಾಣಾಮಪಿ ತಥೈವ | ಶಾಂಡಿಲ್ಯ ಪರಾಶರ ಭಾರದ್ವಾಜ ವಸಿಷ್ಠ ಹಾರೀತಾದಯೋ ಧರ್ಮಶಾಸ್ತ್ರ ಪ್ರಣೇತಾರಃ |

---

ಭಾಗಗಳು ವೇದಾಂತ ವಾಕ್ಯಗಳಂತೆ ವಿರೋಧವಿನಿತಿಲ್ಲದೆ ಪ್ರಮಾಣಗಳಾಗಿವೆ ಎಂದು ತಿಳಿಯಬೇಕು.

೩೧. (ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ ಎಂಬ) ಸೃಷ್ಟಿ ಮೊದಲಾದ ಐದು ಅಂಶಗಳನ್ನು ಪ್ರತಿಪಾದಿಸುವ ಪುರಾಣಗಳು ಸಾತ್ವಿಕ ರಾಜಸ ಮತ್ತು ತಾಮಸ ಎಂಬುದಾಗಿ[79] ಮೂರು ಬಗೆಯಾಗಿರುತ್ತಿದ್ದರೂ ಸಹ ತತ್ತ್ವಾಂಶದಲ್ಲಿ ವಿರೋಧವೇ ಇಲ್ಲದ ಕಾರಣ ಯಾವ ಯಾವ ಭಾಗಗಳು ತತ್ತ್ವಾಂಶಕ್ಕೆ ವಿರುದ್ಧವಾಗಿವೆಯೋ ಅವು ಮಾತ್ರ ಪ್ರಮಾಣವಲ್ಲ. ಉಳಿದುದೆಲ್ಲವೂ ಪ್ರಮಾಣ. ಪಾಶುಪತ ಮೊದಲಾದ ಆಗಮಗಳ ವಿಚಾರದಲ್ಲಿಯೂ ಹೀಗೆಯೇ ತಿಳಿಯಬೇಕು.[80].

೩೨. ಆಗಮ, ದಿವ್ಯ, ತಂತ್ರ, ತಂತ್ರಾಂತರ ಎಂಬ ಸಿದ್ಧಾಂತ ಭೇದ ಗಳನ್ನೊಳಗೊಂಡಿರುವ ಪಾಂಚರಾತ್ರಾಗಮವು ಸ್ವಲ್ಪವೂ ವೇದಕ್ಕೆ ವಿರೋಧ ವಾಗಿಲ್ಲದಿರುವ ಕಾರಣ ಸಮಗ್ರವಾಗಿ ಪ್ರಮಾಣವಾಗಿದೆ. ಹೀಗೆಯೇ ವೈಖಾನಸಾ ಗಮವೂ ಸಹ[81].

೩೩. ಹಾಗೆಯೇ ಧರ್ಮಶಾಸ್ತ್ರಗಳೂ ಪ್ರಮಾಣಗಳು. ಶಾಂಡಿಲ್ಯ,

೩೪. ಶಿಲ್ಪಾಯುರ್ವೇದ ಗಾಂಧರ್ವಭರತಾದಿಕಮಪಿ ಉಪಯುಕ್ತಾಂಶೇ ತಥೈವ ।

೩೫. ಶಿಲ್ಪೋ ನಾಮ ಕರ್ಷಣಾದಿ ಗೋಪುರಪ್ರಾಕಾರ ನಿರ್ಮಾಣಾದಿ ಪ್ರತಿಪಾದಕಃ ।

೩೬. ಆಯುರ್ವೇದೋ ವೈದ್ಯಕಮ್ ।

೩೭. ಗಾಂಧರ್ವೋ ನಾಮ ಗಾನಾದಿನಿರೂಪಕಃ ।

೩೮. ಭರತಾಗಮೋ ನೃತ್ತಾದಿ ನಿರೂಪಕಃ ।

೩೯. ಪುನಶ್ಚತುಃಷಷ್ಟಿಕಲಾರೂಪೇಷು ಶಾಸ್ತ್ರೇಷು ತತ್ತ್ವೋಪಾಯ ಪುರುಷಾರ್ಥೋಪಯುಕ್ತಾನಿ ಪ್ರಮಾಣಾನಿ ।

---

ಪರಾಶರ, ಭಾರದ್ವಾಜ, ವಸಿಷ್ಠ, ಹಾರೀತ ಮುಂತಾದವರು ಧರ್ಮಶಾಸ್ತ್ರಕಾರರಾಗಿದ್ದಾರೆ.

೩೪. ಶಿಲ್ಪ, ಆಯುರ್ವೇದ, ಗಾಂಧರ್ವ, ಭರತನ ನಾಟ್ಯಶಾಸ್ತ್ರ ಮುಂತಾದುವುಗಳೆಲ್ಲದರಲ್ಲಿಯೂ ಉಪಯುಕ್ತವಾದ ಅಂಶಗಳೂ ಸಹ ಪ್ರಮಾಣಗಳು.

೩೫. ಭೂಮಿಯನ್ನು ಉಳುವುದೇ ಮುಂತಾದವು, ಗೋಪುರ, ಪ್ರಾಕಾರ ಮುಂತಾದುವುಗಳನ್ನು ನಿರ್ಮಾಣಮಾಡುವುದು ಇವೇ ಮೊದಲಾದುವನ್ನು ವಿವೇಚಿಸುವ ಶಾಸ್ತ್ರ ಶಿಲ್ಪವೆನ್ನಿಸುವುದು.

೩೬. ಆಯುರ್ವೇದವೆಂಬುದು ವೈದ್ಯಶಾಸ್ತ್ರ.

೩೭. ಸಂಗೀತ ಮೊದಲಾದುವನ್ನು ನಿರೂಪಿಸುವ ಶಾಸ್ತ್ರವು ಗಾಂಧರ್ವ ಶಾಸ್ತ್ರವೆನ್ನಿಸುವುದು.

೩೮. ಭರತನ ನಾಟ್ಯಶಾಸ್ತ್ರವು ನೃತ್ತ ಮುಂತಾದುವನ್ನು ನಿರೂಪಿಸುತ್ತದೆ.

೩೯. ಅರವತ್ತನಾಲ್ಕು ಕಲೆಗಳ ರೂಪದಲ್ಲಿರುವ ಅನೇಕಾನೇಕ ಶಾಸ್ತ್ರಗಳಲ್ಲಿ ಯಾವ ಯಾವ ಭಾಗಗಳು ತತ್ತ್ವ, ಪುರುಷಾರ್ಥ, ಉಪಾಯ

೪೦. ವಕುಲಾಭರಣಾದಿ ಸೂರಿಸೂಕ್ತಯಃ ಕಾರ್ತ್ಸ್ನ್ಯೇನ ಪ್ರಮಾಣ ತರಾಃ ।

೪೧. ಶ್ರೀಮದ್ರಾಮಾನುಜಾಚಾರ್ಯಪ್ರಭೃತಿಭಿಃ ಪ್ರಣೀತಾಃ ಶ್ರೀಭಾಷ್ಯಾದಿ ಪ್ರಬಂಧಾಃ ಪ್ರಮಾಣತಮಾಃ ।

೪೨. ಪುರುಷ ಸ್ವಾತಂತ್ರ್ಯಾಧೀನ–ರಚನಾವಿಶೇಷ–ವಿಶಿಷ್ಟಂ ಪೌರುಷೇಯಮ್ । ಏತೇನ ಕಾವ್ಯನಾಟಕಾಲಂಕಾರಾದೀನಾಮಪಿ ಲಕ್ಷಣಮುಕ್ತಂ ಸ್ಯಾತ್ ।

೪೩. ಏವಮ್ ಆಕಾಂಕ್ಷಾ–ಯೋಗ್ಯತಾ–ಸನ್ನಿಧಿಮಲ್ಲೌಕಿಕವಾಕ್ಯಾನ್ಯಪಿ ಪ್ರಮಾಣಾನಿ । ಯಥಾ–'ನದ್ಯಾಸ್ತೀರೇ ಪಂಚ ಫಲಾನಿ ಸಂತಿ' ಇತ್ಯಾದೀನಿ ।

---

ಮುಂತಾದುವುಗಳಿಗೆ ಸಂಬಂಧಿಸಿದಂತೆ ಉಪಯುಕ್ತವಾಗಿವೆಯೋ ಅವೆಲ್ಲ ಪ್ರಮಾಣಗಳು.

೪೦. ವಕುಳಾಭರಣರೇ ಮೊದಲಾದ ದಿವ್ಯಸೂರಿಗಳ ಶ್ರೀಸೂಕ್ತಿಗಳು ಪೂರ್ಣವಾಗಿ ಪ್ರಮಾಣಗಳು.

೪೧. ಶ್ರೀಮದ್ರಾಮಾನುಜಾಚಾರ್ಯರೇ ಮುಂತಾದ ಆಚಾರ್ಯರುಗಳಿಂದ ರಚಿತವಾಗಿರುವ ಶ್ರೀಭಾಷ್ಯಾದಿ ಗ್ರಂಥಗಳು ಅತ್ಯಂತವಾಗಿ ಪ್ರಮಾಣಗಳಾಗಿವೆ.

೪೨. ಮನುಷ್ಯನೊಬ್ಬನ ಸ್ವಾತಂತ್ರ್ಯಕ್ಕೆ ಒಳಗಾದ ರಚನಾ ವಿಶೇಷವನ್ನುಳ್ಳ ಕೃತಿಯು ಪೌರುಷೇಯವೆನ್ನಿಸುವುದು. ಇದರಿಂದ ಕಾವ್ಯ, ನಾಟಕ ಅಲಂಕಾರ ಮೊದಲಾದವುಗಳೆಲ್ಲಕ್ಕೂ ಲಕ್ಷಣವನ್ನು ಹೇಳಿದಂತಾಯಿತು.

೪೩. ಈ ಕ್ರಮದಲ್ಲಿ ಆಕಾಂಕ್ಷೆ, ಯೋಗ್ಯತೆ, ಸನ್ನಿಧಿ[82] ಮುಂತಾದವುಗಳಿಂದ ಕೂಡಿರುವ ಲೌಕಿಕ ವಾಕ್ಯಗಳೂ ಸಹ ಪ್ರಮಾಣಗಳೇ. 'ನದಿಯ ತೀರದಲ್ಲಿ ಐದು ಹಣ್ಣುಗಳಿವೆ' ಮುಂತಾದವು ಇಂಥವು.

೪೪. ಏವಮ್ ವೈದಿಕಲೌಕಿಕಸಾಧಾರಣಂ ವಾಕ್ಯಂ ದ್ವಿವಿಧಂ–ಮುಖ್ಯ ವೃತ್ತಿ–ಗೌಣವೃತ್ತಿ–ಭೇದಾತ್ ।

೪೫. ಮುಖ್ಯವೃತ್ತಿರಭಿಧಾವೃತ್ತಿಃ । ಯಥಾ – ಸಿಂಹಶಬ್ದಸ್ಯ ಮೃಗೇಂದ್ರೇ ।

೪೬. ಸಾ ಅಭಿಧಾವೃತ್ತಿಃ ಯೋಗರೂಢ್ಯಾದಿ ವೃತ್ತಿಭೇದವಶಾತ್ ಬಹುವಿಧಾ ।

೪೭. ಮುಖ್ಯಾರ್ಥಬಾಧೇ ಸತಿ ತದಾಸನ್ನೇಽರ್ಥೇ ವೃತ್ತಿರೌಪಚಾರಿಕೀ । ಸಾ ದ್ವಿವಿಧಾ–ಲಕ್ಷಣಾಗೌಣೀಭೇದಾತ್ । ಪ್ರಥಮಾ ಯಥಾ–'ಗಂಗಾಯಾಂ ಘೋಷ' ಇತ್ಯತ್ರ ಘೋಷಾಧಿಕರಣಸ್ಯ ಬಾಧಾತ್ ತೀರೇ ಲಕ್ಷಣಾ । ದ್ವಿತೀಯಾ ಯಥಾ–'ಸಿಂಹೋ ದೇವದತ್ತ' ಇತ್ಯತ್ರ ದೇವದತ್ತೇ ಶೌರ್ಯಾದಿಗುಣ ಯೋಗಃ ।

---

೪೪. ವೈದಿಕ ಹಾಗೂ ಲೌಕಿಕಕ್ಕೆ ಸಮಾನವಾಗಿರುವ ವಾಕ್ಯವು ಮುಖ್ಯ ವೃತ್ತಿ ಮತ್ತು ಗೌಣವೃತ್ತಿ ಎಂದು ಎರಡು ವಿಧವಾಗಿದೆ.

೪೫. ಮುಖ್ಯವೃತ್ತಿ ಎಂಬುದಕ್ಕೆ ಅಭಿಧಾವೃತ್ತಿಎಂದು ಹೆಸರು. ಸಿಂಹ ಶಬ್ದಕ್ಕೆ ಮೃಗೇಂದ್ರ ಎಂಬ ಅರ್ಥ ಮುಖ್ಯವೃತ್ತಿ.

೪೬. ಈ ಅಭಿಧಾವೃತ್ತಿಯು ಯೋಗ, ರೂಢಿ ಮೊದಲಾದ ವೃತ್ತಿ ಭೇದಗಳ ಕಾರಣ ಬಗೆ ಬಗೆಯಾಗಿದೆ[83].

೪೭. ಮುಖ್ಯಾರ್ಥಕ್ಕೆ ಬಾಧೆಯುಂಟಾದಾಗ ಅದಕ್ಕೆ ಸಮೀಪವಾದ ಅರ್ಥವೃತ್ತಿ ಔಪಚಾರಿಕೀ ಎನ್ನಿಸುವುದು. ಇದೂ ಸಹ ಲಕ್ಷಣಾ ಮತ್ತು ಗೌಣೀ ಎಂದು ಎರಡು ಬಗೆ. 'ಗಂಗೆಯಲ್ಲಿ ಹಳ್ಳಿ' ಎಂಬಲ್ಲಿ ಗಂಗಾನದಿಯಲ್ಲಿಯೇ ಹಳ್ಳಿಯಿರುವುದು ಬಾಧಿತವಾದ ಕಾರಣ ಗಂಗಾ ನದಿಯ ದಡದಲ್ಲಿ ಎಂಬ ಅರ್ಥ ಲಕ್ಷಣೆಯಿಂದ ಸೂಚಿತವಾಗುತ್ತದೆ. ಇದು ಲಕ್ಷಣಕ್ಕೆ ನಿದರ್ಶನ. 'ದೇವದತ್ತನು ಸಿಂಹ' ಎಂಬಲ್ಲಿ (ಸಿಂಹದ) ಶೌರ್ಯವೇ ಮೊದಲಾದ ಗುಣಗಳ ಯೋಗವನ್ನು ದೇವದತ್ತನಲ್ಲಿ ಹೇಳುವುದು ಗೌಣೀ ಎಂಬುದಕ್ಕೆ ಉದಾಹರಣೆ.

೪೮. ಏವಂ ವೈದಿಕಲೌಕಿಕರೂಪಂ ಸರ್ವಂ ವಾಕ್ಯಜಾತಂ ಸವಿಶೇಷ ವಿಷಯಕಂ ಭೇದವಿಷಯಕಂ ಚ ।

೪೯. ಶರೀರವಾಚಕಶಬ್ದಾನಾಂ ಯಥಾ ಶರೀರಿಣಿ ಪರ್ಯವಸಾನಮ್, ಏವಂ ಭಗವಚ್ಛರೀರಭೂತ ಬ್ರಹ್ಮರುದ್ರಾಗ್ನೀಂದ್ರಾದಿ ಚಿದ್ವಾಚಕ ಶಬ್ದಾನಾಂ ತಥಾ ಶರೀರಭೂತ–ಪ್ರಕೃತಿ–ಕಾಲಾಕಾಶ–ಪ್ರಾಣಾದ್ಯಚಿದ್ವಾಚಕಶಬ್ದಾನಾಂ ಚ ಶರೀರಿಣಿ ಪರಮಾತ್ಮನಿ ಶ್ರೀ ನಾರಾಯಣೇ ಪರ್ಯವಸಾನಮ್ ಉಪಪಾದಯಂತಿ ಆಚಾರ್ಯಾಃ ।

೫೦. ವೇದಾಂತ ಜ್ಞಾನಾತ್ ವ್ಯುತ್ಪತ್ತಿಃ ಪೂರ್ಯತ ಇತ್ಯುಕ್ತಮ್ ।

೫೧. ನಾರಾಯಣಸ್ಯ ಸರ್ವಶಬ್ದವಾಚ್ಯತ್ವಂ ಸರ್ವಶರೀರಕತ್ವಮ್ ಇತ್ಯಾದಿಕಂ ತು ಉಪರಿ ಈಶ್ವರನಿರೂಪಣೇ ಪ್ರತಿಪಾದಯಿಷ್ಯಾಮಃ ।

---

೪೮. ಹೀಗೆ ವೈದಿಕವಾದ ಮತ್ತು ಲೌಕಿಕವಾದ ಎಲ್ಲ ವಾಕ್ಯಗಳೂ ವಿಶೇಷಣಗಳಿಂದ ಕೂಡಿದ ವಿಷಯುಗಳನ್ನೇ ಕುರಿತವಾಗಿವೆ. ಹಾಗೆಯೇ ಭೇದ ವಿಷಯಕವಾಗಿಯೂ ಇವೆ[84].

೪೯. ಶರೀರವನ್ನು ಹೇಳುವ ಶಬ್ದಗಳೆಲ್ಲಾ ಹೇಗೆ ಆ ಶರೀರಕ್ಕೆ ಧಾರಕನಾದ ಆತ್ಮನನ್ನು ಹೇಳುತ್ತವೆಯೋ ಹಾಗೆಯೇ ಭಗವಂತನಿಗೆ ಶರೀರವಾದ ಬ್ರಹ್ಮ, ರುದ್ರ, ಅಗ್ನಿ, ಇಂದ್ರ ಮೊದಲಾದ ಚೇತನರನ್ನು ಹೇಳುವ ಶಬ್ದಗಳೂ ಹಾಗೆಯೇ ಭಗವಂತನಿಗೆ ಶರೀರವಾಗಿರುವ ಪ್ರಕೃತಿ, ಕಾಲ, ಆಕಾಶ, ಪ್ರಾಣ ಮುಂತಾದ ಅಚೇತನ ಪದಾರ್ಥಗಳನ್ನು ಹೇಳುವ ಶಬ್ದಗಳೂ ಸಹ ಇವುಗಳೆಲ್ಲಕ್ಕೂ ಆತ್ಮನಾದ ಶ್ರೀಮನ್ನಾರಾಯಣನನ್ನೇ ಬೋಧಿಸುವುದರಲ್ಲಿ ಪರ್ಯವಸಾನ ಹೊಂದುತ್ತವೆಂದು ಆಚಾರ್ಯರು ಉಪದೇಶಿಸುತ್ತಾರೆ[85].

೫೦. ವೇದಾಂತದ ಜ್ಞಾನದಿಂದ ಶಬ್ದಗಳ ಅರ್ಥಜ್ಞಾನ ಪೂರ್ಣವಾಗುವುದೆಂದು (ಆಚಾರ್ಯರಿಂದ) ಹೇಳಲಾಗಿದೆ[86].

೫೧. ನಾರಾಯಣನು ಸರ್ವಶಬ್ದವಾಚ್ಯನೆಂಬುದನ್ನೂ ಸರ್ವವನ್ನೂ

೫೨. ಇತಿ ಶಬ್ದೋ ನಿರೂಪಿತಃ ।

ಇತಿ ಶ್ರೀ ವಾಧೂಲಕುಲತಿಲಕ ಶ್ರೀಮನ್ಮಹಾಚಾರ್ಯಸ್ಯ ಪ್ರಥಮದಾಸೇನ
ಶ್ರೀನಿವಾಸದಾಸೇನ ವಿರಚಿತಾಯಾಂ ಯತೀಂದ್ರಮತದೀಪಿಕಾಯಾಂ
ಶಬ್ದ ನಿರೂಪಣಂ ನಾಮ ತೃತೀಯೋಽವತಾರಃ

---

ಶರೀರವನ್ನಾಗಿ ಹೊಂದಿರುವನೆಂಬುವುದನ್ನೂ ಈಶ್ವರ ಪ್ರಕರಣದಲ್ಲಿ ಪ್ರತಿಪಾದಿಸಲಾಗುವುದು.

೫೨. ಇಷ್ಟೂ ಶಬ್ದ ಪ್ರಮಾಣದ ನಿರೂಪಣೆ ಆಯಿತು.

ಇಂತು ವಾಧೂಲಕುಲತಿಲಕನೂ ಮಹಾಚಾರ್ಯರ ಪ್ರಥಮ ದಾಸನೂ ಆದ
ಶ್ರೀನಿವಾಸದಾಸನಿಂದ ವಿರಚಿತವಾದ ಯತೀಂದ್ರಮತದೀಪಿಕೆಯಲ್ಲಿ
ಅನುಮಾನ ನಿರೂಪಣೆ ಎಂಬ ಮೂರನೆಯ ಅವತಾರ
ಮುಗಿದುದು.

## ಚತುರ್ಥೋಽವತಾರಃ
## ಪ್ರಕೃತಿಃ

೧. ಪ್ರಮಾಣನಿರೂಪಣಾನಂತರಂ ಪ್ರಮೇಯಂ ನಿರೂಪ್ಯತೇ। ಪ್ರಕರ್ಷೇಣ ಮೇಯಂ ಪ್ರಮೇಯಮ್ । ತಚ್ಚ ದ್ವಿವಿಧಂ–ದ್ರವ್ಯಾದ್ರವ್ಯಭೇದಾತ್ । ದ್ರವ್ಯಮ್ ಉಪಾದಾನಮ್ । ಅವಸ್ಥಾಶ್ರಯಮುಪಾದಾನಮ್ ।

೨. ನನು 'ದ್ರವ್ಯಗುಣಕರ್ಮಸಾಮಾನ್ಯ' ಇತ್ಯಾದಿನಾ ಮತಾಂತರಸ್ಥೈಃ ಷೋಢಾ ಪರಿಗಣನಾತ್ ಕಥಂ ದ್ರವ್ಯಾದ್ರವ್ಯಭೇದೇನ ದ್ವಿಧಾ ಸಮರ್ಥನಮ್ ಇತಿ ಚೇತ್ ಉಚ್ಯತೇ ।

೩. ಉತ್ಕ್ಷೇಪಣಾಪಕ್ಷೇಪಣಾಕುಂಚನ ಪ್ರಸಾರಣಗಮನ ಭೇದಾತ್ ಕರ್ಮ ಪಂಚಧಾವಸ್ಥಿತಮಿತಿ ಕಲ್ಪನೇ ಗೌರವಾತ್ 'ಚಲನಾತ್ಮಕಂ ಕರ್ಮ' ಇತಿ

---

## ನಾಲ್ಕನೆಯ ಅವತಾರ
## ಪ್ರಕೃತಿ

೧. ಪ್ರಮಾಣವನ್ನು ನಿರೂಪಿಸಿದ ನಂತರ ಈಗ ಪ್ರಮೇಯವನ್ನು ನಿರೂಪಿಸುತ್ತೇವೆ. ಸರಿಯಾಗಿಯೂ ಗಾಢವಾಗಿಯೂ ಯಾವದು ತಿಳಿಯಲ್ಪಡಬೇಕೋ ಅದು ಪ್ರಮೇಯ. ಅದು ದ್ರವ್ಯ–ಅದ್ರವ್ಯ ಎಂದು ಎರಡು ಬಗೆಯಾಗಿದೆ. ದ್ರವ್ಯವು ಉಪಾದಾನಕಾರಣ. ವಿವಿಧವಾದ ಅವಸ್ಥೆಗಳಿಗೆ ಆಶ್ರಯವಾಗಿರುವುದು ಉಪಾದಾನಕಾರಣ.

೨. ಇತರ ಮತಗಳವರು 'ದ್ರವ್ಯ, ಗುಣ, ಕರ್ಮ, ಸಾಮಾನ್ಯ' ಎಂದೆಂದು ಆರು ಬಗೆಯಾಗಿ ದ್ರವ್ಯ ವಿಭಾಗ ಮಾಡುವಲ್ಲಿ[7] ದ್ರವ್ಯ, ಅದ್ರವ್ಯ ಎಂದು ಎರಡೇ ಬಗೆಯಾಗಿ ವಿಭಾಗಮಾಡುವುದನ್ನು ಹೇಗೆ ಸಾಧಿಸುವುದು ಎಂದು ಆಕ್ಷೇಪಿಸಿದಲ್ಲಿ ಉತ್ತರ ಕೆಳಗೆ ಕಂಡಂತೆ ಇರುತ್ತದೆ.

೩. ಉತ್ಕ್ಷೇಪಣ, ಅಪಕ್ಷೇಪಣ, ಆಕುಂಚನ, ಪ್ರಸಾರಣ, ಗಮನ ಎಂಬ ಭೇದದ ಕಾರಣ ಕರ್ಮ ಐದು ಬಗೆಯಾಗಿದೆಯೆಂದೇ ನಿರೂಪಿಸುವುದು

ಏಕಧಾ ಏವ ಉಪಪತ್ತೇಃ ತಸ್ಯಾಪಿ ಸಂಯೋಗಮಾತ್ರಾಯ್ಯೈವೋಪಪತ್ತೇಃ, ಸಂಸ್ಥಾನಮೇವ ಜಾತಿರಿತಿ ಸಂಸ್ಥಾನಾತಿರೇಕಿಸಾಮಾನ್ಯಾನಂಗೀಕಾರಾತ್, ಸಮವಾಯೇ ಸಮವಾಯಾಂತರಾಂಗೀಕಾರೇ ಅನವಸ್ಥಾನಾತ್ ತಸ್ಯಾಪಿ ಸಂಯುಕ್ತವಿಶೇಷಣತಯ್ಯೈವೋಪಪತ್ತೇಃ, ಜೀವೇಶ್ವರಯೋರಣುತ್ವವಿಭುತ್ವಾದಿ ವಿಭಾಜಕ ಧರ್ಮಮಂತರೇಣ 'ವಿಶೇಷ' ಇತಿ ಕಿಂಚಿತ್ಪದಾರ್ಥಾಂತರಾಂಗೀಕಾರೇ ಗೌರವಾತ್, ಅತಃ ಕರ್ಮಸಾಮಾನ್ಯವಿಶೇಷಸಮವಾಯಾನಾಂ ಪೃಥಕ್ ದ್ರವ್ಯತ್ವೇನ ಅನಂಗೀಕಾರಾಚ್ಚ ದ್ರವ್ಯಮದ್ರವ್ಯಮಿತಿ ದ್ವಿಧಾ ವಿಭಾಗ ಉಪಪದ್ಯತೇ ।

---

ಗೌರವವಾದ(ಅನವಶ್ಯಕವಾದ ವಿಸ್ತಾರ) ಕಾರಣ 'ಚಲನಾತ್ಮಕವಾದುದು ಕರ್ಮ' ಎಂದು ಒಂದೇ ಬಗೆಯಾಗಿ ನಿರೂಪಿಸುವುದು ಯುಕ್ತವಾಗಿದ್ದು (ಚಲನಾತ್ಮಕ ವಾದ) ಈ ಕ್ರಿಯೆಯೂ ಕೇವಲ ಸಂಯೋಗದಿಂದ ಉಪಪನ್ನವಾಗುವುದೆಂದು ಸಾರುವುದು ಹೇಗೆ ಸಾಧುವಾಗಿದೆಯೋ ಹಾಗೆ ಮೇಲಿನ ವಿಭಾಗವೂ ಸಾಧುವೇ ಸರಿ ; ಹಾಗೆಯೇ ಸಂಸ್ಥಾನವೇ ಜಾತಿಯಾದ ಕಾರಣ ಆ ಸಂಸ್ಥಾನ ಕ್ಕಿಂತ ಬೇರೆಯಾದ ಯಾವ ಸಾಮಾನ್ಯವನ್ನೂ ನಾವು ಅಂಗೀಕರಿಸದೆ ಇರುವ ಕಾರಣದಿಂದಲೂ[88] ಮೇಲಿನ ವಿಭಾಗ ಯುಕ್ತವೇ ಸರಿ ; ಮತ್ತು ಒಂದು ಸಮವಾಯವನ್ನು ಸ್ಥಾಪಿಸಲು ಮತ್ತೊಂದು ಸಮವಾಯವನ್ನು ಅಂಗೀಕರಿಸುವಲ್ಲಿ ಅನವಸ್ಥಾದೋಷ ಬರುವುದರಿಂದ[89] ಸಂಯುಕ್ತ ವಿಶೇಷಣದಿಂದಲೇ ಆ ಸಮ ವಾಯವನ್ನು ವಿವರಿಸಲು ಸಾಧ್ಯವಾಗುವುದರಿಂದಲೂ ದ್ರವ್ಯಾದ್ರವ್ಯವಿಭಾಗ ಯುಕ್ತ. ಜೀವ ಮತ್ತು ಈಶ್ವರರ ಸ್ವರೂಪನಿರೂಪಕ ಧರ್ಮಗಳಾದ ಅಣುತ್ವ, ವಿಭುತ್ವ ಮುಂತಾದ ವಿಭಾಜಕ ಧರ್ಮಗಳನ್ನಂಗೀಕರಿಸದೆ 'ವಿಶೇಷ'ವೆಂಬ ಮತ್ತೊಂದು ಪದಾರ್ಥವನ್ನಂಗೀಕರಿಸುವಲ್ಲಿ ಕಲ್ಪನಾ ಗೌರವವುಂಟಾಗುವುದ ರಿಂದಲೂ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯಗಳನ್ನು ನಾವು ಬೇರೆ ಬೇರೆ ದ್ರವ್ಯಗಳೆಂದು ಅಂಗೀಕಾರಮಾಡದೇ ಇರುವುದರಿಂದಲೂ ಸಹ ದ್ರವ್ಯ, ಅದ್ರವ್ಯ ಎಂಬುದಾಗಿ ಪ್ರಮೇಯವನ್ನು ವಿಭಾಗಿಸಿರುವುದು ಸಮಂಜಸವೇ ಆಗಿದೆ.

೪. ಏತೇನ ಅಭಾವಃ ಸಪ್ತಮಪದಾರ್ಥ ಇತ್ಯಪಿ ನಿರಸ್ತಮ್ | ಅಭಾವಸ್ಯ ಭಾವಾಂತರರೂಪತ್ವಾತ್ | ಪ್ರಾಗಭಾವೋ ನಾಮ ಪೂರ್ವಾವಸ್ಥಾಪರಂಪರಾ | ಪ್ರಧ್ವಂಸಾಭಾವೋ ನಾಮ ಉತ್ತರಾವಸ್ಥಾಪರಂಪರಾ | ಅತ್ಯಂತಾಭಾವಾನ್ಯೋನ್ಯಾಭಾವೌ ತು ಧರ್ಮ್ಯಂತರಸ್ವರೂಪಾವೇವ | ಏತಸ್ಯ ಪ್ರತ್ಯಕ್ಷೇ ಅಂತರ್ಭಾವಃ ಪೂರ್ವಮುಕ್ತಃ | ಉಪಾದಾನಂ ದ್ರವ್ಯಮಿತ್ಯುಕ್ತಮ್ | ಗುಣಾಶ್ರಯೋ ದ್ರವ್ಯಮಿತಿ ಸಾಮಾನ್ಯಲಕ್ಷಣಂ ಸಂಭವತಿ |

೫. ತಾನಿ ಚ ದ್ರವ್ಯಾಣಿ ಷಟ್–ಪ್ರಕೃತಿ–ಕಾಲ–ಶುದ್ಧಸತ್ತ್ವ–ಧರ್ಮಭೂತ ಜ್ಞಾನ–ಜೀವೇಶ್ವರ ಭೇದಾತ್ |

೬. ತತ್ರ ಜಡಾಜಡರೂಪಯೋರ್ವಿಭಕ್ತಯೋರ್ಮಧ್ಯೇ ಜಡಲಕ್ಷಣಮುಚ್ಯತೇ–ಅಮಿಶ್ರಸತ್ತ್ವರಹಿತಂ ಜಡಮಿತಿ | ತತ್ ದ್ವಿವಿಧಂ–ಪ್ರಕೃತಿ ಕಾಲ ಭೇದಾತ್ |

---

೪. ಮೇಲಿನ ನಿರೂಪಣೆಯಿಂದ 'ಅಭಾವವು ಏಳನೆಯ ಪದಾರ್ಥ' ಎಂಬುದೂ ನಿರಾಕೃತವಾಯಿತು. ಏಕೆಂದರೆ ಅಭಾವವೂ ಸಹ ಭಾವದ ಮತ್ತೊಂದು ರೂಪವೇ ಆಗಿದೆ. ಪ್ರಾಗಭಾವವೆಂಬುದು ಪದಾರ್ಥವೊಂದರ ಹಿಂದಿನ ಅವಸ್ಥೆಯ ಪರಂಪರೆ. ಪ್ರಧ್ವಂಸಾಭಾವವೆಂಬುದು ಉತ್ತರಾವಸ್ಥೆಯ ಪರಂಪರೆ. ಅತ್ಯಂತಾಭಾವ ಮತ್ತು ಅನ್ಯೋನ್ಯಾಭಾವ ಎಂಬುವು ಬೇರೆ ಬೇರೆ ಧರ್ಮಿಗಳ ಸ್ವರೂಪವೇ ಆಗಿವೆ. ಈ ಅಭಾವವು ಪ್ರತ್ಯಕ್ಷದಲ್ಲಿ ಸೇರಿ ಹೋಗುವುದೆಂದು ಹಿಂದೆಯೇ ಹೇಳಿದ್ದೇವೆ. ದ್ರವ್ಯವೆಂಬುದು ಉಪಾದಾನ ಕಾರಣವೆಂಬುದನ್ನೂ ಸಹ ಮೊದಲೇ ಹೇಳಿದೆ. ಗುಣಗಳಿಗೆ ಆಶ್ರಯವಾಗಿರುವಿಕೆಯು ದ್ರವ್ಯದ ಸಾಮಾನ್ಯ ಲಕ್ಷಣ.

೫. ಈ ದ್ರವ್ಯಗಳು ಆರು. ಪ್ರಕೃತಿ, ಕಾಲ, ಶುದ್ಧಸತ್ತ್ವ, ಧರ್ಮಭೂತಜ್ಞಾನ, ಜೀವ, ಈಶ್ವರ ಎಂಬುವು ಅವು.

೬. ಜಡ ಮತ್ತು ಅಜಡ ಎಂದು ವಿಭಾಗಿಸಲ್ಪಟ್ಟಿರುವ ದ್ರವ್ಯಗಳಲ್ಲಿ ಜಡದ್ರವ್ಯದ ಲಕ್ಷಣವನ್ನು ಈಗ ಹೇಳುತ್ತೇವೆ. ಶುದ್ಧ ಸತ್ತ್ವದಿಂದ ರಹಿತವಾದುದು ಜಡ. ಅದು ಪ್ರಕೃತಿ, ಕಾಲ ಎಂದು ಎರಡು ಬಗೆ.

೭. ತತ್ರ ಸತ್ತ್ವರಜಸ್ತಮೋರೂಪಗುಣತ್ರಯಾಶ್ರಯರೂಪಾ ಪ್ರಕೃತಿಃ । ಸಾ ನಿತ್ಯಾ ಅಕ್ಷರಾ ಅವಿದ್ಯಾ ಮಾಯೇತಿ ಶಬ್ದವಾಚ್ಯಾ ಚ । ತಸ್ಯಾ ಭಗವತ್ಸಂಕಲ್ಪಾಧೀನಗುಣವೈಷಮ್ಯಾತ್ ಕಾರ್ಯೋನ್ಮುಖಾವಸ್ಥಾ ಅವ್ಯಕ್ತ ಶಬ್ದೇನೋಚ್ಯತೇ । ತಸ್ಮಾನ್ಮಹಾನುತ್ಪದ್ಯತೇ । ಸ ಮಹಾನ್ ಸಾತ್ವಿಕರಾಜಸತಾಮಸಭೇದಾತ್ ತ್ರಿಧಾವಸ್ಥಿತಃ । ಮಹತೋ ಅಹಂಕಾರ ಉತ್ಪದ್ಯತೇ । ಸೋಪಿ ಸಾತ್ವಿಕಾಹಂಕಾರೋ ರಾಜಸಾಹಂಕಾರಸ್ತಾಮಸಾಹಂಕಾರಶ್ಚೇತಿ ತ್ರಿವಿಧೋ ಭವತಿ । ಏತೇಷಾಂ ತ್ರಯಾಣಾಂ ವೈಕಾರಿಕಸ್ತೈಜಸೋ ಭೂತಾದಿರಿತಿ ನಾಮಾಂತರಾಣ್ಯಪಿ ಸಂಭವಂತಿ । ತೇಷು ವೈಕಾರಿಕ ಇತಿ ಪ್ರಸಿದ್ಧಾದ್ರಾಜಸಾಹಂಕಾರಸಹಕೃತಾತ್ ಸಾತ್ವಿಕಾಹಂಕಾರಾದೇಕಾದಶೇಂದ್ರಿಯಾಣಿ ಜಾಯಂತೇ ।

೮. ಸಾತ್ವಿಕಾಹಂಕಾರೋಪಾದಾನಕಂ ದ್ರವ್ಯಮಿಂದ್ರಿಯಂ ಇತಿ

---

೭. ಇವುಗಳಲ್ಲಿ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಗೆ ಆಶ್ರಯವಾಗಿರುವ ಸ್ವರೂಪವನ್ನುಳ್ಳದ್ದು ಪ್ರಕೃತಿ. ಅದು ನಿತ್ಯವಾದುದು. ಅಕ್ಷರಾ, ಅವಿದ್ಯಾ, ಮಾಯಾ ಎಂದು ಅದನ್ನು ಕರೆಯುತ್ತಾರೆ. ಭಗವಂತನ ಸಂಕಲ್ಪಕ್ಕನುಗುಣವಾಗಿ ಉಂಟಾಗುವ ಗುಣವೈಷಮ್ಯದ ಕಾರಣ ಅದು ಕಾರ್ಯೋನ್ಮುಖವಾದ ಅವಸ್ಥೆಯಲ್ಲಿರುವಾಗ ಅವ್ಯಕ್ತ ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ. ಅದರಿಂದ ಮಹತ್ತತ್ತ್ವ ಹುಟ್ಟುತ್ತದೆ. ಆ ಮಹತ್ತತ್ತ್ವ ಸಾತ್ವಿಕ, ರಾಜಸ, ತಾಮಸ ಭೇದದ ಕಾರಣ ಮೂರು ಬಗೆಯಾಗಿರುತ್ತದೆ. ಮಹತ್ತತ್ತ್ವದಿಂದ ಅಹಂಕಾರ ತತ್ತ್ವ ಹುಟ್ಟುತ್ತದೆ. ಅದೂ ಸಹ ಸಾತ್ವಿಕಾಹಂಕಾರ, ರಾಜಸಾಹಂಕಾರ ಮತ್ತು ತಾಮಸಾಹಂಕಾರ ಎಂದು ಮೂರು ಬಗೆಯಾಗಿರುತ್ತದೆ. ಈ ಮೂರಕ್ಕೂ ಕ್ರಮವಾಗಿ ವೈಕಾರಿಕ, ತೈಜಸ ಮತ್ತು ಭೂತಾದಿ ಎಂಬ ಬೇರೆ ಹೆಸರುಗಳುಂಟು. ಅವುಗಳಲ್ಲಿ 'ವೈಕಾರಿಕ'ವೆಂದು ಪ್ರಸಿದ್ಧವಾದ ಸಾತ್ವಿಕಾಹಂಕಾರವು ರಾಜಸಾಹಂಕಾರದ ಸಹಕಾರದಿಂದ ಹನ್ನೊಂದು ಇಂದ್ರಿಯಗಳನ್ನೂ ಉಂಟುಮಾಡುತ್ತದೆ.

೮. ಆದ್ದರಿಂದ 'ಸಾತ್ವಿಕಾಹಂಕಾರವನ್ನು ಉಪಾದಾನ ಕಾರಣವನ್ನಾಗಿ

ಇಂದ್ರಿಯ ಲಕ್ಷಣಮ್ । ಇಂದ್ರಿಯಂ ದ್ವಿವಿಧಂ–ಜ್ಞಾನೇಂದ್ರಿಯಂ ಕರ್ಮೇಂದ್ರಿಯಂ ಚೇತಿ ।

೯. ಜ್ಞಾನ ಪ್ರಸರಣ ಶಕ್ತಮಿಂದ್ರಿಯಂ ಜ್ಞಾನೇಂದ್ರಿಯಮ್ । ತತ್ ಷೋಢಾ–ಮನಃ ಶ್ರೋತ್ರಚಕ್ಷುರ್ಘ್ರಾಣರಸನಾತ್ವಗ್ಭೇದಾತ್ ।

೧೦. ಸ್ಮೃತ್ಯಾದಿಕರಣಂ ಇಂದ್ರಿಯಂ ಮನಃ । ತಚ್ಚ ಹೃದಯ ಪ್ರದೇಶವೃತ್ತಿ ಬುದ್ಧ್ಯಹಂಕಾರಚಿತ್ತಾದಿಶಬ್ದವಾಚ್ಯಂ ಬಂಧಮೋಕ್ಷಹೇತು ಭೂತಂ ಚ ।

೧೧. ಶಬ್ದಾದಿಪಂಚಕೇ ಶಬ್ದಮಾತ್ರಗ್ರಹಣಶಕ್ತಮಿಂದ್ರಿಯಂ ಶ್ರೋತ್ರಮ್ । ತನ್ಮನುಷ್ಯಾದೀನಾಂ ಕರ್ಣ ಶಷ್ಕುಲ್ಯವಚ್ಛಿನ್ನಪ್ರದೇಶವೃತ್ತಿ । ದ್ವಿಜಿಹ್ವಾನಾಂ ನಯನವೃತ್ತಿ ।

---

ಹೊಂದಿರುವ ದ್ರವ್ಯ ಇಂದ್ರಿಯ' ಎಂಬುದು ಇಂದ್ರಿಯದ ಲಕ್ಷಣವಾಗಿದೆ. ಈ ಇಂದ್ರಿಯವು ಜ್ಞಾನೇಂದ್ರಿಯ ಮತ್ತೆ ಕರ್ಮೇಂದ್ರಿಯ ಎಂದು ಎರಡು ವಿಧ.

೯. ಯಾವುದು ಜ್ಞಾನವನ್ನು ಪ್ರಸಾರ ಮಾಡುವ ಸಾಮರ್ಥ್ಯ ಹೊಂದಿದೆಯೋ ಅದು ಜ್ಞಾನೇಂದ್ರಿಯ. ಇದು ಮನಸ್ಸು, ಕಿವಿ, ಕಣ್ಣು, ಮೂಗು, ನಾಲಗೆ ಮತ್ತು ಚರ್ಮ ಎಂದು ಆರು ವಿದ.

೧೦. ನೆನಪು ಮುಂತಾದವುಗಳನ್ನುಂಟುಮಾಡುವ ಇಂದ್ರಿಯ ಮನಸ್ಸು. ಅದು ಹೃದಯಪ್ರದೇಶದ ಮಧ್ಯದಲ್ಲಿ ನೆಲಸಿದೆ. ಬುದ್ಧಿ, ಅಹಂಕಾರ, ಚಿತ್ತ ಮೊದಲಾದ ಶಬ್ದಗಳಿಂದ ಅದನ್ನು ಹೇಳುತ್ತಾರೆ. ಈ ಮನಸ್ಸೇ ಬಂಧಕ್ಕೂ ಮೋಕ್ಷಕ್ಕೂ ಕಾರಣವಾದುದು[೨೦].

೧೧. ಶಬ್ದವೇ ಮೊದಲಾದ ಐದು ಗುಣಗಳಲ್ಲಿ (ಶಬ್ದ ಸ್ಪರ್ಶ ರೂಪರಸ ಗಂಧ) ಶಬ್ದವನ್ನು ಮಾತ್ರ ಗ್ರಹಿಸಲು ಶಕ್ತವಾದ ಇಂದ್ರಿಯ ಶ್ರೋತ್ರೇಂದ್ರಿಯ. ಅದು ಮನುಷ್ಯರೇ ಮುಂತಾದವರಲ್ಲಿ ಚಕ್ಕುಲಿಯ ಆಕಾರದಲ್ಲಿರುವ ಕಿವಿಯ ಸುರುಳಿಯ ಪ್ರದೇಶದಲ್ಲಿದೆ. ಸರ್ಪಗಳಿಗೆ ಕಣ್ಣಿನಲ್ಲೇ ಇದೆ.

೧೨. ಏವಂ ರೂಪಮಾತ್ರಗ್ರಹಣ ಶಕ್ತಮಿಂದ್ರಿಯಂ ಚಕ್ಷುಃ | ತತ್ ಸರ್ವೇಷಾಂ ನಯನವೃತ್ತಿ |

೧೩. ಗಂಧಮಾತ್ರ ಗ್ರಹಣಶಕ್ತಮಿಂದ್ರಿಯಂ ಘ್ರಾಣಮ್ | ನಾಸಾಗ್ರವೃತ್ತಿ |

೧೪. ರಸಮಾತ್ರಗ್ರಹಣಶಕ್ತಮಿಂದ್ರಿಯಂ ರಸನೇಂದ್ರಿಯಂ | ಜಿಹ್ವಾಗ್ರವೃತ್ತಿ |

೧೫. ಸ್ಪರ್ಶಮಾತ್ರಗ್ರಹಣಶಕ್ತಮಿಂದ್ರಿಯಂ ತ್ವಗಿಂದ್ರಿಯಮ್ | ಸರ್ವಶರೀರವೃತ್ತಿ | ನಖದಂತ ಕೇಶಾದಿಷು ಪ್ರಾಣಮಾಂದ್ಯತಾರತಮ್ಯಾತ್ ಸ್ಪರ್ಶಾನುಪಲಂಭಃ |

೧೬. ಶ್ರೋತ್ರಾದೀಂದ್ರಿಯಾಣಾಂ ಭೌತಿಕತ್ವ ಪ್ರತಿಪಾದನಂ ಭೂತಾಪ್ಯಾಯಿತ್ವತ್ವೇನ ಔಪಚಾರಿಕಮ್ |

---

೧೨. ಹೀಗೆಯೇ ರೂಪವನ್ನು ಮಾತ್ರ ಗ್ರಹಿಸುವ ಶಕ್ತಿಯುಳ್ಳ ಇಂದ್ರಿಯ ಚಕ್ಷುರಿಂದ್ರಿಯ. ಅದು ಎಲ್ಲರಿಗೂ ಕಣ್ಣಿನಲ್ಲಿದೆ.

೧೩. ಗಂಧವನ್ನು ಮಾತ್ರ ಗ್ರಹಿಸುವ ಶಕ್ತಿಯುಳ್ಳ ಇಂದ್ರಿಯ ಘ್ರಾಣೇಂದ್ರಿಯ. ಅದು ಮೂಗಿನ ಅಗ್ರದಲ್ಲಿದೆ.

೧೪. ರಸಮಾತ್ರವನ್ನು (ರುಚಿಯನ್ನು) ಗ್ರಹಿಸುವ ಸಾಮರ್ಥ್ಯವುಳ್ಳ ಇಂದ್ರಿಯ ರಸನೇಂದ್ರಿಯ. ಅದು ನಾಲಗೆಯ ಅಗ್ರಭಾಗದಲ್ಲಿದೆ.

೧೫. ಸ್ಪರ್ಶವನ್ನು ಮಾತ್ರ ಗ್ರಹಿಸಲು ಶಕ್ತವಾದ ಇಂದ್ರಿಯ ತ್ವಗಿಂದ್ರಿಯ. ಅದು ಶರೀರದಾದ್ಯಂತ ಇದೆ. ಉಗುರು, ಹಲ್ಲು, ಕೂದಲು ಮೊದಲಾದವುಗಳಲ್ಲಿ ಮಂದವಾಗಿರುವ ಪ್ರಾಣದ ತಾರತಮ್ಯದ ಕಾರಣ ಸ್ಪರ್ಶವು ಗ್ರಹಿಸಲ್ಪಡುವುದಿಲ್ಲ.

೧೬. ಶ್ರೋತ್ರೇಂದ್ರಿಯವೇ ಮೊದಲಾದವು ಭೌತಿಕವೆಂದು ಪ್ರತಿಪಾದಿಸಿರುವುದು ಪಂಚಭೂತಗಳಿಂದ ಅವು ತೃಪ್ತಿಯನ್ನು ಹೊಂದುವ ಕಾರಣ ಔಪಚಾರಿಕವಾಗಿದೆ.

೧೭. ಏತೇಷಾಂ ವಿಷಯಸಂಬಂಧಃ ಕ್ವಚಿತ್ ಸಂಯೋಗಃ ಕ್ವಚಿತ್ ಸಂಯುಕ್ತಾಶ್ರಯಣಮಿತಿ ವೃದ್ಧಸಂಪ್ರದಾಯಃ |

೧೮. ಉಚ್ಚಾರಣಾದಿಷು ಅನ್ಯತಮಕ್ರಿಯಾಶಕ್ತತ್ವಂ ಕರ್ಮೇಂದ್ರಿಯ ಸಾಮಾನ್ಯ ಲಕ್ಷಣಮ್ | ತಚ್ಚ ವಾಕ್ಪಾಣಿಪಾದ–ಪಾಯೂಪಸ್ಥ-ಭೇದಾತ್ ಪಂಚಧಾವಸ್ಥಿತಮ್ |

೧೯. ವರ್ಣೋಚ್ಚಾರಣಕರಣಮಿಂದ್ರಿಯಂ ವಾಕ್ | ಸಾ ಚ ಹೃತ್ಕಂಠ – ಜಿಹ್ವಾಮೂಲ–ತಾಲು–ದಂತೋಷ್ಠನಾಸಾಮೂರ್ಧರೂಪಸ್ಥಾನಾಷ್ಟಕವೃತ್ತಿಃ | ಮೃಗಾದಿಷು ಅದೃಷ್ಟವಿರಹಾತ್ ತದಭಾವಃ |

೨೦. ಶಿಲ್ಪಾದಿಕರಣಮಿಂದ್ರಿಯಂ ಪಾಣಿಃ | ಸ ಚ ಮನುಷ್ಯಾದೀನಾಂ ಅಂಗುಲ್ಯಾದಿವೃತ್ತಿಃ | ವಾರಣಾದೀನಾಂ ನಾಸಾವೃತ್ತಿಃ |

---

೧೭. ಈ ಇಂದ್ರಿಯಗಳಿಗೂ ವಿಷಯಗಳಿಗೂ ಉಂಟಾಗತಕ್ಕ ಸಂಬಂಧವು ಕೆಲವೆಡೆ ಸಂಯೋಗವೆಂದೂ ಮತ್ತೆ ಕೆಲವೆಡೆ ಸಂಯುಕ್ತಾಶ್ರಯಣವೆಂದೂ ಪ್ರಾಚೀನ ಸಂಪ್ರದಾಯವಿದೆ.

೧೮. ಉಚ್ಚಾರಣೆ ಮೊದಲಾದ ಕ್ರಿಯೆಗಳಲ್ಲಿ ಯಾವುದಾದರೊಂದು ಕ್ರಿಯಾಶಕ್ತಿಯನ್ನು ಹೊಂದಿರುವುದು ಕರ್ಮೇಂದ್ರಿಯದ ಸಾಮಾನ್ಯ ಲಕ್ಷಣ. ಅದು ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂದು ಐದು ಬಗೆಯಾಗಿದೆ.

೧೯. ವರ್ಣಗಳ ಉಚ್ಚಾರಣೆಗೆ ಸಾಧನವಾದ ಇಂದ್ರಿಯವೇ ವಾಕ್ಕು. ಅದು ಹೃದಯ, ಗಂಟಲು, ಜಿಹ್ವಾಮೂಲ, ತಾಲು (ನಾಲಗೆ), ದಂತ (ಹಲ್ಲು), ನಾಸಾ (ಮೂಗು), ಮೂರ್ಧ (ಬಾಯಿಯ ಮೇಲ್ಭಾಗ) ಎಂಬ ಎಂಟು ಸ್ಥಾನಗಳಲ್ಲಿ ಇದೆ. ಪ್ರಾಣಿಗಳೇ ಮೊದಲಾದವಲ್ಲಿ ಅದೃಷ್ಟವಿಲ್ಲದ ಕಾರಣ ಈ ವಾಕ್ಕು ಇಲ್ಲ.

೨೦. ಕಾಯಕ (ಶಿಲ್ಪ) ವನ್ನು ಮಾಡಲು ಸಾಧನವಾದ ಇಂದ್ರಿಯ ಪಾಣಿ. ಅದು ಮನುಷ್ಯರಲ್ಲಿ ಕೈಬೆರಳುಗಳೇ ಮೊದಲಾದವಲ್ಲಿರುತ್ತದೆ. ಆನೆಯೇ ಮೊದಲಾದವಲ್ಲಿ ಸೊಂಡಲಿನಲ್ಲಿರುತ್ತದೆ.

೨೧. ಸಂಚರಣಕರಣಮಿಂದ್ರಿಯಂ ಪಾದಃ । ಸ ಚ ಮನುಷ್ಯಾದೀನಾಂ ಚರಣವೃತ್ತಿಃ । ಭುಜಂಗಪತಂಗಾದೀನಾಂ ಉರಃಪಕ್ಷಾದಿವೃತ್ತಿಃ ।

೨೨. ಮಲಾದಿತ್ಯಾಗಕರಣಮಿಂದ್ರಿಯಂ ಪಾಯುಃ । ಸ ಚ ತತ್ತ ದವಯವವೃತ್ತಿಃ ।

೨೩. ಆನಂದವಿಶೇಷಕರಣಮಿಂದ್ರಿಯಂ ಉಪಸ್ಥಃ । ಸ ಚ ಮೇಹನಾದಿ ವೃತ್ತಿಃ ।

೨೪. ಏತಾನೀಂದ್ರಿಯಾಣ್ಯಣೂನಿ । ಪರಕಾಯಪ್ರವೇಶ ಲೋಕಾಂತರ ಗಮನಾದಿಷು ಚ ಜೀವೇನ ಸಹ ಗಮನಂ ಇಂದ್ರಿಯಾಣಾಮ್ । ಮುಕ್ತಿದಶಾಯಾಂ ಅಪ್ರಾಕೃತ ದೇಶಗಮನಾಸಂಭವಾದಿಹೈವ ಯಾವತ್ಪ್ರ ಲಯಂ ಸ್ಥಿತಿಃ । ಕರಣವಿಧುರೈರನ್ಯೈಃ ಪರಿಗ್ರಹೋ ವಾ । ಕರ್ಮೇಂದ್ರಿ

---

೨೧. ಚಲನೆಗೆ ಸಾಧನವಾದ ಇಂದ್ರಿಯ ಪಾದ. ಮಾನವರಲ್ಲಿ ಇದು ಕಾಲಿನ ಹೆಜ್ಜೆಗಳಲ್ಲಿರುತ್ತದೆ. ಸರ್ಪ, ಪಕ್ಷಿ ಮೊದಲಾದುವುಗಳಿಗೆ ಎದೆ, ರೆಕ್ಕೆ ಮುಂತಾದುವಲ್ಲಿರುತ್ತದೆ.

೨೨. ಮಲ ಮೊದಲಾದವನ್ನು ವಿಸರ್ಜಿಸಲು ಸಾಧನವಾದುದು ಪಾಯುರಿಂದ್ರಿಯ. ಅದು ಆಯಾ ಅವಯವಗಳಲ್ಲಿರುತ್ತದೆ.

೨೩. ವಿಶೇಷವಾದ ಆನಂದವನ್ನುಂಟುಮಾಡುವ ಇಂದ್ರಿಯ ಉಪಸ್ಥ. ಇದು ಜನನೇಂದ್ರಿಯದಲ್ಲಿರುತ್ತದೆ.

೨೪. ಈ ಇಂದ್ರಿಯಗಳೆಲ್ಲಾ ಅಣುಗಳು (ಸೂಕ್ಷ್ಮವಾದುವು). ಈ ಇಂದ್ರಿಯ ಗಳೆಲ್ಲಾ ಪರಕಾಯಪ್ರವೇಶ ಹಾಗೂ ಲೋಕಾಂತರ ಗಮನಗಳಲ್ಲಿ ಜೀವಾತ್ಮನನ್ನು ಹಿಂಬಾಲಿಸುತ್ತವೆ. ಮುಕ್ತಿದಶೆಯಲ್ಲಿ ಇವು ಅಪ್ರಾಕೃತ ದೇಶಕ್ಕೆ (ಜೀವನೊಡನೆ) ಹೋಗಲು ಸಾಧ್ಯವಿಲ್ಲದ ಕಾರಣ ಇಲ್ಲಿಯೇ ಪ್ರಳಯಕಾಲದವರೆಗೆ ಇರುತ್ತವೆ. ಅಥವಾ ಅಂಥ ಇಂದ್ರಿಯಗಳಿಲ್ಲದವರಿಂದ ಹೊಂದಲ್ಪಡುತ್ತವೆ. ಶರೀರ

ಯಾಣಾಂ ಶರೀರನಾಶಾನ್ನಾಶ ಇತಿ ಪಕ್ಷಸ್ತು ಶ್ರೀಭಾಷ್ಯಾದಿವಿರೋಧೇನ ಹೇಯಃ ।

೨೫. ಏತೇನ ಪುರುಷೇಂದ್ರಿಯಂ, ಸ್ತ್ರೀಂದ್ರಿಯಮ್, ಏಕೇಂದ್ರಿಯವಾದಃ, ತ್ವಗಿಂದ್ರಿಯೈಕತ್ವಸ್ವೀಕಾರಃ ಇತ್ಯಾದಿವಿಮತಪಕ್ಷಾಃ ನಿರಸ್ತಾಃ ।

೨೬. ರಾಜಸಾಹಂಕಾರಸಹಕೃತಾತ್ ಭೂತಾದಿಸಂಜ್ಞಕತಾಮಸಾಹಂಕಾರಾತ್ ಶಬ್ದಾದಿ ಪಂಚತನ್ಮಾತ್ರಾಣಿ ಆಕಾಶಾದಿ ಪಂಚ ಮಹಾಭೂತಾನಿ ಚ ಉತ್ಪದ್ಯಂತೇ ।

೨೭. ಭೂತಾನಾಮವ್ಯವಹಿತಸೂಕ್ಷ್ಮಾವಸ್ಥಾವಿಶಿಷ್ಟಂ ದ್ರವ್ಯಂ ತನ್ಮಾತ್ರಮ್ । ತದೇವ ಭೂತೋಪಾದಾನಮ್ ।

---

ನಾಶವಾದಾಗ ಕರ್ಮೇಂದ್ರಿಯಗಳೂ ನಾಶವಾಗುವುವೆಂಬ ಪಕ್ಷ ಶ್ರೀಭಾಷ್ಯಾದಿ ಗ್ರಂಥಗಳಿಗೆ ವಿರೋಧವಾದ ಕಾರಣ ತ್ಯಾಜ್ಯವಾದುದು.

೨೫. ಈ ನಿರೂಪಣೆಯಿಂದ ಪುರುಷೇಂದ್ರಿಯವಾದ, ಸ್ತ್ರೀಂದ್ರಿಯವಾದ, ಏಕೇಂದ್ರಿಯವಾದ, ತ್ವಗಿಂದ್ರಿಯವೆಂಬ ಒಂದೇ ಇಂದ್ರಿಯವಿದೆಯೆಂಬ ವಾದ ಇವೇ ಮುಂತಾದ ವಿವಾದಾಸ್ಪದವಾದ ಪಕ್ಷಗಳು ಎಲ್ಲಾ ನಿರಾಕರಿಸಲ್ಪಟ್ಟವೆ.

೨೬. ಭೂತಾದಿ ಎಂದು ಕರೆಯಲ್ಪಡುವ ತಾಮಸಾಹಂಕಾರವು ರಾಜಸಾಹಂಕಾರದ ಸಹಾಯದಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧವೆಂಬ ಐದು ತನ್ಮಾತ್ರಗಳನ್ನೂ ಆಕಾಶ, ವಾಯು, ತೇಜಸ್ಸು, ಅಪ್ಪು ಮತ್ತು ಪೃಥಿವೀ ಎಂಬ ಐದು ಮಹಾ ಭೂತಗಳನ್ನೂ ಉತ್ಪತ್ತಿಮಾಡುತ್ತದೆ.

೨೭. ತನ್ಮಾತ್ರ ಎಂಬುದು ಪಂಚಭೂತಗಳ ಸ್ಥೂಲಾವಸ್ಥೆಗೆ ತತ್ಕ್ಷಣದಲ್ಲಿ ಹಿಂದಿನ ಸೂಕ್ಷ್ಮಾವಸ್ಥೆಯಿಂದ ಕೂಡಿದ ದ್ರವ್ಯ. ಇದೇ ಪಂಚಭೂತಗಳಿಗೂ ಉಪದಾನ ಕಾರಣವಾಗುತ್ತದೆ.

೨೮. ವಿಶಿಷ್ಟ ಶಬ್ದಾದಿ ವಿಷಯಾದಿಕರಣಂ ಭೂತಮ್ ।

೨೯. ತನ್ಮಾತ್ರಾಣಿ ಶಬ್ದತನ್ಮಾತ್ರಂ, ಸ್ಪರ್ಶತನ್ಮಾತ್ರಂ, ರೂಪತನ್ಮಾತ್ರಂ, ರಸತನ್ಮಾತ್ರಂ, ಗಂಧತನ್ಮಾತ್ರಮಿತಿ ಪಂಚ ।

೩೦. ಭೂತಾನಿ ಚ ತಥಾ–ಆಕಾಶ–ವಾಯು–ತೇಜೋ–ಅಪ್–ಪೃಥಿವೀ ಭೇದಾತ್ ।

೩೧ ತತ್ರ ತಾಮಸಾಹಂಕಾರಾಕಾಶಯೋಃ ಮಧ್ಯಮಾವಸ್ಥಾ ವಿಶಿಷ್ಟಂ ದ್ರವ್ಯಂ ಶಬ್ದತನ್ಮಾತ್ರಮ್ । ಕ್ಷೀರದಧ್ನೋರಂತರಾಲಪರಿಣಾಮವತ್ ।

೩೨. ತಸ್ಮಾದಾಕಾಶೋ ಜಾಯತೇ । ಅಸ್ಪರ್ಶವತ್ತ್ವೇ ಸತಿ ವಿಶಿಷ್ಟ

---

೨೮. ಶಬ್ದ ಸ್ಪರ್ಶ, ರೂಪ, ರಸ, ಗಂಧ ಮೊದಲಾದ ಯಾವುದಾನರೊಂದು ವಿಶಿಷ್ಟ ವಿಷಯಕ್ಕೆ ಆಶ್ರಯವಾಗಿರುವ ಪದಾರ್ಥ (ಮಹಾ) ಭೂತ ಎನ್ನಿಸುವುದು.

೨೯. ತನ್ಮಾತ್ರೆಗಳು ಐದು ಬಗೆ; ಅವು ಶಬ್ದತನ್ಮಾತ್ರೆ, ಸ್ಪರ್ಶತನ್ಮಾತ್ರೆ, ರೂಪತನ್ಮಾತ್ರೆ, ರಸತನ್ಮಾತ್ರೆ ಮತ್ತು ಗಂಧತನ್ಮಾತ್ರೆ ಎಂಬುವು.

೩೦. ಭೂತಗಳೂ ಹಾಗೆಯೇ ಐದು ಬಗೆಯಾಗಿವೆ. ಆಕಾಶ, ವಾಯು ತೇಜಸ್ಸು, ಅಪ್ಪು, ಪೃಥಿವೀ ಎಂಬುವು ಅವು.

೩೧. ಇವುಗಳಲ್ಲಿ ತಾಮಸಾಹಂಕಾರಕ್ಕೂ ಆಕಾಶಕ್ಕೂ ನಡುವಣ ಅವಸ್ಥೆಯಿಂದ ಕೂಡಿರುವ ದ್ರವ್ಯ ಶಬ್ದತನ್ಮಾತ್ರೆ. ಇದು ಹಾಲಿಗೂ ಮೊಸರಿಗೂ ನಡುವಣ ಪರಿಣಾಮದಂತೆ ಇರುವುದು.

೩೨. ಆ ಶಬ್ದತನ್ಮಾತ್ರೆಯಿಂದ ಆಕಾಶ ಹುಟ್ಟುತ್ತದೆ. ಸ್ಪರ್ಶವತ್ತ್ವವನ್ನು ಯಾವುದು ಹೊಂದಿಲ್ಲವೋ,ವಿಶಿಷ್ಟವಾದ ಶಬ್ದಕ್ಕೆ ಯಾವುದು ಆಧಾರವಾಗಿದೆಯೋ

ಶಬ್ದಾಧಾರತ್ವಂ ಶ್ರೋತ್ರಾಪ್ಯಾಯಿಕೃತ್ವಂ ಚ ಆಕಾಶಲಕ್ಷಣಮಿತಿ । ಸ ಚ ಪ್ರತ್ಯಕ್ಷಃ ಶಬ್ದಮಾತ್ರಗುಣಕಃ ಅವಕಾಶಹೇತುಃ । 'ನೀಲಂ ನಭ' ಇತಿ ಪ್ರತೀತೇಃ ಪಂಚೀಕರಣಪ್ರಕ್ರಿಯಯಾ ರೂಪವಾಂಶ್ಚ । ಏತೇನಾಕಾಶಸ್ಯ ಅಜನ್ಯತ್ವನಿರಾಸಃ ।

೩೩. ಸೂರ್ಯಪರಿಸ್ಪಂದಾದಿಭಿಃ ಆಕಾಶಸ್ಯೈವ ಪ್ರಾಚ್ಯಾದಿ ವ್ಯವಹಾರೋಪಪತ್ತೌ ದಿಗಿತಿ ನ ಪೃಥಕ್ ದ್ರವ್ಯಕಲ್ಪನಮ್ । ದಿಕ್‌ಸೃಷ್ಟಿಸ್ತು ಅಂತರಿಕ್ಷಾದಿ ಸೃಷ್ಟಿವತ್ ಉಪಪದ್ಯತೇ ।

೩೪. ಆಕಾಶಾತ್ ಸ್ಪರ್ಶತನ್ಮಾತ್ರಮ್ । ಆಕಾಶವಾಯ್ವೋಃ ಮಧ್ಯಮಾವಸ್ಥಾವಿಶಿಷ್ಟದ್ರವ್ಯಂ ಸ್ಪರ್ಶತನ್ಮಾತ್ರಮ್ ।

೩೫. ತಸ್ಮಾದ್ವಾಯುಃ । ವಿಶಿಷ್ಟಸ್ಪರ್ಶವತ್ತ್ವೇ ಸತಿ ರೂಪ

---

ಶ್ರೋತ್ರೇಂದ್ರಿಯಕ್ಕೆ ಯಾವುದು ಆಪ್ಯಾಯನವನ್ನುಂಟುಮಾಡುವುದೋ ಅದು ಆಕಾಶ. ಇದು ಪ್ರತ್ಯಕ್ಷಗೋಚರವಾದುದು ; ಶಬ್ದವನ್ನು ಮಾತ್ರ ಗುಣವನ್ನಾಗಿ ಉಳ್ಳದು ; ನಡುವಣ ಅವಕಾಶ ಇದರಿಂದಾಗುವುದು ; 'ಆಕಾಶವು ನೀಲವಾಗಿದೆ' ಎಂದು ತೋರಿಬರುವುದಿದು. ಪಂಚೀಕರಣ ಪ್ರಕ್ರಿಯೆಗನುಸಾರವಾಗಿ ಇದು ಬಣ್ಣವನ್ನೂ ಹೊಂದಿದೆ. ಆಕಾಶಕ್ಕೆ ಹುಟ್ಟಿಲ್ಲವೆಂಬ ವಾದ ಇದರಿಂದ ನಿರಸ್ತವಾಯಿತು[91].

೩೩. ಸೂರ್ಯನ ಸ್ಪಂದನ ಮೊದಲಾದುವುಗಳಿಂದ ಆಕಾಶಕ್ಕೇ ಪೂರ್ವ ಮೊದಲಾದ ವ್ಯವಹಾರ ಉಪಪನ್ನವಾಗುವುದರಿಂದ 'ದಿಕ್ಕು' ಎಂಬ ಪ್ರತ್ಯೇಕವಾದ ದ್ರವ್ಯವನ್ನು ಅಂಗೀಕರಿಸಬೇಕಾಗಿಲ್ಲ. ದಿಕ್ಕುಗಳ ಸೃಷ್ಟಿಯೂ ಅಂತರಿಕ್ಷ ಮೊದಲಾದವುಗಳ ಸೃಷ್ಟಿಯಂತೆ ಉಪಪನ್ನವಾಗುತ್ತದೆ.

೩೪. ಆಕಾಶದಿಂದ ಸ್ಪರ್ಶತನ್ಮಾತ್ರೆ ಹುಟ್ಟುತ್ತದೆ. ಆಕಾಶ ಮತ್ತು ವಾಯುಗಳ ನಡುವಣ ಅವಸ್ಥೆಯಿಂದ ಕೂಡಿರುವ ದ್ರವ್ಯ ಸ್ಪರ್ಶತನ್ಮಾತ್ರೆ.

೩೫. ಆ ಸ್ಪರ್ಶತನ್ಮಾತ್ರೆಯಿಂದ ವಾಯು ಹುಟ್ಟುತ್ತದೆ.

ಶೂನ್ಯತ್ವಂ, ಅಸ್ಮಾದಾದಿ ಸ್ಪರ್ಶನೈಕೇಂದ್ರಿಯಗ್ರಾಹ್ಯದ್ರವ್ಯತ್ವಂ, ಅನುಷ್ಣಾಶೀತವಿಶಿಷ್ಟಸ್ಪರ್ಶವತ್ವೇ ಸತಿ ಗಂಧಶೂನ್ಯತ್ವಮಿತ್ಯಾದಿಕಂ ವಾಯೋರ್ಲಕ್ಷಣಂ । ತಸ್ಮಿನ್ನಾನಾಸಲಿಲಾತಪಕುಸುಮಾದ್ಯವಯವಯೋಗಾತ್ ಶೀತೋಷ್ಣಸೌರಭಾದಿ ಪ್ರತೀತಿಃ । ಸ ಚ ತ್ವಗಿಂದ್ರಿಯಾಪ್ಯಾಯಕತ್ವೇನ ಉಪಕರೋತಿ । ತಸ್ಯ ಶಬ್ದಸ್ಪರ್ಶೌ ಗುಣೌ ।

೩೬. ತತ್ರ ಶರೀರ ಧಾರಣಾದಿಹೇತುರ್ವಾಯುವಿಶೇಷಃ ಪ್ರಾಣಃ ಸ ಚ ಪಂಚಪ್ರಕಾರಃ । ಪ್ರಾಣಾಪಾನ ವ್ಯಾನೋದಾನ ಸಮಾನ ಭೇದಾತ್ । ಹೃದಿ ಪ್ರಾಣೋ ಗುದೇऽಪಾನಃ ಸರ್ವಶರೀರಗೋ ವ್ಯಾನಃ ಕಂಠೇ ಉದಾನೋ, ನಾಭಿದೇಶೇ ಸಮಾನ ಇತಿ ನಿಯಮಃ । ಜಂಗಮೇಷ್ವಿವ ಸ್ಥಾವರೇಷು ಚ

---

ಸ್ಪರ್ಶವತ್ವವನ್ನು ಹೊಂದಿದ್ದು ರೂಪಶೂನ್ಯವಾಗಿರುವುದು, ನಮ್ಮ ಸ್ಪರ್ಶೇಂದ್ರಿಯಕ್ಕೆ ಮಾತ್ರ ಗೋಚರವಾಗಬಲ್ಲ ದ್ರವ್ಯವಾಗಿರುವುದು, ಉಷ್ಣವೂ, ಶೀತವೂ ಅಲ್ಲದ ಸ್ಪರ್ಶತ್ವವನ್ನು ಹೊಂದಿದ್ದು ಗಂಧವನ್ನು ಹೊಂದದೆ ಇರುವುದು ವಾಯುವಿನ ಲಕ್ಷಣ. ನೀರು, ಬಿಸಿಲು, ಹೂವು ಮೊದಲಾದ ಅನೇಕ ಪದಾರ್ಥಗಳ ಅವಯುವ ಸಂಪರ್ಕದಿಂದ ಅದರಲ್ಲಿ ಶೀತ, ಉಷ್ಣ, ಸುಗಂಧ ಮೊದಲಾದವು ಕಂಡುಬರುತ್ತವೆ. ಅದು ಚರ್ಮೇಂದ್ರಿಯವನ್ನು ತೃಪ್ತಿಪಡಿಸುವುದರ ಮೂಲಕ ಸಹಾಯ ಮಾಡುತ್ತದೆ. ಅದಕ್ಕೆ ಶಬ್ದ ಮತ್ತು ಸ್ಪರ್ಶ ಎಂಬ ಎರಡು ಗುಣಗಳುಂಟು.

೩೬. ಶರೀರಧಾರಣೆಯೇ ಮೊದಲಾದುವಕ್ಕೆ ಕಾರಣವಾಗಿರುವ ವಾಯುವಿಶೇಷವು ಪ್ರಾಣವೆನ್ನಿಸುವುದು. ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂದು ಇದು ಐದು ಬಗೆಯಾಗಿದೆ ಹೃದಯಪ್ರದೇಶದಲ್ಲಿ ಪ್ರಾಣವೂ, ಗುದಪ್ರದೇಶದಲ್ಲಿ ಅಪಾನವೂ, ಶರೀರದಾದ್ಯಂತ ವ್ಯಾನವೂ, ಕಂಠಪ್ರದೇಶದಲ್ಲಿ ಉದಾನವೂ, ನಾಭಿಪ್ರದೇಶದಲ್ಲಿ ಸಮಾನವೂ ವ್ಯವಸ್ಥಿತವಾಗಿದೆ. ಚರಾತ್ಮಕವಾದುವುಗಳಲ್ಲಿ ಹೇಗೆಯೋ ಹಾಗೆಯೇ ಸ್ಥಾವರಗಳಲ್ಲಿಯೂ ಪ್ರಾಣಸಂಬಂಧವು ಸಮಾನವಾಗಿಯೇ ಇರುತ್ತದೆ. ವಾಯುವು

ಪ್ರಾಣಸಂಬಂಧಸ್ತುಲ್ಯ ಏವ । ವಾಯೋಃ ಸ್ಪಾರ್ಶನಪ್ರತ್ಯಕ್ಷತ್ವೇನ: ಅನುಮೇಯವಾದನಿರಾಸಃ ।

೩೭. ವಾಯುತೇಜಸೋರ್ಮಧ್ಯಮಾವಸ್ಥಾವಿಶಿಷ್ಟಂ ದ್ರವ್ಯಂ ರೂಪತನ್ಮಾತ್ರಮ್ ।

೩೮. ತಸ್ಮಾತ್ ತೇಜಃ । ಉಷ್ಣಸ್ಪರ್ಶವತ್ವ–ಭಾಸ್ವರರೂಪವತ್ವಾದಿಕಂ ತು ತೇಜಸೋ ಲಕ್ಷಣಮ್ । ತಸ್ಯ ಬಹಿಃ ಪಚನಾದಿಹೇತುತ್ವಂ ಅಗ್ನಿಸೂರ್ಯಾತ್ಮನಾ । ಅಂತಃ ವೈಶ್ವಾನರಸಂಜ್ಞಕಜಾಠರಾಗ್ನಿರೂಪೇಣ । ದಿವಾಭೀತಾದಿ ವ್ಯತಿರಿಕ್ತಾನಾಂ ಚಾಕ್ಷುಷಜ್ಞಾನೇ ಆಲೋಕಾದಿ ರೂಪೇಣ ಸಹಕಾರೀ ಭವತಿ ।

೩೯. ತಚ್ಚತುರ್ಧಾ–ಭೌಮ ದಿವ್ಯೌದರ್ಯಾಕರಜಭೇದಾತ್ ।

---

ಸ್ಪರ್ಶೇಂದ್ರಿಯಕ್ಕೆ ಗೋಚರವಾಗುತ್ತದೆ. ಆದರಿಂದ ಅದನ್ನು ಊಹಿಸಿ ತಿಳಿಯಬೇಕೆಂಬ (ನ್ಯಾಯ ವೈಶೇಷಿಕ) ಅನುಮೇಯ ವಾದವನ್ನು ತಿರಸ್ಕರಿಸಲಾಗಿದೆ.

೩೭. ವಾಯು ಮತ್ತು ತೇಜಸ್ಸು ಇವುಗಳೆರಡರ ನಡುವಣ ಅವಸ್ಥೆಯಿಂದ ಕೂಡಿರುವ ದ್ರವ್ಯವು ರೂಪತನ್ಮಾತ್ರೆ.

೩೮. ಆ ರೂಪತನ್ಮಾತ್ರೆಯಿಂದ ತೇಜಸ್ಸು ಉತ್ಪನ್ನವಾಗುತ್ತದೆ. ಉಷ್ಣವಾದ ಸ್ಪರ್ಶವನ್ನುಳ್ಳುದು, ಪ್ರಕಾಶಮಾನವಾದ ರೂಪವನ್ನುಳ್ಳುದು ತೇಜಸ್ಸಿ ಅಥವಾ ಅಗ್ನಿಯ ಲಕ್ಷಣ. ಹೊರಗಡೆ ಅಗ್ನಿ ಮತ್ತು ಸೂರ್ಯನ ರೂಪದಲ್ಲಿ ಪಕ್ವಗೊಳಿಸುವುದೇ ಮೊದಲಾದುವುಗಳಿಗೆ ಅದು ಕಾರಣವಾಗಿದೆ. ವೈಶ್ವಾನರ ಎಂಬ ಸಂಜ್ಞೆಯನ್ನು ಹೊಂದಿದ ಜಠರಾಗ್ನಿಯ ರೂಪದಲ್ಲಿ ಅದು ಒಳಗಡೆ ಪಚನಹೇತುವಾಗಿದೆ. ಗೂಬೆ ಮೊದಲಾದವುಗಳನ್ನು ಬಿಟ್ಟು ಇತರರ ಚಾಕ್ಷುಷ ಜ್ಞಾನಕ್ಕೆ ಬೆಳಕೇ ಮೊದಲಾದ ರೂಪದಲ್ಲಿ ಇದು ಸಹಕಾರಿಯಾಗಿದೆ.

೩೯. ಆ ತೇಜಸ್ಸು ನಾಲ್ಕು ವಿಧ; ಭೌಮ, ದಿವ್ಯ, ಔದರ್ಯ ಮತ್ತು ಆಕಾರಜ ಎಂಬುವು ಅವು.

೪೦. ತತ್ರ ಪಾರ್ಥಿವಮಾತ್ರೇಂಧನಂ ತೇಜೋ ಭೌಮಂ। ತತ್ ದೀಪಾದಿ। ಜಲಮಾತ್ರೇಂಧನಂ ದಿವ್ಯಂ; ತತ್ ಸೂರ್ಯಾದಿ। ಪಾರ್ಥಿವ ಜಲೇಂಧನಂ ಔದರ್ಯಂ; ತತ್ ಜಾಠರಮ್। ನಿರಿಂಧನಂ ತೇಜ ಆಕರಜಂ; ತತ್ ಸುವರ್ಣಾದಿ। ಸುವರ್ಣಸ್ಯ ದ್ರವ್ಯಾಂತರ ಸಂಸರ್ಗಾತ್ ಉಷ್ಣಸ್ಪರ್ಶಾಭಾವಃ।

೪೧. ಪುನಃ ಸಾಮಾನ್ಯೇನ ಪ್ರಭಾ ಪ್ರಭಾವಾಂಶ್ಚೇತಿ ವಿಭಕ್ತಃ।

೪೨. ಆವರಣಸದಸದ್ಭಾವಾಧೀನಸಂಕೋಚವಿಕಾಸಃ ಪ್ರಸಾರಿತೇಜೋವಿಶೇಷಃ ಪ್ರಭಾ। ಸಾ ಚ ಪ್ರಭಾವದ್ಭಿಃ ಸಹೋತ್ಪದ್ಯತೇ ಸಹ ನಶ್ಯತಿ। ದ್ರವ್ಯರೂಪಾ ಗುಣಭೂತಾ ಸಾವಯವಾ ಚ।

---

೪೦. ಅವುಗಳಲ್ಲಿ ಪೃಥಿವಿಯ ಅಂಶವನ್ನು ಮಾತ್ರ ಇಂಧನವನ್ನಾಗಿ ಹೊಂದಿರುವ ತೇಜಸ್ಸು ಭೌಮ (ಭೂಮಿಯ ಸಂಬಂಧ ಹೊಂದಿದುದು) ಎನ್ನಿಸುವುದು; ದೀಪ ಮೊದಲಾದವು ಅಂಥವು. ನೀರನ್ನು ಮಾತ್ರ ಇಂಧನವನ್ನಾಗಿ ಹೊಂದಿರುವ ತೇಜಸ್ಸು ದಿವ್ಯ ಎನ್ನಿಸುವುದು ; ಸೂರ್ಯ ಮೊದಲಾದವು ಇಂಥವು. ಪೃಥಿವೀ ಮತ್ತು ಜಲ ಇವುಗಳೆರಡನ್ನೂ ಇಂಧನವನ್ನಾಗಿ ಉಳ್ಳುದು ಔದರ್ಯ. ಅದು ಜಠರಾಗ್ನಿ. ಇಂಧನವನ್ನಪೇಕ್ಷಿಸದ ತೇಜಸ್ಸು ಆಕರಜ ಎನ್ನಿಸುವುದು. ಸುವರ್ಣ ಮೊದಲಾದವು ಇಂಥವು. ಇತರ ದ್ರವ್ಯಗಳೊಡನೆ ಸಂಸರ್ಗವಿರುವ ಕಾರಣ ಸುವರ್ಣದಲ್ಲಿ ಉಷ್ಣ ಸ್ಪರ್ಶವಿರುವುದಿಲ್ಲ.

೪೧. ಆ ತೇಜಸ್ಸನ್ನು ಪ್ರಭೆ ಮತ್ತು ಪ್ರಭೆಯುಳ್ಳುದು ಎಂದೂ ಸಾಮಾನ್ಯವಾಗಿ ವಿಭಾಗ ಮಾಡಿದೆ.

೪೨. ಅವರಣದ ಇರುವಿಕೆ ಅಥವಾ ಇಲ್ಲದಿರುವಿಕೆಗೆ ಅಧೀನವಾದ ಸಂಕೋಚ ಅಥವಾ ವಿಸ್ತಾರಗಳನ್ನುಳ್ಳುದೂ, ಪ್ರಸರಿಸುವ ಸ್ವಭಾವವುಳ್ಳುದೂ, ಆದ ತೇಜಸ್ಸಿನ ವಿಶೇಷವೇ ಪ್ರಭೆ. ಈ ಪ್ರಭೆ ಪ್ರಭಾಯುತವಾದುದೊಡನೆಯೇ ಹುಟ್ಟುತ್ತದೆ; ಅದರೊಡನೆಯೇ ನಾಶವಾಗುತ್ತದೆ. ಈ ಪ್ರಭೆಯು ದ್ರವ್ಯವೂ ಹೌದು; ಗುಣವೂ ಹೌದು; ಅವಯವಗಳನ್ನುಳ್ಳುದೂ ಹೌದು.

೪೩. ಅನೇನ ಪ್ರಭಾಯಾಃ ಕೇವಲ ಗುಣತ್ವಮತನಿರಾಸಃ ।

೪೪. ಪ್ರಭಾವಿಶಿಷ್ಟಂ ತೇಜಃ ಪ್ರಭಾವತ್ । ತಚ್ಚತುರ್ವಿಧಮಿತಿ ಪ್ರತಿಪಾದಿತಮ್ । ತತ್ತೇಜಃ ಶಬ್ದಸ್ಪರ್ಶರೂಪಗುಣವಚ್ಚ ।

೪೫. ತೇಜಃಸಲಿಲಯೋರ್ಮಧ್ಯಮಾವಸ್ಥಾವಿಶಿಷ್ಟಂ ದ್ರವ್ಯಂ ರಸತನ್ಮಾತ್ರಮ್ ।

೪೬. ತಸ್ಮಾದಾಪಃ । ಶೀತಸ್ಪರ್ಶವತ್ವಂ ನಿರ್ಗಂಧತ್ವೇ ಸತಿ ವಿಶಿಷ್ಟರಸವತ್ವಂ ಇತ್ಯಾದಿ ಅಪಾಂ ಲಕ್ಷಣಮ್ । ತಾಸಾಂ ಶುಕ್ಲ–ಮಧುರ–ಶೀತೈಕಸ್ವಭಾವಾನಾಂ ಆಶ್ರಯಾದಿಸಂಸರ್ಗಭೇದಾತ್ ರೂಪರಸಸ್ಪರ್ಶವೈಚಿತ್ರ್ಯಾರೋಪಃ । ತಾಃ ಸಮುದ್ರ ಸರಿದಾದಿರೂಪೇಣ ಬಹುಪ್ರಕಾರಾಃ । ಶಬ್ದಸ್ಪರ್ಶರೂಪರಸವತ್ಯಶ್ಚ ಸೇಚನಪಿಂಡೀಕರಣಾದಿ ಹೇತವಃ ।

---

೪೩. ಪ್ರಭೆಯು ಕೇವಲ ಗುಣವೆಂಬ ವಾದವನ್ನೂ ಆದ್ದರಿಂದಲೇ ಖಂಡಿಸಿದೆ.

೪೪. ಪ್ರಭೆಯೊಡನೆ ವಿಶಿಷ್ಟವಾಗಿರುವ ತೇಜೋದ್ರವ್ಯ ಪ್ರಭಾವತ್ ಎನ್ನಿಸುವುದು. ಅದು ನಾಲ್ಕು ವಿಧವಾಗಿದೆಯೆಂದು ಪ್ರತಿಪಾದಿಸಿದ್ದಾಗಿದೆ. ಆ ತೇಜಸ್ಸು ಶಬ್ದ, ಸ್ಪರ್ಶ, ರೂಪಗಳೆಂಬ ಗುಣಗಳನ್ನು ಹೊಂದಿದೆ.

೪೫. ತೇಜಸ್ಸು ಮತ್ತು ಜಲ ಇವುಗಳೆರಡರ ನಡುವಣ ಅವಸ್ಥೆಯಿಂದ ಕೂಡಿದ ದ್ರವ್ಯವು ರಸತನ್ಮಾತ್ರೆ ಎನ್ನಿಸುವುದು.

೪೬. ಆ ರಸತನ್ಮಾತ್ರೆಯಿಂದ ನೀರು ಹುಟ್ಟುತ್ತದೆ. ಶೀತವಾದ ಸ್ಪರ್ಶವನ್ನು ಹೊಂದಿರುವುದು, ಗಂಧವನ್ನು ಹೊಂದದೆ ವಿಶಿಷ್ಟವಾದ ರಸವತ್ತ್ವವನ್ನುಳುದು ಜಲದ ಲಕ್ಷಣ. ಅದು ಬೆಳ್ಳಗೆ ಮಧುರವಾಗಿ ಶೀತವಾಗಿರುವ ಸ್ವಭಾವವನ್ನು ಹೊಂದಿದ್ದರೂ ಆಶ್ರಯವೇ ಮೊದಲಾದವುಗಳ ಸಂಸರ್ಗದ ಕಾರಣದಿಂದ ರೂಪ, ರಸ ಮತ್ತು ಸ್ಪರ್ಶದಲ್ಲಿ ಚಿತ್ರವಿಚಿತ್ರವಾಗಿ ಆರೋಪವುಂಟಾಗುತ್ತದೆ. ಸಮುದ್ರ, ನದಿ ಮೊದಲಾದ ರೂಪಗಳಲ್ಲಿ ಅದು ಬಹುಪ್ರಕಾರವಾಗಿರುತ್ತದೆ. ಶಬ್ದ, ಸ್ಪರ್ಶ, ರೂಪ ಮತ್ತು ರಸಗಳನ್ನು ಇದು ಹೊಂದಿದೆ. ಸಿಂಪಡಿಸುವುದು ಹಾಗೂ ಉಂಡೆ ಮಾಡುವುದಕ್ಕೆ ಇದು ಕಾರಣವಾಗಿದೆ.

೪೭. ಅಪ್ಪೃಥಿವ್ಯೋಃ ಮಧ್ಯಮಾವಸ್ಥಾವಿಶಿಷ್ಟಂ ದ್ರವ್ಯಂ ಗಂಧತನ್ಮಾತ್ರಮ್ ।

೪೮. ತಸ್ಮಾತ್ ಪೃಥಿವೀ । ವಿಶಿಷ್ಟಗಂಧವತ್ತ್ವಂ ರಸವತ್ತ್ವೇ ಸತಿ ವಿಶಿಷ್ಟಸ್ಪರ್ಶವತ್ತ್ವಮಿತ್ಯಾದಿ ಪೃಥಿವೀಲಕ್ಷಣಮ್ । ಸಾ ಸುರಭಿರ್ಮಧುರಾ ಕೃಷ್ಣಾದಿರೂಪಾ ಅನುಷ್ಣಾಶೀತಸ್ಪರ್ಶವತೀ ಚ । ಪಾಕಜಭೇದಾತ್ತು ವಿಚಿತ್ರವರ್ಣಾ ವಿಚಿತ್ರರಸಾ ಚ । ಅಸ್ಯಾಶ್ಚ ಮನೋಘ್ರಾಣಾಪ್ಯಾಯಕತ್ವೇನ ಉಪಕಾರಕತ್ವಮ್ । ಮೃತ್ಪಾಷಾಣಾನ್ನೌಷಧಾದಿ ಬಹುಪ್ರಕಾರವತೀ ಶಬ್ದಸ್ಪರ್ಶರೂಪರಸಗಂಧಗುಣಕಾ ಧಾರಣಹೇತುಶ್ಚ ।

೪೯. ತಮಸಃ ಪೃಥಿವ್ಯಾಮಂತರ್ಭಾವಸ್ತದ್ಗುಣತ್ವಾತ್ ತದವ

---

೪೭. ಅಪ್ಪು ಮತ್ತು ಪೃಥ್ವಿಗಳೆರಡರ ನಡುವಣ ಅವಸ್ಥೆಯಿಂದ ಕೂಡಿರುವ ದ್ರವ್ಯ ಗಂಧತನ್ಮಾತ್ರ.

೪೮. ಆ ಗಂಧತನ್ಮಾತ್ರೆಯಿಂದ ಪೃಥ್ವಿಯು ಹುಟ್ಟುತ್ತದೆ. ವಿಶಿಷ್ಟವಾದ ಗಂಧವನ್ನು ಹೊಂದಿರುವುದು. ರಸವತ್ತ್ವವನ್ನು ಹೊಂದಿ ವಿಶಿಷ್ಟವಾದ ಸ್ಪರ್ಶವತ್ತ್ವವನ್ನು ಹೊಂದಿರುವುದು ಪೃಥ್ವಿಯ ಲಕ್ಷಣ. ಅದು ಸುಗಂಧಯುತವಾದುದು ; ಮಧುರವಾದುದು ; ಕಪ್ಪುಬಣ್ಣ ಮೊದಲಾದವನ್ನು ಹೊಂದಿದೆ. ಉಷ್ಣವಾಗಲೀ ಶೀತವಾಗಲೀ ಆಗದ ಸ್ಪರ್ಶವನ್ನು ಹೊಂದಿದೆ. ಶಾಖದ ಭೇದದಿಂದ ಅದು ಅದೇಕ ಬಗೆಯ ಬಣ್ಣಗಳನ್ನೂ ರುಚಿಯನ್ನೂ ಹೊಂದುತ್ತದೆ. ಇದು ಮನಸ್ಸಿಗೂ, ಘ್ರಾಣೇಂದ್ರಿಯಕ್ಕೂ ತೃಪ್ತಿಯನ್ನುಂಟುಮಾಡುವುದರ ಮೂಲಕ ಉಪಕಾರಕವಾಗಿದೆ. ಮಣ್ಣು, ಕಲ್ಲು, ಅನ್ನ, ಗಿಡಬಳ್ಳಿಗಳು ಮೊದಲಾಗಿ ಅನೇಕ ಪ್ರಕಾರವಾಗಿರುವುದಿದು. ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ ಎಂಬ ಐದು ಗುಣಗಳನ್ನು ಇದು ಹೊಂದಿದ್ದು ಧಾರಣಕ್ಕೆ ಕಾರಣವಾಗಿದೆ

೪೯. ಪೃಥ್ವಿಗೆ ಗುಣವಾಗಿರುವುದರಿಂದ ಅಥವಾ ಇದರ ಮತ್ತೊಂದು ಅವಸ್ಥೆಯಾಗಿರುವುದರಿಂದ ತಮಸ್ಸನ್ನು ಪೃಥ್ವಿಯಲ್ಲಿಯೇ

ಸ್ಥಾಂತರತ್ವಾದ್ವಾ । ಅತ ಏವ ಆ ಲೋಕಾಭಾವ ಮಾತ್ರಂ ದ್ರವ್ಯಾಂತರಂ ವಾ ಇತ್ಯಾದಿಪಕ್ಷಾ ನಿರಸ್ತಾಃ ।

೫೦. ಭೂತೇಷು ಸರ್ವತ್ರ ಪಂಚೀಕರಣಪ್ರಕ್ರಿಯಯಾ ಶಬ್ದಾದೀನಾಂ ಗುಣಾನಾಮುಪಲಂಭಃ ।

೫೧. ಪಂಚೀಕರಣ ಪ್ರಕ್ರಿಯಾ ತು–ಭಗವಾನ್ ಭೂತಾನಿ ಸೃಷ್ಟ್ವಾ ಏಕೈಕಮೇವ ಭೂತಂ ದ್ವಿಧಾಕೃತ್ಯ ದ್ವಯೋರ್ಭಾಗಯೋಃ ಸ್ವಭಾಗಮೇಕಂ ನಿಧಾಯ ಭಾಗಾಂತರಂ ಚತುರ್ಧಾಕೃತ್ಯ ತಾನ್ ಚತುರ್ಭಾಗಾನ್ ಭೂತಾಂತ ರೇಷು ಚತುರ್ಷು ಯೋಜಯತಿ । ಏವಂ ಸರ್ವೇಷು ಭೂತೇಷು ಕ್ರಿಯ ಮಾಣೇಷು ಏಕೈಕಸ್ಯ ಭೂತಸ್ಯ ಅರ್ಧಂ ಸ್ವಭಾಗಃ ಅರ್ಧಾಂತರಂ ಚತುರ್ಣಾಂ ಭೂತಾನಾಂ ಭಾಗಸಮುಚ್ಚಯ ಇತಿ ಭವತಿ । ತಥಾ ಚ ಸ್ವಭಾಗಸ್ಯ ಭೂಯಸ್ತ್ವಾತ್ ಪರಭಾಗಸ್ಯಾಲ್ಪೀಯಸ್ತ್ವಾಚ್ಚ ಪೃಥಿವ್ಯಾದಿವ್ಯಪದೇಶಃ ।

---

ಅಂತರ್ಭಾವ ಮಾಡಿದೆ. ಆದ್ದರಿಂದಲೇ ಬೆಳಕಿನ ಅಭಾವವೇ ಕತ್ತಲೆ ಎಂಬ ಪಕ್ಷವೂ, ಕತ್ತಲೆಯು ಬೇರೆ ದ್ರವ್ಯ ಎಂಬ ಪಕ್ಷವೂ ತಳ್ಳಿ ಹಾಕಲಾಗಿದೆ.

೫೦. ಪೃಥ್ವಿ ಮೊದಲಾದ ಪಂಚಭೂತಗಳಲ್ಲೆಲ್ಲಾ ಶಬ್ದವೇ ಮೊದಲಾದ ಐದು ಗುಣಗಳೂ ಪಂಚೀಕರಣ ಪ್ರಕ್ರಿಯೆಯಿಂದ ಕಂಡುಬರುತ್ತವೆ.

೫೧. ಪಂಚೀಕರಣ ಪ್ರಕ್ರಿಯೆಯನ್ನು ಈಗ ನಿರೂಪಿಸುತ್ತೇವೆ. ಭಗವಂತನು ಪೃಥಿವ್ಯಾದಿ ಪಂಚಭೂತಗಳನ್ನು ಸೃಷ್ಟಿ ಮಾಡುವನು. ಅನಂತರ ಆ ಒಂದೊಂದನ್ನೂ ಎರಡೆರಡು ಭಾಗಗಳಾಗಿ ವಿಭಾಗಮಾಡುವನು. (ಹೀಗೆ ಪೃಥ್ವಿಯನ್ನು ಎರಡು ಭಾಗವಾಗಿ, ಅಪ್ಪನ್ನು ಎರಡಾಗಿ, ತೇಜಸ್ಸನ್ನು ಎರಡು ಭಾಗವಾಗಿ, ವಾಯುವನ್ನು ಎರಡು ಭಾಗವಾಗಿ, ಆಕಾಶವನ್ನೂ ಎರಡು ಭಾಗವಾಗಿ ವಿಭಾಗಿಸುವನು) ಅವುಗಳಲ್ಲಿ ಒಂದೊಂದರ ಅರ್ಧಭಾಗವನ್ನು ಅದರ ಭಾಗಕ್ಕಾಗಿ ಹಾಗೆಯೇ ಉಳಿಸಿಕೊಂಡು ಉಳಿದ ಒಂದೊಂದರ ಅರ್ಧಭಾಗವನ್ನು ಪುನಃ ನಾಲ್ಕು ಸಮಭಾಗಗಳನ್ನಾಗಿ ವಿಭಾಗ ಮಾಡುತ್ತಾನೆ. (ಏವಂಚ ಪೃಥ್ವಿಯಲ್ಲಿ ಅರ್ಧ ಭಾಗದ ಒಂದರ ಜೊತೆಗೆ ಇನ್ನರ್ಧ ಭಾಗದ ನಾಲ್ಕು ಉಪ

೫೨. ವೇದೇ ತ್ರಿವೃತ್ಕರಣೋಪದೇಶಸ್ತು ಪಂಚೀಕರಣಸ್ಯಾಪ್ಯುಪಲಕ್ಷಣಮ್ । ಭೂತೈಃಸಾಕಂ ಮಹದಹಂ ಕಾರೌ ಮಿಲಿತ್ವಾ ಸಪ್ತೀಕರಣಮಿತ್ಯಾಹುಃ ।

೫೩. ಏತೇಷು ಚತುರ್ವಿಂಶತಿ ಸಂಖ್ಯಾಕೇಷು ಪಂಚಭೂತಾನಿ ಪ್ರಕೃತಿ ಮಹದಹಂಕಾರಾಶ್ಚ ಶರೀರೋಪಾದಾನಾನಿ । ಏಕಾದಶೇಂದ್ರಿಯಾಣಿ ಪ್ರತ್ಯೇ

---

ಭಾಗಗಳು ಇರುತ್ತವೆ. ಹಾಗೆಯೇ ಉಳಿದ ನಾಲ್ಕು ಭೂತಗಳಲ್ಲಿಯೂ ಸಹ.) ಹೀಗೆ ವಿಭಾಗ ಮಾಡಿದ ಮೇಲೆ ಒಂದೊಂದು ಭೂತದ ಅರ್ಧದಿಂದಾದ ನಾಲ್ಕು ಭಾಗಗಳಲ್ಲಿ ಒಂದನ್ನು ತೆಗೆದುಕೊಂಡು ಆ ನಾಲ್ಕು ಭೂತಗಳ ಉಪ ಭಾಗಗಳೊಡನೆ ಒಂದೊಂದರ ಅರ್ಧಭಾಗವನ್ನು ಕೂಡಿಸುತ್ತಾನೆ. ಹೀಗೆ ಎಲ್ಲ ಭೂತಗಳನ್ನೂ ವಿಭಾಗಮಾಡಿ ಕೂಡಿಸಿದಾಗ ಒಂದೊಂದರಲ್ಲಿಯೂ ಅದರ ಅರ್ಧಭಾಗ ಸ್ವಭಾಗವಾಗಿ ಉಳಿದರ್ಧಭಾಗ ಉಳಿದ ನಾಲ್ಕು ಭೂತಗಳ ಭಾಗಗಳ ಸಮುಚ್ಚಯವಾಗಿರುತ್ತದೆ. (ಪೃಥ್ವೀ ತತ್ವದಲ್ಲಿ $\frac{1}{2}$ ಭಾಗ ಪೃಥ್ವೀ $\frac{1}{8}$ ಭಾಗ ಅಪ್ಪು, $\frac{1}{8}$ ಭಾಗ ತೇಜಸ್ಸು, $\frac{1}{8}$ ಭಾಗ ವಾಯು, $\frac{1}{8}$ ಭಾಗ ಆಕಾಶ– ಹೀಗೆ ಸೇರಿರುತ್ತದೆ). ಅರ್ಧಭಾಗ ಸ್ವಭಾಗವಾಗಿ ಅಧಿಕವಾಗಿರುವುದರಿಂದಲೂ, ಉಳಿದ ಭೂತಗಳ ಭಾಗಗಳು ಅಲ್ಪವಾಗಿರುವ ಕಾರಣದಿಂದಲೂ ಪೃಥ್ವೀ, ಅಪ್ಪು, ತೇಜಸ್ಸು ಮೊದಲಾದ ಅಧಿಕಾಂಶದ ಹೆಸರನ್ನು ಅವುಗಳಿಗೆ ಕೊಡಲಾಗಿದೆ.

೫೨. ವೇದದಲ್ಲಿ ಬರುವ ತ್ರಿವೃತ್ಕರಣದ ಉಪದೇಶ ಈ ಪಂಚೀಕರಣವನ್ನು ಸೂಚಿಸುವುದಕ್ಕೆ ಉಪಲಕ್ಷಣವಾಗಿದೆ. ಈ ಪಂಚಭೂತಗಳೊಡನೆ ಮಹತ್ತು ಮತ್ತು ಅಹಂಕಾರಗಳನ್ನೂ ಸೇರಿಸಿ 'ಸಪ್ತೀಕರಣ' ವೆಂದೂ ಇತರರು ಹೇಳುತ್ತಾರೆ.

೫೩. ಈ ಇಪ್ಪತ್ತನಾಲ್ಕು 'ತತ್ತ್ವಗಳಲ್ಲಿ ಪಂಚಭೂತಗಳು, ಪ್ರಕೃತಿ, ಮಹತ್ತತ್ತ್ವ ಮತ್ತು ಅಹಂಕಾರತತ್ತ್ವ–ಇವುಗಳು ಶರೀರಕ್ಕೆ ಉಪಾದಾನ ಕಾರಣಗಳಾಗಿವೆ. ಹನ್ನೊಂದು ಇಂದ್ರಿಯಗಳು ಬೇರೆ ಬೇರೆಯಾಗಿ ಅಸಂಖ್ಯಾತ

ಕಮಸಂಖ್ಯಾಕಾನಿ ಪ್ರತಿಪುರುಷಂ ಭಿನ್ನಾನಿ ಆಭರಣಾರ್ಪಿತರತ್ನಾನೀವ ಶರೀರಮಾಕ್ರಮ್ಯ ತಿಷ್ಠಂತಿ ।

೫೪. ಶರೀರಂ ನಾಮ ಚೇತನಂ ಪ್ರತಿ ಆಧೇಯತ್ವ-ವಿಧೇಯತ್ವ ಶೇಷತ್ವ ನಿಯಮೈರಪೃಥ ಕ್ಸಿದ್ಧೋ ದ್ರವ್ಯವಿಶೇಷ ಇತ್ಯೇಕಂ ಲಕ್ಷಣಮ್ । ನಿಯಮೇನ ಯದಾಧೇಯಂ, ನಿಯಮೇನ ಯದ್ವಿಧೇಯಂ, ನಿಯಮೇನ ಯ ಚ್ಛೇಷಮಿತಿ ಲಕ್ಷಣತ್ರಯಂ ವಾ ಯೋಜ್ಯಮ್ । ಈಶ್ವರ ತಜ್ಞಾನ ವ್ಯತಿರಿಕ್ತಂ ದ್ರವ್ಯಂ ಶರೀರಮಿತಿ ವಾ ತಟಸ್ಥಲಕ್ಷಣಮ್ ।

೫೫. ಏತೇನ ಚೇಷ್ಟಾಶ್ರಯಂ ಶರೀರಮ್, ಇಂದ್ರಿಯಾಶ್ರಯಂ ಶರೀರಂ, ಭೋಗಾಯತನಂ ಶರೀರಂ, ಶಿರಃ ಪಾಣಿಪಾದಾದಿಮಯಂ ಶರೀರಂ ಇತ್ಯಾದಿ ಪರೋಕ್ತಾನಿ ಶರೀರಲಕ್ಷಣಾನಿ ನಿರಸ್ತಾನಿ.

---

ವಾಗಿವೆ. ಒಬ್ಬೊಬ್ಬ ವ್ಯಕ್ತಿಗೂ ಇವು ಬೇರೆಯಾಗಿವೆ. ಒಡವೆಗಳಲ್ಲಿ ಕೆತ್ತಿರುವ ರತ್ನಗಳೋಪಾದಿಯಲ್ಲಿ ಇವು ಶರೀರವನ್ನು ಪ್ರವೇಶಿಸಿ ನಿಲ್ಲುತ್ತವೆ

೫೪. ಚೇತನನಿಂದ ನಿಯಮೇನ ಧರಿಸಲ್ಪಟ್ಟು, ನಿಯಮಿಸಲ್ಪಟ್ಟು, ಆ ಚೇತನನಿಗೇ ಶೇಷವಾಗಿ ಅವನೊಡನೆ ಬಿಟ್ಟಿರಲಾರದ ಸಂಬಂಧವನ್ನುಳ್ಳ ದ್ರವ್ಯ ವಿಶೇಷವು ಶರೀರ ಎಂದು ಶರೀರಕ್ಕೆ ಒಟ್ಟು ಲಕ್ಷಣ. ಯಾವುದು ಚೇತನನಿಂದ ನಿಯ ಮೇನ ಆಧೇಯವೋ, ಯಾವುದು ಅವನಿಗೆ ನಿಯಮೇನ ವಿಧೇಯ ವಾಗಿದೆಯೋ, ಯಾವುದು ನಿಯಮೇನ ಅವನಿಗೆ ಶೇಷವಾಗಿದೆಯೋ ಅದು ಶರೀರ ಎಂದು ಮೂರು ಲಕ್ಷಣಗಳನ್ನೂ ಹೇಳಬಹುದು. ಈಶ್ವರ ಮತ್ತು ಆವನ ಜ್ಞಾನದಿಂದ ಬೇರೆಯಾದ ದ್ರವ್ಯವು ಶರೀರ ಎಂಬುದು ತಟಸ್ಥ ಲಕ್ಷಣ[92].

೫೫. 'ಕಾರ್ಯ ಮಾಡಲಾಶ್ರಯವಾದುದು ಶರೀರ', 'ಇಂದ್ರಿಯಗಳಿ ಗಾಶ್ರಯವಾದುದು' 'ಶರೀರ, ಸುಖ ದುಃಖಾದಿ ಭೋಗಗಳಿಗೆ ಮನೆಯಾದುದು ಶರೀರ', 'ತಲೆ ಕೈಕಾಲುಗಳನ್ನು ಹೊಂದಿರುವುದು ಶರೀರ' ಎಂಬುವೇ ಮೊದಲಾದ ಇತರರು ಹೇಳುವ ಶರೀರ ಲಕ್ಷಣಗಳು ಮೇಲಿನ ಲಕ್ಷಣದಿಂದ ತಳ್ಳಿಹಾಕಲ್ಪಟ್ಟವೆ.

೫೬. ಶರೀರಂ ದ್ವಿವಿಧಂ–ನಿತ್ಯಮನಿತ್ಯಮಿತಿ । ತತ್ರ ನಿತ್ಯಂ ತ್ರಿಗುಣ ದ್ರವ್ಯ–ಕಾಲ–ಜೀವ–ಶುಭಾಶ್ರಯಾತ್ಮಕಂ ಈಶ್ವರ ಶರೀರಮ್ । ನಿತ್ಯಸೂರಿಣಾಂ ಸ್ವಾಭಾವಿಕ–ಗರುಡಭುಜಗಾದಿರೂಪಂ ಚ ।

೫೭. ಅನಿತ್ಯಂ ದ್ವಿವಿಧಂ–ಅಕರ್ಮಕೃತಂ ಕರ್ಮಕೃತಂ ಚೇತಿ । ಪ್ರಥಮಮೀಶ್ವರಸ್ಯ ಮಹದಾದಿರೂಪಮ್ । ತಥಾ ಅನಂತಗರುಡಾದೀನಾಂ ಚ ಇಚ್ಛಾಗೃಹೀತಂ ತತ್ತತ್ ರೂಪಮ್ । ಕರ್ಮಕೃತಮಪಿ ದ್ವಿವಿಧಮ್– ಸ್ವಸಂಕಲ್ಪಸಹಕೃತಕರ್ಮಕೃತಂ ಕೇವಲಕರ್ಮಕೃತಂ ಚೇತಿ । ಪೂರ್ವಂ ಮಹತಾಂ ಸೌಭರಿಪ್ರಭೃತೀನಾಮ್, ಉತ್ತರಂ ಚಾನ್ಯೇಷಾಮ್ ।

೫೮. ಪುನಃ ಸಾಮಾನ್ಯತೋ ದ್ವಿವಿಧಂ–ಸ್ಥಾವರ ಜಂಗಮ ಭೇದಾತ್ । ಸ್ಥಾವರಾಃ ಶಿಲಾ–ವೃಕ್ಷ–ಗುಲ್ಮ–ಲತಾದಯಃ । ಜಂಗಮಶ್ಚತುರ್ಧಾ–ದೇವ ಮನುಷ್ಯ–ತಿರ್ಯಕ್–ನಾರಕಿ–ಭೇದಾತ್ ।

---

೫೬. ಶರೀರವು ನಿತ್ಯ, ಅನಿತ್ಯ ಎಂದು ಎರಡುವಿಧ. ತ್ರಿಗುಣಾತ್ಮಕವಾದ ಪ್ರಕೃತಿ, ಕಾಲ, ಜೀವರುಗಳು, ಭಗವಂತನ ದಿವ್ಯಮಂಗಳ ವಿಗ್ರಹ ಈ ರೂಪದಲ್ಲಿರುವ ಈಶ್ವರಶರೀರ ನಿತ್ಯವಾದುದು. ಗರುಡ, ಶೇಷ ಮತ್ತಿತರ ನಿತ್ಯಸೂರಿಗಳ ಸ್ವಾಭಾವಿಕಶರೀರವೂ ನಿತ್ಯವಾದುದು.

೫೭. ಅನಿತ್ಯವಾದ ಶರೀರವೂ ಕರ್ಮವಿಲ್ಲದೆ ಸ್ವೀಕೃತವಾದುದು ಮತ್ತು ಕರ್ಮದ ಕಾರಣ ಬಂದುದು ಎಂದು ಎರಡುವಿಧ. ಮಹತ್ತು ಮೊದಲಾದ ಈಶ್ವರನ ರೂಪಗಳು ಮೊದಲನೆಯದು. ಹಾಗೆಯೇ ಅನಂತಗರುಡಾದಿಗಳು ತಮ್ಮ ತಮ್ಮ ಇಚ್ಛಾನುಸಾರ ಪರಿಗ್ರಹಿಸುವ ರೂಪಗಳೂ ಅಕರ್ಮಕೃತವಾದವು. ಕರ್ಮಕೃತವಾದುದೂ ಎರಡು ಬಗೆ. ತನ್ನ ಸಂಕಲ್ಪದಿಂದೊಡಗೂಡಿದ ಕರ್ಮದಿಂದಾದುದು ಮತ್ತು ಕೇವಲ ಕರ್ಮದಿಂದಾದುದು ಎಂದು. ಮಹಾತ್ಮರಾದ ಸೌಭರಿ ಮೊದಲಾದವರುಗಳದು ಮೊದಲನೆಯದು. ಮತ್ತೊಂದು ಇತರರದು.

೫೮. ಮತ್ತೆ ಸಾಮಾನ್ಯವಾದ ಎರಡು ವಿಭಾಗಗಳನ್ನಾಗಿ ಇದನ್ನು ಮಾಡಬಹುದು—ಸ್ಥಾವರ ಮತ್ತು ಜಂಗಮ ಎಂದು ಕಲ್ಲು, ಮರ, ಪೊದೆ,

೫೯. ಉದ್ಭಿಜ್ಜ–ಸ್ವೇದಜ–ಜರಾಯುಜ–ಅಂಡಜಾದಿಭೇದಾ ಅಪಿ ವಿಭಾಗಜ ಧರ್ಮಾಃ। ಅಯೋನಿಜಶರೀರಾಣ್ಯಪಿ ಸಂತಿ।

೬೦. ಏವಂ ಪಂಚೀಕೃತಾನಾಂ ಭೂತಾನಾಮೇವ ಅಂಡೋತ್ಪಾದಕತ್ವಮ್। ಅಂಡೋತ್ಪಾದನಾತ್ ಪೂರ್ವಸೃಷ್ಟಿಃ ಸಮಷ್ಟಿಸೃಷ್ಟಿಃ, ಅನಂತರ ಸೃಷ್ಟಿರ್ವ್ಯಷ್ಟಿಸೃಷ್ಟಿಃ।

೬೧. ಮಹದಾದೀನಾಮುತ್ಪತ್ತಿರ್ನಾಮ ಶಾಲೀಯಪಲಾಶತಾಟಂಕನ್ಯಾಯೇನ ಅವಸ್ಥಾಂತರಾಪತ್ತಿರೇವ। ಸೇನಾ–ವನ–ರಾಶ್ಯಾದಿವ್ಯವಹಾರವತ್।

---

ಬಳ್ಳಿ ಮುಂತಾದವು ಸ್ಥಾವರಗಳು. ದೇವ ಮನುಷ್ಯ, ಪಕ್ಷಿ, ನಾರಕಿ ಎಂದು ಜಂಗಮ ಶರೀರಗಳು ನಾಲ್ಕು ಬಗೆಯಾಗಿವೆ.

೫೯. ಹುಟ್ಟುವ ಬಗೆಗನುಗುಣವಾಗಿ ಉದ್ಭಿಜ್ಜ (ಮೊಳಕೆಯಿಂದ ಹುಟ್ಟುವುದು) ಸ್ವೇದಜ (ಬೆವರಿನಿಂದ ಹುಟ್ಟುವುದು), ಜರಾಯುಜ (ಗರ್ಭದಿಂದ ಹುಟ್ಟುವುದು) ಮತ್ತು ಅಂಡಜ (ಮೊಟ್ಟೆಯಿಂದ ಹುಟ್ಟುವುದು) ಎಂದು ವಿಭಾಗಗಳಾಗಿವೆ. ಈ ಸಾಮಾನ್ಯವಾದ ರೀತಿಯಲ್ಲಿ ಅಲ್ಲದೆ ಅಯೋನಿಜಗಳಾದ ಶರೀರಗಳೂ ಉಂಟು.

೬೦. ಹೀಗೆ ಪಂಚೀಕರಣ ಮಾಡಲ್ಪಟ್ಟ ಭೂತಗಳಿಂದ ಅಂಡೋತ್ಪತ್ತಿ ಆಗುತ್ತದೆ. ಅಂಡದ ಉತ್ಪತ್ತಿಗಿಂತ ಮೊದಲು ಆಗುವ ಸೃಷ್ಟಿಗೆ ಸಮಷ್ಟಿ ಸೃಷ್ಟಿ ಎಂದೂ ಅಂಡೋತ್ಪಾದನೆಯ ನಂತರ ಆಗುವ ಸೃಷ್ಟಿಗೆ ವ್ಯಷ್ಟಿಸೃಷ್ಟಿ ಎಂದೂ ಹೆಸರು.

೬೧. ಮಹತ್ತತ್ತ್ವ ಮುಂತಾದವುಗಳ ಉತ್ಪತ್ತಿಯಾದರೋ 'ಶಾಲೀ ಪತ್ರ ಕರ್ಣಾಭರಣ' ನ್ಯಾಯಕ್ಕನುಸಾರವಾಗಿ[13] ಬೇರೆ ಅವಸ್ಥೆಯನ್ನು ಹೊಂದುವುದಾಗಿದೆ. ಸೇನೆ, ವನ, ರಾಶಿ ಮುಂತಾದ ಶಬ್ದಗಳ ವ್ಯವಹಾರದಂತೆಯೇ ಇದೂ.

೬೨. ಪೂರ್ವಾಪರಾವಸ್ಥಾವಿಶೇಷಸಂಬಂಧಮಾತ್ರೇಣ ಕಾರ್ಯಕಾರಣ ಭೇದವ್ಯವಹಾರಃ | ತತ್ರ ಪೂರ್ವಾವಸ್ಥಾಪ್ರಹಾಣೇನ ವಿಜಾತೀಯಾವಸ್ಥಾಂತರಪ್ರಾಪ್ತೌ ತತ್ತ್ವಾಂತರವ್ಯಪದೇಶಃ ಪೃಥಿವೀಪರ್ಯಂತ ಏವ |

೬೩. ಇತ್ಥಂ ಪ್ರಕೃತಿಮಹದಹಂಕಾರೈಕಾದಶೇಂದ್ರಿಯ – ತನ್ಮಾತ್ರಪಂಚಕ–ಭೂತಪಂಚಕ ವಿಭಾಗೇನ ಚತುರ್ವಿಂಶತಿ ತತ್ತ್ವಾನಿ ವರ್ಣಿತಾನಿ |

೬೪. ಏತೇನ ನ್ಯೂನಾಧಿಕ ಸಂಖ್ಯಾತತ್ತ್ವವಾದಿನೋ ಬಾಹ್ಯಾಃ ಪಾಶುಪತಾಶ್ಚ ನಿರಸ್ತಾಃ | ಪರಮಾಣುಕಾರಣತ್ವವಾದಿನೋಽಪಿ ನಿರಸ್ತಾಃ |

೬೫. ಪ್ರಕೃತ್ಯಾದಯಶ್ಚ ಈಶ್ವರಸ್ಯ ಜೀವಸ್ಯ ಚ ಭೋಗ್ಯಭೋಗೋಪಕರಣ–ಭೋಗಸ್ಥಾನಾನಿ ಚ ಭವಂತಿ | ಭೋಗ್ಯಂ ವಿಷಯಾಃ |

---

೬೨. ಪೂರ್ವಾವಸ್ಥಾವಿಶೇಷದ ಸಂಬಂಧವನ್ನು ಹೊಂದಿರುವುದು ಹಾಗೂ ಉತ್ತರಾವಸ್ಥಾವಿಶೇಷದ ಸಂಬಂಧವನ್ನು ಹೊಂದಿರುವುದು ಎಂಬುವುದರಿಂದಲೇ ಕಾರ್ಯ ಕಾರಣಗಳಿಗೆ ಭೇದವನ್ನು ವ್ಯವಹಾರದಲ್ಲಿ ಹೇಳಲಾಗುವುದು. ದ್ರವ್ಯವೊಂದು ಪೂರ್ವಾವಸ್ಥೆಯನ್ನು ಬಿಟ್ಟು ಬಿಟ್ಟು ಬೇರೆಯ ಅವಸ್ಥೆಯನ್ನು ಹೊಂದುವುದರ ಮೂಲಕ ಹೊಸ ತತ್ತ್ವದ ಉತ್ಪತ್ತಿ ಆಯಿತೆಂಬುವುದು ಪೃಥ್ವೀ ತತ್ವದ ಉತ್ಪತ್ತಿಯವರೆಗೆ ಮಾತ್ರ.

೬೩. ಪ್ರಕೃತಿ, ಮಹತ್ತು, ಅಹಂಕಾರ, ಹನ್ನೊಂದು ಇಂದ್ರಿಯಗಳ, ಐದು ತನ್ಮಾತ್ರೆಗಳು, ಪಂಚಭೂತಗಳು ಎಂದು ಇಪ್ಪತ್ತನಾಲ್ಕು ತತ್ತ್ವಗಳನ್ನು ಹೀಗೆ ವರ್ಣಿಸಿದ್ದಾರೆ.

೬೪. ಇದರಿಂದಲೇ ಇವುಗಳಿಗಿಂತ ಕಡಿಮೆಯಾದ ಅಥವಾ ಅಧಿಕವಾದ ತತ್ತ್ವಗಳನ್ನು ಅಂಗೀಕಾರ ಮಾಡುವ ಪಾಶುಪತರು ಮತ್ತಿತರ ಹೊರಗಿನವರು ಖಂಡಿಸಲ್ಪಟ್ಟಿದ್ದಾರೆ. ಪರಮಾಣುಗಳೇ ಕಾರಣವೆಂದು ವಾದಿಸುವ ವೈಶೇಷಿಕರೂ ತಳ್ಳಿಹಾಕಲ್ಪಟ್ಟಿದ್ದಾರೆ.

೬೫. ಪ್ರಕೃತಿಯೇ ಮೊದಲಾದವು ಈಶ್ವರನಿಗೂ ಜೀವನಿಗೂ ಸಹ ಭೋಗ್ಯವೂ, ಭೋಗೋಪಕರಣವೂ, ಭೋಗಸ್ಥಾನವೂ ಆಗುತ್ತವೆ. ವಿಷಯ

ಭೋಗೋಪಕರಣಂ ಚಕ್ಷುರಾದಿಕರಣಾನಿ । ಭೋಗಸ್ಥಾನಾನಿ ಚತುರ್ದಶ ಭುವನಾಂತವರ್ತ್ಯಂಡಜಾತಾನಿ ।

೬೬. ಅಂಡಂ ನಾಮ ಕಪಿತ್ಥಫಲಾಕಾರಂ ಪಂಚೀಕೃತಪಂಚ ಭೂತಾರಬ್ಧಂ ಪ್ರಾಕೃತದ್ರವ್ಯಮ್ ।

೬೭. ತದ್ಯಥಾ–ಪದ್ಮಾಕಾರಾ ಭೂಃ । ಕರ್ಣಿಕಾಕಾರೋ ಮೇರುಃ । ಮೇರೋರ್ದಕ್ಷಿಣತೋ ಭಾರತ ಕಿಂಪುರುಷ ಹರಿವರ್ಷಾಣಿ ತ್ರೀಣಿ । ಉತ್ತರ ತಸ್ತು ರಮ್ಯಕ ಹಿರಣ್ಯಕ–ಕುರುವರ್ಷಾಣಿ ತ್ರೀಣಿ । ಪುರತೋ ಭದ್ರಾಶ್ವವರ್ಷಂ ಪಶ್ಚಾತ್ ಕೇತುಮಾಲಾಖ್ಯಂ ವರ್ಷಂ । ಮಧ್ಯೇ ತು ಇಲಾವೃತವಮ್ ।

೬೮. ಏವಂ ನವವರ್ಷಯುಕ್ತಂ ಜಂಬೂದ್ವೀಪಂ ಲಕ್ಷಯೋಜನ

---

ಗಳು ಭೋಗವಸ್ತುಗಳು ನೇತ್ರಗಳೇ ಮೊದಲಾದ ಇಂದ್ರಿಯಗಳು ಭೋಗಕ್ಕೆ ಸಾಧನಗಳಾಗುತ್ತವೆ. ಹದಿನಾಲ್ಕು ಲೋಕಗಳೊಳಗಿರುವ ಅಸಂಖ್ಯಾತವಾದ ಅಂಡಗಳ ಸಮೂಹಗಳು ಭೋಗಸ್ಥಾನಗಳಾಗಿವೆ.

೬೬. ಅಂಡವೆಂಬುದು ಪ್ರಕೃತಿ (ಪರಿಣಾಮವಾದ) ದ್ರವ್ಯ. ಇದು ಪಂಚೀಕೃತವಾದ ಪಂಚಭೂತಗಳಿಂದ ಉತ್ಪನ್ನವಾದುದು. ಬೇಲದ ಹಣ್ಣಿನ ಆಕಾರವನ್ನು ಇದು ಹೊಂದಿರುವುದು.

೬೭. ಅವು ಹೀಗಿರುವುವು ; ಭೂ ಎಂಬುದು ಪದ್ಮದ ಆಕಾರವುಳ್ಳದು. ಮೇರುವು (ಪದ್ಮದ) ಕರ್ಣಿಕೆಯ ಆಕಾರವನ್ನು ಹೊಂದಿದೆ. ಈ ಮೇರುವಿಗೆ ದಕ್ಷಿಣದಲ್ಲಿ ಭಾರತ, ಕಿಂಪುರುಷ, ಹರಿವರ್ಷಗಳೆಂಬ ಮೂರೂ ಉತ್ತರದಲ್ಲಿ ರಮ್ಯಕ, ಹಿರಣ್ಯಕ ಮತ್ತು ಕುರು ವರ್ಷಗಳೆಂಬ ಮೂರೂ ಇವೆ. ಆ ಮೇರುವಿನ ಮುಂಭಾಗದಲ್ಲಿ ಭದ್ರಾಶ್ವವರ್ಷವೂ ಹಿಂಭಾಗದಲ್ಲಿ ಕೇತುಮಾಲಾ ಎಂಬ ವರ್ಷವೂ ಇದೆ ಇಳಾವೃತವೆಂಬುದಾದರೋ ಮಧ್ಯದಲ್ಲಿದೆ.

೬೮. ಹೀಗೆ ಒಂಭತ್ತು ಖಂಡ (ವರ್ಷ)ಗಳನ್ನೊಳಗೊಂಡ ಜಂಬೂ ದ್ವೀಪವು ಒಂದು ಲಕ್ಷ ಯೋಜನಗಳಷ್ಟು ವಿಸ್ತಾರವನ್ನು ಹೊಂದಿದೆ. ಅಷ್ಟೇ

ವಿಸ್ತೀರ್ಣಂ ಸಮಪರಿಮಾಣೇನ ಲವಣ ಸಿಂಧುನಾವೃತಮ್ । ಸ ಸಿಂಧುರ್ದ್ವಿಗುಣೇನ ಸಪ್ತವರ್ಷಾತ್ಮಕೇನ ಪ್ಲಕ್ಷದ್ವೀಪೇನ ವೇಷ್ಟಿತಃ । ಸೋಪಿ ಇಕ್ಷು ಸಮುದ್ರೇಣ । ಸೋಽಬ್ಧಿಃ ಶಾಲ್ಮಲಿ ದ್ವೀಪೇನ । ಸ ಪುನಃ ಸುರಾಸಮುದ್ರೇಣ । ಸ ಕುಶದ್ವೀಪೇನ । ಸ ದಧ್ಯರ್ಣವೇನ । ಸೋಽಪಿ ಶಾಕದ್ವೀಪೇನ ವೇಷ್ಟಿತಃ । ಸ ಕ್ಷೀರಾರ್ಣವೇನ । ಸ ವರ್ಷದ್ವಯವಿಭಾಜಕ–ವಲಯಾಕಾರ–ಮಾನಸೋತ್ತರಪರ್ವತಸಹಿತೇನ ಪುಷ್ಕರದ್ವೀಪೇನ । ಸ ಶುದ್ಧ ಜಲಾರ್ಣವೇನ । ಏವಂ ದ್ವೀಪಾನಾಮುತ್ತರೋತ್ತರ ದ್ವೈಗುಣ್ಯಂ ದ್ರಷ್ಟವ್ಯಮ್

೬೯. ಪ್ಲಕ್ಷದ್ವೀಪಾದಯಶ್ಚ ಸಪ್ತವರ್ಷಾತ್ಮಕಾಃ । ಸಪ್ತದ್ವೀಪಾತ್ಮಕೋಽಯಂ ದ್ವಿಗುಣೀಕೃತಯಾ ಕಾಂಚನಭೂಮ್ಯಾವೃತಃ । ಕಾಂಚನಭೂ

---

ವಿಸ್ತಾರವುಳ್ಳ ಲವಣ ಸಮುದ್ರದಿಂದ ಅದು ಸುತ್ತುವರಿಯಲ್ಪಟ್ಟಿದೆ. ವಿಸ್ತಾರದಲ್ಲಿ ಇದಕ್ಕೆರಡರಷ್ಟಿರುವುದೂ ಸಪ್ತ ವರ್ಷಗಳನ್ನುಳ್ಳದೂ ಆದ ಪ್ಲಕ್ಷದ್ವೀಪವು ಲವಣ ಸಮುದ್ರವನ್ನು ಸುತ್ತುವರಿದಿದೆ. ಆ ಪ್ಲಕ್ಷ ದ್ವೀಪವು ಇಕ್ಷು ಸಮುದ್ರದಿಂದಲೂ, ಆ ಇಕ್ಷು ಸಮುದ್ರ ಶಾಲ್ಮಲಿ ದ್ವೀಪದಿಂದಲೂ ಸುತ್ತುವರಿಯಲ್ಪಟ್ಟಿದೆ. ಸುರಾಸಮುದ್ರವು ಶಾಲ್ಮಲಿ ದ್ವೀಪವನ್ನೂ ಕುಶದ್ವೀಪವು ಆ ಸುರಾ ಸಮುದ್ರವನ್ನೂ ಸುತ್ತುವರಿದಿದೆ. ಕುಶದ್ವೀಪವನ್ನು ತುಪ್ಪದ ಸಮುದ್ರವೂ, ಆ ತುಪ್ಪದ ಸಮುದ್ರವನ್ನು ಕ್ರೌಂಚ ದ್ವೀಪವೂ, ಆ ಕ್ರೌಂಚ ದ್ವೀಪವನ್ನು ಮೊಸರಿನ ಸಮುದ್ರವೂ, ಆ ಮೊಸರಿನ ಸಮುದ್ರವನ್ನು ಶಾಕ ದ್ವೀಪವೂ, ಆ ಶಾಖ ದ್ವೀಪವನ್ನು ಕ್ಷೀರ ಸಮುದ್ರವೂ ಸುತ್ತುವರಿದಿದೆ. ಎರಡು ಖಂಡಗಳನ್ನು ಬೇರ್ಪಡಿಸುವ ಬಳೆಯ ಆಕಾರದ ಮಾನಸೋತ್ತರ ಪರ್ವತದಿಂದ ಶೋಭಿಸುವ ಪುಷ್ಕರದ್ವೀಪ ಆ ಕ್ಷೀರಸಮುದ್ರವನ್ನು ಸುತ್ತುವರಿದಿದೆ. ಶುದ್ಧ ಜಲವನ್ನುಳ್ಳ ಸಮುದ್ರವು ಪುಷ್ಕರ ದ್ವೀಪವನ್ನು ಸುತ್ತುವರಿದಿದೆ. ಇವುಗಳಲ್ಲಿ ಮುಂದಿನ ಒಂದೊಂದು ದ್ವೀಪವೂ ಹಿಂದಿನ ದ್ವೀಪದ ಎರಡರಷ್ಟು ವಿಸ್ತಾರವನ್ನು ಹೊಂದಿದೆ ಎಂದು ತಿಳಿಯಬೇಕು.

೬೯. ಪ್ಲಕ್ಷ ಮುಂತಾದ ದ್ವೀಪಗಳು ಸಪ್ತವರ್ಷ (ಖಂಡ) ಗಳನ್ನು ಹೊಂದಿವೆ. ಸಪ್ತ ದ್ವೀಪಗಳನ್ನುಳ್ಳ ಈ ಭೂಭಾಗ ಇದಕ್ಕೆರಡರಷ್ಟು ವಿಸ್ತಾರವುಳ್ಳ

ವಿಸ್ತ್ರ ಲೋಕಾಲೋಕ ಪರ್ವತೇನ । ಪರ್ವತಸ್ತ್ವಂಧತಮಸಾ । ತದಂಧ ತಮೋ ಗರ್ಭೋದಕೇನ । ತದಂಡಕಟಾಹೇನ ।

೭೦. ಏವಂ ಭೂಮೇರಧಃ ಅತಲ–ವಿತಲ–ರಸಾತಲ–ತಲಾತಲ–ಮಹಾ ತಲ–ಪಾತಾಲ ಭೇದಾತ್ ಸಪ್ತಲೋಕಾಃ । ಅಧೋ ನರಕಾಃ । ತೇ ಚ ಪಾಪ ಕರ್ಮಣಾಂ ಪಾಪಾನುಭವಭೂಮಯಃ । ರೌರವಾದ್ಯಾ ಮುಖ್ಯತಯಾ ಏಕವಿಂಶತಿ ಪ್ರಭೇದಾಃ । ತತಸ್ತಮಃ । ತ ತೋ ಗರ್ಭೋದಕಮ್ । ಅನಂತರ ಮಂಡಕಟಾಹಃ ।

೭೧. ಏವಂ ಭೂಮೇರುಪರಿ ಲಕ್ಷಯೋಜನಾತ್ ಸೂರ್ಯಮಂಡ ಲಮ್ । ತದೇವ ಭುವರ್ಲೋಕಃ । ತದುಪರಿ ಚಂದ್ರಮಂಡಲಮ್ । ತಸ್ಮಾ

---

ಕಾಂಚನಭೂಮಿಯಿಂದ ಸುತ್ತುವರಿಯಲ್ಪಟ್ಟಿದೆ. ಲೋಕಾಲೋಕವನ್ನು ಅಂಧತಮಸ್ಸೂ, ಆ ಅಂಧತಮಸ್ಸನ್ನು ಗರ್ಭೋದಕವೂ ಆ ಗರ್ಭೋದಕವನ್ನು ಅಂಡಕಟಾಹವೂ ಸುತ್ತುವರಿದಿದೆ.

೭೦. ಹೀಗೆಯೇ ಭೂಮಿಯ ಕೆಳಭಾಗದಲ್ಲಿ ಅತಲ, ವಿತಲ, ರಸಾತಲ, ಮಹಾತಲ, ಸುತಲ ಮತ್ತು ಪಾತಾಲ ಎಂಬ ಏಳು ಲೋಕಗಳಿವೆ. ಅವು ಗಳಿಗೂ ಕೆಳಗೆ ನರಕ ಲೋಕಗಳಿವೆ. ಪಾಪಕೃತ್ಯಗಳನ್ನು ಮಾಡಿದವರು ತಮ್ಮ ಪಾಪಕರ್ಮದ ಫಲವನ್ನನುಭವಿಸುವ ಪ್ರದೇಶಗಳವು. ರೌರವಾದಿ ನರಕಗಳು ಮುಖ್ಯವಾಗಿ ಇಪ್ಪತ್ತೊಂದು ಬಗೆಗಳಾಗಿವೆ. ಅದರಾಚೆ ಕತ್ತಲೆ ಆವರಿಸಿದೆ. ಅದರ ನಂತರ ಗರ್ಭೋದಕವೂ ಅದಕ್ಕೂ ಆಚೆ ಅಂಡಕಟಾಹವೂ ಇದೆ.

೭೧. ಹೀಗೆಯೇ ಭೂಮಿಯ ಮೇಲ್ಗಡೆ ಒಂದು ಲಕ್ಷ ಯೋಜನದ ದೂರದಲ್ಲಿ ಸೂರ್ಯಮಂಡಲವಿದೆ. ಅದೇ ಭುವರ್ಲೋಕ. ಅದಕ್ಕೂ ಮೇಲ್ಗಡೆ ಚಂದ್ರಮಂಡಲವಿದೆ. ಅದಕ್ಕೂ ಆಚೆ ಬುಧ, ಶುಕ್ರ, ಅಂಗಾರಕ, ಬೃಹಸ್ಪತಿ, ಶನಿ, ಸಪ್ತರ್ಷಿ ಮಂಡಲವೇ ಮುಂತಾದ ನಕ್ಷತ್ರ ಲೋಕವಿದೆ. ಅದಕ್ಕೂ ಮೇಲೆ. ಧ್ರುವ ಇದೆ. ಸೂರ್ಯಲೋಕದಿಂದ ಹಿಡಿದು ಧ್ರುವಲೋಕದವರಗೆ ಸ್ವರ್ಲೋಕ ಸ್ವರ್ಲೋಕಕ್ಕೆ ಮೇಲ್ಗಡೆ ನಾಲ್ಕು ಲಕ್ಷ ಯೋಜನಗಳ ದೂರದಲ್ಲಿ ಕೋಟಿ

ದುಪರಿ ನಕ್ಷತ್ರಬುಧಶುಕ್ರಾಂಗಾರಕಬೃಹಸ್ಪತಿಶನಿಸಪ್ತರ್ಷಿಮಂಡಲಾನಿ । ತದುಪರಿ ಧ್ರುವಃ । ಸೂರ್ಯಮಂಡಲಮಾರಭ್ಯ ಧ್ರುವಲೋಕಪರ್ಯಂತಂ ಸ್ವರ್ಲೋಕಃ । ಚತುರ್ಲಕ್ಷಾದುಪರಿ ಕೋಟಿಯೋಜನೋಚ್ಛ್ರಾಯೋ ಮಹರ್ಲೋಕಃ । ತಸ್ಮಾತ್ ದ್ವಿಗುಣೋ ಜನಲೋಕಃ । ತತಶ್ಚತುರ್ಗುಣಸ್ತಪೋ ಲೋಕಃ । ತಸ್ಮಾತ್ ದ್ವಾದಶಕೋಟ್ಯುಚ್ಛ್ರಾಯಃ ಸತ್ಯಲೋಕಃ । ತತಸ್ತಮೋ ಗರ್ಭೋದಕಂ ಅಂಡಕಟಾಹಶ್ಚ ।

೭೨. ಏವಂ ತಿರ್ಯಗೂರ್ಧ್ವಪ್ರಮಾಣೇನ ಪಂಚಾಶತ್ಕೋಟಿಯೋಜನತ್ವಂ ಭೂಮೇರುಕ್ತಂ ಭವತಿ । ಶತಕೋಟಿಯೋಜನವಿಸ್ತೀರ್ಣವಾದೋ ಮಾನಭೇದೇನ । ಅಂಡಕಟಾಹಸ್ತು ಕೋಟಿಯೋಜನೋಚ್ಛ್ರಾಯಃ । ತದಂಡಂ ದಶೋತ್ತರಾವರಣಾವೃತಂ । ಏತಾದೃಶಾನಿ ಅಂಡಾನಿ ಅನಂತಾನಿ ಜಲಬುದ್ಬುದವತ್ । ಯುಗಪದೀಶ್ವರ ಸೃಷ್ಟಾನಿ । ಈಶ್ವರಸ್ಯ ಚತುರ್ಮುಖ ಪರ್ಯಂತಾ

---

ಯೋಜನ ವಿಸ್ತಾರದ ಮಹರ್ಲೋಕವಿದೆ. ಆ ಮಹರ್ಲೋಕದ ಎರಡರಷ್ಟು ವಿಸ್ತಾರವನ್ನು ಜನಲೋಕ ಹೊಂದಿದೆ. ಆ ಜನಲೋಕದ ನಾಲ್ಕರಷ್ಟು ವಿಸ್ತಾರವುಳ್ಳುದು ತಪೋಲೋಕ. ಅದಕ್ಕೂ ಮೇಲ್ಗಡೆ ಹನ್ನೆರಡು ಕೋಟಿ ಯೋಜನದ ವಿಸ್ತಾರವುಳ್ಳ ಸತ್ಯಲೋಕವಿದೆ. ಅದರಾಚೆ ತಮಸ್ಸೂ, ಗರ್ಭೋದಕವೂ ಅಂಡಕಟಾಹವೂ ಇವೆ.

೭೨. ಈ ರೀತಿಯಾಗಿ ಭೂಮಿಗೆ ಐವತ್ತು ಕೋಟಿ ಯೋಜನಗಳ ವಿಸ್ತಾರವನ್ನು ಎತ್ತರ ಮತ್ತು ಹರಹಿನಲ್ಲಿ ಹೇಳಲಾಯಿತು. ಇದು ನೂರು ಕೋಟಿ ಯೋಜನಗಳ ವಿಸ್ತಾರವುಳ್ಳುದು ಎಂಬ ವಾದ ಅಳತೆಯಲ್ಲಿನ ಭೇದದ ಕಾರಣ ಬಂದಿದೆ. ಅಂಡಕಟಾಹದ ವಿಸ್ತಾರ ಒಂದು ಕೋಟಿ ಯೋಜನಗಳು. ಆ ಅಂಡವನ್ನು ಅದಕ್ಕಿಂತ ಹತ್ತರಷ್ಟು ವಿಸ್ತಾರವುಳ್ಳ ಆವರಣ ಸುತ್ತುವರಿದಿದೆ. ಇಂತಹ ಅಂಡಗಳಾದರೂ ನೀರಿನ ಗುಳ್ಳೆಗಳಂತೆ ಅನಂತ ವಾಗಿವೆ ಇವೆಲ್ಲವೂ ಈಶ್ವರನಿಂದ ಒಮ್ಮೆಯೇ ಸೃಜಿಸಲ್ಪಟ್ಟಿವೆ. ಚತುರ್ಮುಖ ಬ್ರಹ್ಮನವರಗೆ ಆಗುವ ಸೃಷ್ಟಿಯು ಈಶ್ವರನಿಂದ ನೇರವಾಗಿ ಆಗುತ್ತದೆ. ಅದರ ಮುಂದೆ

ಸೃಷ್ಟಿರದ್ವಾರಿಕಾ, ತದನಂತರಂ ಸದ್ವಾರಿಕೇತಿ ವಿವೇಕಃ । ವಿಸ್ತರಸ್ತು ಪುರಾಣ ರತ್ನಾದಿಷು ದ್ರಷ್ಟವ್ಯಃ । ಇತಿ ಪ್ರಕೃತಿಃ ನಿರೂಪಿತಾ ।

ಇತಿ ಶ್ರೀ ವಾಧೂಲಕುಲತಿಲಕ ಶ್ರೀಮನ್ಮಹಾಚಾರ್ಯಸ್ಯ ಪ್ರಥಮದಾಸೇನ
ಶ್ರೀನಿವಾಸದಾಸೇನ ವಿರಚಿತಾಯಾಂ ಯತೀಂದ್ರಮತದೀಪಿಕಾಯಾಂ
ಪ್ರಕೃತಿ ನಿರೂಪಣಂ ನಾಮ ಚತುರ್ಥೋऽವತಾರಃ

---

ಪರೋಕ್ಷವಾಗಿ (ಆವನ ಮೂಲಕ) ಆಗುತ್ತದೆ. ಪುರಾಣ ರತ್ನವಾದ ವಿಷ್ಣು ಪುರಾಣದಿಂದ ಇದರ ವಿವರಗಳನ್ನೆಲ್ಲಾ ಅರಿಯ ಬಹುದು. ಇಲ್ಲಿಗೆ ಪ್ರಕೃತಿ ತತ್ತ್ವದ ನಿರೂಪಣೆ ಮುಗಿಯುತ್ತದೆ.

ಇಂತು ವಾಧೂಲಕುಲತಿಲಕನೂ ಮಹಾಚಾರ್ಯರ ಪ್ರಥಮ ದಾಸನೂ ಆದ
ಶ್ರೀನಿವಾಸದಾಸನಿಂದ ವಿರಚಿತವಾದ ಯತೀಂದ್ರಮತದೀಪಿಕೆಯಲ್ಲಿ
ಪ್ರಕೃತಿ ನಿರೂಪಣೆ ಎಂಬ ನಾಲ್ಕನೆಯ ಅವತಾರ
ಮುಗಿದುದು.

## ಪಂಚಮೋಽವತಾರಃ

## ಕಾಲಃ

೧. ಅಥ ಅಚಿದ್ವಿಶೇಷಃ ಕಾಲೋ ನಿರೂಪ್ಯತೇ । ಕಾಲೋ ನಾಮ ಗುಣತ್ರಯರಹಿತೋ ಜಡದ್ರವ್ಯವಿಶೇಷಃ । ಸ ಚ ನಿತ್ಯೋ ವಿಭುಶ್ಚ । ಭೂತ ಭವಿಷ್ಯದ್ವರ್ತಮಾನಭೇದೇನ ತ್ರಿವಿಧಃ । ಯುಗವತ್ ಕ್ಷಿಪ್ರಚಿರಾದಿವ್ಯಪದೇಶ ಹೇತುಃ । ನಿಮೇಷಕಾಷ್ಠ–ಕಲಾ–ಮುಹೂರ್ತ–ದಿವಸ ಪಕ್ಷ–ಮಾಸ–ಋತ್ವಯನ ಸಂವತ್ಸರಾದಿ ವ್ಯಪದೇಶ ಹೇತುಶ್ಚ ।

೨. ಮನುಷ್ಯಮಾನೇನ ಮಾಸಃ ಪಿತೄಣಾಂ ದಿನಂ । ತೇಷಾಂ ಅಮಾವಾಸ್ಯಾ ತು ಮಧ್ಯಾಹ್ನಮ್ । ಮನುಷ್ಯಮಾನೇನ ವತ್ಸರೋ ದೇವಾನಾಂ

---

## ಐದನೆಯ ಅವತಾರ

## ಕಾಲ

೧. ಅಚಿದ್ವಿಶೇಷವಾದ ಕಾಲವನ್ನು ಕುರಿತು ಈಗ ನಿರೂಪಿಸುತ್ತೇವೆ. ಕಾಲವೆಂಬುದು ಗುಣತ್ರಯಗಳಿಂದ ಬಿಡಲ್ಪಟ್ಟ ಜಡದ್ರವ್ಯವಿಶೇಷ[93]. ಅದು ನಿತ್ಯವಾದುದು ; ವಿಭುವಾದುದು. ಭೂತ, ಭವಿಷ್ಯತ್ ಮತ್ತು ವರ್ತಮಾನ ಎಂದು ಅದು ಮೂರು ಬಗೆ. 'ಒಮ್ಮೆಯೇ', 'ಬೇಗ', 'ದೀರ್ಘಕಾಲ ಮುಂತಾದ ಪದಗಳ ವ್ಯವಹಾರಕ್ಕೆ ಅದು ಕಾರಣ. ಹಾಗೆಯೇ ಅದು ನಿಮೇಷ, 'ಕಾಷ್ಠಾ', 'ಕಲಾ', 'ಮುಹೂರ್ತ', 'ದಿವಸ' 'ಪಕ್ಷ', 'ಮಾಸ', 'ಋತು', 'ಆಯನ', 'ಸಂವತ್ಸರ', ಮೊದಲಾದವುಗಳ ವ್ಯವಹಾರಕ್ಕೆ ಕಾರಣವಾಗಿದೆ.

೨. ಮನುಷ್ಯರ ಗಣನೆಯ ಒಂದು ತಿಂಗಳು ಪಿತೃಗಳಿಗೆ ಒಂದು ದಿನ. ಅವರಿಗೆ ಅಮಾವಾಸ್ಯೆಯು ನಡುಹಗಲು. ಮನುಷ್ಯರ ಗಣನೆಯ ಒಂದು ವರ್ಷವು ದೇವತೆಗಳಿಗೆ ಒಂದು ದಿವಸ. ಅವರಿಗೆ ಉತ್ತರಾಯಣ ಹಗಲು ;

ದಿನಂ । ತೇಷಾಂ ಉತ್ತರಾಯಣಂ ಅಹಃ । ದಕ್ಷಿಣಾಯನಂ ರಾತ್ರಿಃ । ಏವಂ ದೇವಮಾನೇನ ದ್ವಾದಶವರ್ಷ ಸಹಸ್ರಸಂಖ್ಯಾಕಂ ಚತುರ್ಯುಗಮಿತ್ಯುಚ್ಯತೇ ।

೩. ತತ್ರ ಚತುಸ್ಸಹಸ್ರವರ್ಷಸಂಖ್ಯಾಕಂ ಕೃತಯುಗಮ್ । ತತ್ರ ಪೂರ್ಣೋ ಧರ್ಮಃ । ತ್ರಿಸಹಸ್ರವರ್ಷಸಂಖ್ಯಾಕಂ ತ್ರಿಪಾದ್ಧರ್ಮವತ್ ತ್ರೇತಾಯುಗಮ್ । ದ್ವಿಸಹಸ್ರ ವರ್ಷಪರಿಮಿತಂ ದ್ವಿಪಾದ್ಧರ್ಮವತ್ ದ್ವಾಪರಮ್ । ಸಹಸ್ರವರ್ಷ ಸಂಖ್ಯಾಕಮ್ ಏಕಪಾದಧರ್ಮಸಂಯುಕ್ತಂ ಕಲಿಯುಗಮ್ । ಏತೇಷಾಂ ಸಂಧಿಃ ದ್ವಿಸಹಸ್ರ ಸಂಖ್ಯಾಕಃ ।

೪. ಏವಂ ಚತುರ್ಯುಗ ಸಹಸ್ರಾಣಿ ಬ್ರಹ್ಮಣೋ ದಿವಸಪ್ರಮಾಣಮ್ । ಏವಂ ರಾತ್ರಿರಪಿ ।

೫. ಬ್ರಹ್ಮಣೋಽಹ್ನಿ ಚತುರ್ದಶ ಮನವೋ ಜಾಯಂತೇ । ಇಂದ್ರಾ

---

ದಕ್ಷಿಣಾಯನ ರಾತ್ರಿ. ಹೀಗೆ ದೇವತೆಗಳ ಗಣನೆಯ ಹನ್ನೆರಡು ಸಹಸ್ರ ವರ್ಷಗಳು ಸೇರಿದರೆ ಚತುರ್ಯುಗಗಳಾಗುತ್ತವೆ.

೩. ಇವುಗಳಲ್ಲಿ ನಾಲ್ಕು ಸಹಸ್ರ ವರ್ಷಗಳ ಕಾಲವನ್ನುಳ್ಳದು ಕೃತ ಯುಗ. ಆ ಕಾಲದಲ್ಲಿ ಧರ್ಮ ಪೂರ್ಣವಾಗಿರುವುದು. ತ್ರೇತಾಯುಗದ ಕಾಲಮಾನ ಮೂರು ಸಹಸ್ರ ವರ್ಷಗಳು. ಆ ಕಾಲದಲ್ಲಿ ಧರ್ಮದ ನಾಲ್ಕು ಪಾದಗಳಲ್ಲಿ ಮೂರು ಮಾತ್ರ ಇರುತ್ತವೆ. ದ್ವಾಪರಯುಗ ಎರಡು ಸಹಸ್ರ ವರ್ಷಗಳ ಕಾಲಮಾನವನ್ನುಳ್ಳದಾಗಿ ಧರ್ಮದ ಎರಡೇ ಪಾದಗಳನ್ನು ಹೊಂದಿರುತ್ತದೆ. ಧರ್ಮದ ಒಂದೇ ಪಾದವನ್ನುಳ್ಳ ಕಲಿಯುಗದ ಕಾಲಮಾನವಾದರೋ ಒಂದು ಸಹಸ್ರ ವರ್ಷಗಳು. ಈ ಯುಗಗಳ (ಒಂದು ಯುಗಕ್ಕೂ ಮತ್ತೊಂದು ಯುಗಕ್ಕೂ) ನಡುವಣ ಸಂಧಿಕಾಲ ಎರಡು ಸಹಸ್ರ ವರ್ಷಗಳು.

೪. ಇಂಥ ಚತುರ್ಯುಗಗಳು ಒಂದು ಸಾವಿರ ಸೇರಿದರೆ (ಚತುರ್ಮುಖ) ಬ್ರಹ್ಮನ ಒಂದು ಹಗಲಾಗುತ್ತದೆ. ಹಾಗೆಯೇ ರಾತ್ರಿಯೂ ಸಹ.

೫. ಬ್ರಹ್ಮದೇವನ ಒಂದು ಹಗಲಿನ ಕಾಲದಲ್ಲಿ ಹದಿನಾಲ್ಕು ಮನುಗಳು

ಅಪಿ ತಥೈವ । ತಥಾ ಸಪ್ತರ್ಷಯಶ್ಚ । ಏಕೈಕಮನೋಃ ಏಕಸಪ್ತತಿ ಚತುರ್ಯುಗ ಪರಿಮಾಣಕಾಲಃ । ಏವಂ ಬ್ರಹ್ಮಮಾನೇನ ಬ್ರಹ್ಮಣಃ ಶತವರ್ಷ ಜೀವಿತ್ವಮ್ ।

೬. ಏತತ್ ಸರ್ವಂ ಕಾಲಾಧೀನಮ್ । ಏವಂ ನಿತ್ಯ–ನೈಮಿತ್ತಿಕ ಪ್ರಾಕೃತಾಃ ಪ್ರಲಯಾ ಅಪಿ ಕಾಲಾಧೀನಾಃ । ಕಾಲಸ್ಯ ಸ್ವಕಾರ್ಯಂ ಪ್ರತಿ ಸ್ವಸ್ಯ ಉಪಾದಾನತ್ವಮ್ ।

೭. ಅಖಂಡಃ ಕಾಲೋ ನಿತ್ಯಃ । ಕಾರ್ಯಃ ಪುನರನಿತ್ಯಃ ।

೮ ಏವಂಭೂತಃ ಕಾಲಃ ಈಶ್ವರಸ್ಯ ಕ್ರೀಡಾಪರಿಕರೋ ಭವತಿ । ಲೀಲಾವಿಭೂತೌ ಈಶ್ವರಃ ಕಾಲಾದೀನ ಏವ ಕಾರ್ಯಂ ಕರೋತಿ । ನಿತ್ಯವಿಭೂತೌ ತು ಕಾಲಸ್ಯವಿದ್ಯಮಾನತ್ವೇಽಪಿ ತಸ್ಯ ನ ಸ್ವಾತಂತ್ರ್ಯಮ್ ।

---

ಹುಟ್ಟುತ್ತಾರೆ. ಅಷ್ಟೇ ಸಂಖ್ಯೆಯ ಇಂದ್ರರುಗಳೂ ಹುಟ್ಟುತ್ತಾರೆ ಹಾಗೆಯೇ (ಹದಿನಾಲ್ಕು) ಸಪ್ತಋಷಿಗಳೂ ಹುಟ್ಟುತ್ತಾರೆ. ಎಪ್ಪತ್ತೊಂದು ಚತುರ್ಯುಗಗಳ ಕಾಲವು ಒಬ್ಬೊಬ್ಬ ಮನುವಿನ ಕಾಲಪರಿಮಾಣವಾಗಿದೆ. ಹೀಗೆ ಬ್ರಹ್ಮದೇವನ ಗಣನೆಯಿಂದ ಬ್ರಹ್ಮದೇವನಿಗೆ ನೂರು ವರ್ಷಗಳ ಜೀವಿತವಿದೆ.

೬. ಇವೆಲ್ಲವೂ ಕಾಲಕ್ಕೆ ಅಧೀನವಾಗಿದೆ ಹೀಗೆಯೇ ನಿತ್ಯ, ನೈಮಿತ್ತಿಕ ಮತ್ತು ಪ್ರಾಕೃತ ಪ್ರಳಯಗಳೂ[94] ಕಾಲಕ್ಕೆ ಅಧೀನವಾಗಿವೆ. ಕಾಲವು ತನ್ನ ಕಾರ್ಯಕ್ಕೆ ತಾನೇ ಉಪಾದಾನ ಕಾರಣವಾಗಿದೆ.

೭ ಅಖಂಡವಾದ ಕಾಲ ನಿತ್ಯ. ಕಾರ್ಯರೂಪವಾದ ಕಾಲ ಅನಿತ್ಯ[95].

೮ ಈ ರೀತಿಯಾಗಿರುವ ಕಾಲವು ಭಗವಂತನಿಗೆ ಲೀಲೋಪಕರಣವಾಗಿದೆ. ಲೀಲಾವಿಭೂತಿಯಲ್ಲಿ ಈಶ್ವರನು ಕಾಲಕ್ಕೊಳಗಾಗಿಯೇ ವ್ಯಾಪಾರಗಳನ್ನು ಮಾಡುತ್ತಾನೆ ನಿತ್ಯವಿಭೂತಿಯಲ್ಲಿಯಾದರೋ ಕಾಲವು ಇರುವುದಾದರೂ ಅದಕ್ಕೆ ಸ್ವಾತಂತ್ರ್ಯವಿಲ್ಲ[96].

೯. ಕೇಚಿತ್ತು ತತ್ರ ಕಾಲೋ ನಾಸ್ತೀತಿ ವದಂತಿ । ಅನ್ಯೇ ತು ತಾಮ ಸಮಹಾನ್ ಕಾಲ ಇತಿ । ಉಭಯೇಷಾಂ ಆಗಮಬಾಧಃ ಪ್ರತ್ಯಕ್ಷಬಾಧಶ್ಚ । ಷಡಿಂದ್ರಿಯವೇದ್ಯಃ ಕಾಲ ಇತ್ಯಾಚಾರ್ಯಾಃ । ತೇನ ಅನುಮೇಯವಾದ ನಿರಾಸಃ । ಇತಿ ಕಾಲೋ ನಿರೂಪಿತಃ ।

ಇತಿ ವಾಧೂಲ ಕುಲ ತಿಲಕ ಶ್ರೀಮನ್ಮಹಾಚಾರ್ಯಸ್ಯ ಪ್ರಥಮದಾಸೇನ
ಶ್ರೀನಿವಾಸದಾಸೇನ ವಿರಚಿತಾಯಾಂ ಯತೀಂದ್ರಮತದೀಪಿಕಾಯಾಂ
ಕಾಲ ನಿರೂಪಣಂ ನಾಮ ಪಂಚಮೋಽವತಾರಃ

---

೯. ಕೆಲವರು ಕಾಲವು ಇಲ್ಲವೇ ಇಲ್ಲವೆಂದು ವಾದಿಸುತ್ತಾರೆ. ಇನ್ನು ಕೆಲವರು ಹೊಮ್ಮಿದ ತಮಸ್ಸುಳ್ಳ ಮಹತ್ತೇ ಕಾಲವೆನ್ನುತ್ತಾರೆ. ಇವೆರಡು ವಾದಗಳೂ ಶಾಸ್ತ್ರಕ್ಕೂ ಪ್ರತ್ಯಕ್ಷಕ್ಕೂ ವಿರುದ್ಧವಾಗಿವೆ. ಕಾಲವು ಆರು ಇಂದ್ರಿಯಗಳಿಗೂ ಗೋಚರಿಸುವುದೆಂದು ಆಚಾರ್ಯರು ಹೇಳುತ್ತಾರೆ. ಇದರಿಂದ ಅದು ಅನುಮಾನದಿಂದ ತಿಳಿಯಲ್ಪಡುವುದೆಂಬ ವಾದ ನಿರಸ್ತವಾಯಿತು. ಇಷ್ಟು ಕಾಲದ ನಿರೂಪಣೆ.

ಇಂತು ವಾಧೂಲಕುಲತಿಲಕನೂ ಮಹಾಚಾರ್ಯರ ಪ್ರಥಮದಾಸನೂ ಆದ
ಶ್ರೀನಿವಾಸದಾಸನಿಂದ ವಿರಚಿತವಾದ ಯತೀಂದ್ರಮತದೀಪಿಕೆಯಲ್ಲಿ
ಕಾಲ ನಿರೂಪಣೆ ಎಂಬ ಐದನೆಯ ಅವತಾರ
ಮುಗಿದುದು.

## ಷಷ್ಠೋಽವತಾರಃ

# ನಿ ತ್ಯ ವಿ ಭೂ ತಿ ಃ

೧. ಅಥ ನಿತ್ಯವಿಭೂತಿರ್ನಿರೂಪ್ಯತೇ । ಶುದ್ಧಸತ್ತ್ವ – ಧರ್ಮಭೂತಜ್ಞಾನ–ಜೀವೇಶ್ವರಸಾಧಾರಣಂ ಲಕ್ಷಣಂ ಅಜಡತ್ವಮ್ । ಅಜಡತ್ವಂ ನಾಮ ಸ್ವಯಂಪ್ರಕಾಶತ್ವಮ್ । ತತ್ರ ಶುದ್ಧಸತ್ತ್ವಧರ್ಮಭೂತಜ್ಞಾನಸಾಧಾರಣಂ ಲಕ್ಷಣಂ–ಪರಾಕ್ತ್ವೇ ಸತಿ ಅಜಡತ್ವಮ್ । ತತ್ತು ಸ್ವಯಂಪ್ರಕಾಶತ್ವೇ ಸತಿ ಪರಸ್ಮಾ ಏವ ಭಾಸಮಾನತ್ವಮ್ ।

೨. ಶುದ್ಧಸತ್ತ್ವಂ ನಾಮ ತ್ರಿಗುಣದ್ರವ್ಯವ್ಯತಿರಿಕ್ತತ್ವೇ ಸತಿ ಸತ್ತ್ವವತ್ತ್ವಂ। ನಿಶ್ಶೇಷಾವಿದ್ಯಾನಿವೃತ್ತಿದೇಶವಿಜಾತೀಯಾನ್ಯತ್ವಮ್‌ವಾ। ಸಾ ವಿಭೂತಿಃ ಊರ್ಧ್ವಪ್ರದೇಶೇ ಅನಂತಾ। ಅಧಃ ಪ್ರದೇಶೇ ಪರಿಚ್ಛಿನ್ನಾ ಅಚೇತನಾ ಸ್ವಯಂಪ್ರಕಾಶಾ

---

## ಆರನೆಯ ಅವತಾರ

# ನಿತ್ಯ ವಿಭೂತಿ

೧. ಈಗ ನಿತ್ಯ ವಿಭೂತಿಯನ್ನು ಕುರಿತು ವಿವರಿಸಲಾಗುತ್ತದೆ. ಜಡವಲ್ಲದಿರುವಿಕೆಯು ಶುದ್ಧಸತ್ತ್ವ, ಧರ್ಮಭೂತಜ್ಞಾನ, ಜೀವ ಮತ್ತು ಈಶ್ವರ ಇವರಿಗೆಲ್ಲಾ ಸಮಾನವಾದ ಲಕ್ಷಣ. ಅಜಡತ್ವವೆಂದರೆ ಸ್ವಯಂಪ್ರಕಾಶತ್ವ. ಮೇಲೆ ಹೇಳಿದ ತತ್ತ್ವಗಳಲ್ಲಿ ಶುದ್ಧಸತ್ತ್ವ ಮತ್ತು ಧರ್ಮಭೂತಜ್ಞಾನಗಳಿಗೆ ಸಾಧಾರಣವಾದ ಲಕ್ಷಣ ಯಾವುದೆಂದರೆ ಅಜಡತ್ವವನ್ನು ಹೊಂದಿದ್ದು ಮತ್ತೊಬ್ಬರಿಗೇ ಗೋಚರವಾಗುತ್ತಿರುವುದು. ಅವುಗಳು ಸ್ವಯಂಪ್ರಕಾಶತ್ವವನ್ನು ಹೊಂದಿದ್ದು ಮಗುದೊಬ್ಬರ ಜ್ಞಾನಕ್ಕೆ ವಿಷಯವಾಗುವವು[37].

೨. ತ್ರಿಗುಣಗಳನ್ನು ಹೊಂದಿರುವ [ಪ್ರಕೃತಿ] ದ್ರವ್ಯಕ್ಕಿಂತ ಬೇರೆಯಾಗಿದ್ದು ಸತ್ತ್ವಗುಣವನ್ನೇ ಹೊಂದಿರುವ ದ್ರವ್ಯ ಶುದ್ಧ ಸತ್ತ್ವ. ಅವಿದ್ಯೆಯು ನಿಶ್ಶೇಷವಾಗಿ ನಿವೃತ್ತಿಯಾಗತಕ್ಕ ದೇಶಕ್ಕೆ ವಿಜಾತಿಯವಾದುದಕ್ಕಿಂತ ಅದು ಬೇರೆಯಾದುದು. 'ಈ ವಿಭೂತಿ'ಯು ಊರ್ಧ್ವ ಪ್ರದೇಶದಲ್ಲಿ ಅನಂತವಾಗಿಯೂ

ಚ ಆನಂದಾವಹತ್ವಾತ್ ಆನಂದನಾಮಿಕಾ । ಪಂಚೋಪನಿಷನ್ಮಂತ್ರಪ್ರತಿಪಾದ್ಯತಯಾ ಪಂಚೋಪನಿಷದಾತ್ಮಿಕಾ । ಅಪ್ರಾಕೃತ ಪಂಚಶಕ್ತಿಮತ್ತ್ವಯಾ ಪಂಚಶಕ್ತಿಮಯೀತಿ ನಿಗದ್ಯತೇ ।

೩. ಸಾ ವಿಭೂತಿಃ ಈಶ್ವರಸ್ಯ ನಿತ್ಯಾನಾಂ ಮುಕ್ತಾನಾಂಚ ಈಶ್ವರ ಸಂಕಲ್ಪಾತ್ ಭೋಗ್ಯಭೋಗೋಪಕರಣಭೋಗಸ್ಥಾನರೂಪಾ ಚ ಭವತಿ । ಭೋಗ್ಯಂ ಈಶ್ವರಶರೀರಾದಿ । ಭೋಗೋಪಕರಣಂ ಚಂದನಕುಸುಮವಸ್ತ್ರ ಭೂಷಣಾಯುಧಾದೀನಿ । ಭೋಗಸ್ಥಾನಂ ತು ಗೋಪುರಪುರಪ್ರಾಕಾರ ಮಂಡಪ ವಿಮಾನೋದ್ಯಾನ–ಪದ್ಮಿನ್ಯಾದಿಕಮ್ ।

೪. ತತ್ರ ಈಶ್ವರಸ್ಯ ನಿತ್ಯಾನಾಂ ಚ ಶರೀರಾಣಿ ಭಗವನ್ನಿತ್ಯೇಚ್ಛಾ

---

ಕೆಳಗಿನ ಪ್ರದೇಶದಲ್ಲಿ ಪರಿಮಿತವಾಗಿಯೂ ಇದೆ. ಇದು ಅಚೇತನವಾದುದು ಹಾಗೂ ಸ್ವಯಂ ಪ್ರಕಾಶವಾದುದು. ಆನಂದವನ್ನುಂಟುಮಾಡುವ ಕಾರಣ ಆನಂದವೆಂಬ ಹೆಸರನ್ನೇ ಹೊಂದಿದೆ. ಪಂಚೋಪನಿಷನ್ಮಂತ್ರಗಳಿಂದ ಪ್ರತಿಪಾದ್ಯವಾದ ಕಾರಣ ಪಂಚೋಪನಿಷದಾತ್ಮಕವಾಗಿದೆ. ಅಪ್ರಾಕೃತವಾದ ಪಂಚಶಕ್ತಿಗಳಿಂದ ಇದು ಆಗಿರುವ ಕಾರಣ 'ಪಂಚಶಕ್ತಿಮಯೀ'[8] ಎಂದೂ ಹೇಳಲ್ಪಡುತ್ತದೆ.

೩. ಈ ವಿಭೂತಿಯು ಈಶ್ವರ ಸಂಕಲ್ಪದಂತೆ ಈಶ್ವರನಿಗೂ, ನಿತ್ಯರಿಗೂ ಮುಕ್ತರಿಗೂ ಭೋಗ್ಯ ಪದಾರ್ಥಗಳಾಗಿಯೂ, ಭೋಗೋಪಕರಣಗಳಾಗಿಯೂ, ಭೋಗಸ್ಥಾನಗಳಾಗಿಯೂ ಪರಿಣಾಮಹೊಂದುತ್ತದೆ. ಭೋಗ್ಯವೆಂಬುದು ಈಶ್ವರಶರೀರವೇ ಮುಂತಾದವು. ಭೋಗೋಪಕರಣಗಳೆಂದರೆ ಚಂದನ, ಕುಸುಮ, ವಸ್ತ್ರ, ಭೂಷಣ, ಆಯುಧ ಮುಂತಾದವು ಗೋಪುರ, ಪುರ, ಪ್ರಾಕಾರ, ಮಂಟಪ, ವಿಮಾನ, ಪದ್ಮಸರೋವರ ಮುಂತಾದವುಭೋಗ ಸ್ಥಾನಗಳು.

೪. ಈಶ್ವರನ ಶರೀರವೂ ನಿತ್ಯರುಗಳ ಶರೀರಗಳೂ ಭಗವಂತನ ನಿತ್ಯೇಚ್ಛೆಯಿಂದ ಸಿದ್ಧವಾದವು. ಮುಕ್ತರುಗಳ ಶರೀರಗಳೂ, ಅವರುಗಳ

ಸಿದ್ಧಾನಿ । ಮುಕ್ತಾನಾಂ ಶರೀರಾಣಿ ತೇಷಾಂ ಪಿತ್ರಾದಿಸೃಷ್ಟಿಃ ಯುಗಪದನೇಕ ಶರೀರಪರಿಗ್ರಹಾ ಇತ್ಯಾದೀನಿ ಭಗವತ್ಸಂಕಲ್ಪಾದೇವ ಭವಂತಿ ।

೫. ಭಗವತೋ ವ್ಯೂಹವಿಭವಾರ್ಚಾವತಾರಶರೀರಾಣ್ಯಪಿ ಅಪ್ರಾಕೃತ ಮಯಾನಿ । ಅರ್ಚಾವತಾರೇಷು ಪ್ರತಿಷ್ಠಾನಂತರಂ ಪ್ರಸಾದೋನ್ಮುಖೇಶ್ವರ ಸಂಕಲ್ಪಾಧೀನಂ ಅಪ್ರಾಕೃತಂ ಶರೀರಂ ಅತ್ರಾವಿರ್ಭವತಿ । ಪ್ರಾಕೃತಾಪ್ರಾಕೃತ ಸಂಸರ್ಗಃ ಕಥಮಿತಿ ನ ಶಂಕನೀಯಂ । ರಾಮಕೃಷ್ಣಾದ್ಯವತಾರಶರೀರವದಿತಿ ಪ್ರಮಾಣಾನುಸಾರೇಣ ಪರಿಹಾರೋ ದ್ರಷ್ಟವ್ಯಃ ।

೬. ಮುಕ್ತಾನಾಂ ಶರೀರಪರಿಗ್ರಹಸ್ತು ವಸಂತೋತ್ಸವವೇಷ ಪರಿಗ್ರಹಾದಿವತ್ ಸ್ವಾಮಿನಃ ಕೈಂಕರ್ಯಮೇವ.

೭. ಈಶ್ವರಶರೀರಸ್ಯ ಷಾಡ್ಗುಣ್ಯಮಿತಿ ವ್ಯವಹಾರಃ ಷಾಡ್ಗುಣ್ಯಪ್ರಕಾಶ

---

ಪಿತ್ರಾದಿಗಳ ಸೃಷ್ಟಿಯೂ, ಏಕಕಾಲದಲ್ಲಿ ಅನೇಕ ಶರೀರಗಳನ್ನವರು ಪರಿಗ್ರಹಿಸು ವಿಕೆಯೂ–ಇವೆಲ್ಲ ಭಗವತ್ಸಂಕಲ್ಪದಿಂದಲೇ ಆಗುತ್ತವೆ.

೫. ವ್ಯೂಹ, ವಿಭವ ಮತ್ತು ಅರ್ಚಾವತಾರಗಳಲ್ಲಿ ಭಗವಂತನು ಸ್ವೀಕರಿಸುವ ಶರೀರಗಳೂ ಅಪ್ರಾಕೃತವಾದವೇ. ಅರ್ಚಾವತಾರಗಳಲ್ಲಿಯಾದರೋ ಪ್ರತಿಷ್ಠೆಯ ನಂತರ ಪ್ರಸಾದೋನ್ಮುಖನಾದ ಈಶ್ವರನ ಸಂಕಲ್ಪಕ್ಕನುಗುಣವಾಗಿ ಅಪ್ರಾಕೃತಶರೀರದ ಆವಿರ್ಭಾವವಾಗುತ್ತದೆ. ಪ್ರಾಕೃತ ಮತ್ತು ಅಪ್ರಾಕೃತಗಳ ಸಂಸರ್ಗ ಹೇಗೆ ತಾನೆ ಆದೀತು ಎಂಬ ಸಂಶಯಕ್ಕಿಲ್ಲಿ ಅವಕಾಶವಿಲ್ಲ. ರಾಮ ಕೃಷ್ಣಾದ್ಯವತಾರಗಳಲ್ಲಿ ಭಗವಂತನ ಶರೀರಗಳು ಹೇಗೋ ಹಾಗೆಯೇ ಇವೂ ಸಹ ಎಂಬ ಪ್ರಮಾಣಕ್ಕನುಸಾರವಾಗಿ ಪರಿಹಾರವನ್ನು ಕಾಣಬೇಕು.

೬. ವಸಂತೋತ್ಸವ ಸಂದರ್ಭದಲ್ಲಿ ಧರಿಸುವ ವೇಷಗಳು ಹೇಗೋ ಹಾಗೆ ಮುಕ್ತರುಗಳ ಶರೀರಪರಿಗ್ರಹವೂ ಭಗವಂತನ ಕೈಂಕರ್ಯಕ್ಕಾಗಿಯೇ ಆಗಿದೆ.

೭. ಈಶ್ವರನ ಶರೀರ ಷಾಡ್ಗುಣ್ಯವನ್ನು ಹೊಂದಿದೆ" ಎಂಬ ವ್ಯವಹಾರ ಬರುವುದಕ್ಕೆ ಕಾರಣ ಆ ಶರೀರ ಆ ಆರು ಗುಣಗಳನ್ನು ಪ್ರಕಾಶಪಡಿಸುವುದೇ

ಕತ್ವಾತ್ । ನಿತ್ಯನಿರವದ್ಯ–ನಿರತಿಶಯೌಜ್ವಲ್ಯ–ಸೌಂದರ್ಯ–ಸೌಗಂಧ್ಯ-ಸೌಕು ಮಾರ್ಯ–ಲಾವಣ್ಯ–ಯೌವನ–ಮಾರ್ದವಾರ್ಜವಾದಯೋ ದಿವ್ಯಮಂಗಲ ವಿಗ್ರಹಗುಣಾಃ । ತಸ್ಯ ವ್ಯಾಪಕತ್ವಂ ಗೀತಾದಿಷು ಪ್ರಸಿದ್ಧಮ್ ।

೮. ಮುಕ್ತಸ್ಯ ಶರೀರಂ ನಾಸ್ತೀತಿ ವಚನಂ ತು ಕರ್ಮಕೃತಶರೀರಾ ಭಾವಪರಮ್ । ತತ್ರತ್ಯೇಂದ್ರಿಯಾಣಾಂ ನಿತ್ಯತ್ವಾತ್ ಅತ ಏವ ಕಾರ್ಯ ಕಾರಣಭಾವಾಭಾವಾತ್ ಪ್ರಾಕೃತವನ್ನ ತತ್ವಾಂತರವ್ಯಪದೇಶಃ ।

೯. ಏತೇನ ತತ್ರ ಶರೀರಾದಿಕಂ ನಾಸ್ತೀತಿ ಮತನಿರಾಸಃ । 'ತಮಸಃ ಪರಸ್ತಾತ್' ಇತ್ಯುಕ್ತ್ಯಾ ಪ್ರಕೃತ್ಯೇಕದೇಶವಾದಿಮತನಿರಾಸಃ । ಅಪ್ರಾಕೃತ

---

ಆಗಿದೆ. ನಿತ್ಯವಾಗಿರುವುದು, ದೋಷದೂರವಾಗಿರುವುದು, ನಿರತಿಶಯವಾದ ಔಜ್ವಲ್ಯ, ಸೌಂದರ್ಯ, ಸೌಗಂಧ್ಯ, ಸೌಕುಮಾರ್ಯ, ಲಾವಣ್ಯ, ಯೌವ್ವನ, ಮಾರ್ದವ, ಆರ್ಜವ ಮೊದಲಾದವು ದಿವ್ಯಮಂಗಳ ವಿಗ್ರಹದ ಗುಣಗಳು. ಆ ದಿವ್ಯಮಂಗಳವಿಗ್ರಹದ ವ್ಯಾಪಕತ್ತ್ವವು ಭಗವದ್ಗೀತೆಯೇ ಮೊದಲಾದುವು ಗಳಲ್ಲಿ ನಿರೂಪಿಸಿರುವುದು ಪ್ರಸಿದ್ಧವಾಗಿದೆ.

೮. 'ಮುಕ್ತನಿಗೆ ಶರೀರವಿಲ್ಲ' ಎಂಬ ವಚನ ಕರ್ಮದ ದೆಸೆಯಿಂದ ಬರುವ ಶರೀರವಿಲ್ಲವೆಂಬುದನ್ನು ಸೂಚಿಸುತ್ತದೆ. ಅಲ್ಲಿನ ಇಂದ್ರಿಯಗಳು ನಿತ್ಯಗಳಾದ ಕಾರಣದಿಂದಲೂ ಆದ್ದರಿಂದಲೇ ಕಾರ್ಯಕಾರಣ ಭಾವವಿಲ್ಲದಿರುವು ದರಿಂದಲೂ ಪ್ರಾಕೃತವಾದ ಇಂದ್ರಿಯಗಳಂತೆ ಆ ಅಪ್ರಾಕೃತೇಂದ್ರಿಯಗಳನ್ನು ಬೇರೆ ತತ್ತ್ವಗಳೆಂದು ನಿರ್ದೇಶಮಾಡಿಲ್ಲ.

೯. ಮುಕ್ತಾವಸ್ಥೆಯಲ್ಲಿ ಶರೀರಾದಿಗಳಿಲ್ಲವೆಂಬ ಮತವನ್ನು ಇದರಿಂದ ನಿರಾಕರಿಸಿದೆ. 'ತಮಸ್ಸಿಗಿಂತ ಆಚೆ'[100] ಎಂಬ ಶ್ರುತಿಯ ಕಾರಣ ನಿತ್ಯವಿಭೂತಿಯು ಪ್ರಕೃತಿಯ ಒಂದು ಭಾಗವೆಂಬ ಮತವೂ ಬಿದ್ದುಹೋಗುತ್ತದೆ. ಅಪ್ರಾಕೃತ ವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವುಗಳಿಗೆ ನಿತ್ಯವಿಭೂತಿಯು ಆಶ್ರಯವಾಗಿರುವ ಕಾರಣ ಪ್ರಾಕೃತವಾದ ಆಕಾಶ ಮುಂತಾದುವುಗಳ ವ್ಯಾವೃತ್ತಿಯು ಸಿದ್ಧವಾಗುತ್ತದೆ. ಈ ನಿತ್ಯ ವಿಭೂತಿಯು ಜ್ಞಾನಾತ್ಮಕವೆಂದು

ಶಬ್ದಸ್ಪರ್ಶರೂಪರಸಗಂಧಾಶ್ರಯತ್ವಾತ್ ಆಕಾಶಾದಿವ್ಯಾವೃತ್ತಿಃ | ಜ್ಞಾನಾತ್ಮಕತ್ವಪ್ರತಿಪಾದನಾತ್ ಜಡತ್ವಮತನಿರಾಸಃ |

೧೦. ಭಗವತೋ ಅಪ್ರಾಕೃತದಿವ್ಯಮಂಗಳವಿಗ್ರಹಸ್ಯ ಅಸ್ತ್ರಭೂಷಣಾಧ್ಯಾಯೋಕ್ತ ಸರ್ವೋಽಪಾಶ್ರಯಃ | ತದ್ಯಥಾ—ಪುರುಷಸ್ಯ ಕೌಸ್ತುಭಾಕಾರತ್ವಂ, ಪ್ರಕೃತೇಃ ಶ್ರೀವತ್ಸರೂಪತ್ವಂ, ಮಹತೋ ಗದಾರೂಪತ್ವಂ, ಸಾತ್ವಿಕಾಹಂಕಾರಸ್ಯ ಶಂಖರೂಪತ್ವಂ, ತಾಮಸಾಹಂಕಾರಸ್ಯ ಶಾರ್ಙ್ಗರೂಪತ್ವಂ, ಜ್ಞಾನಸ್ಯ ಖಡ್ಗರೂಪತ್ವಂ, ಅಜ್ಞಾನಸ್ಯ ತದಾವರಕರೂಪತ್ವಂ, ಮನಸಶ್ಚಕ್ರರೂಪತ್ವಂ, ಕರ್ಮಜ್ಞಾನೇಂದ್ರಿಯಾಣಾಂ ಶರರೂಪತ್ವಂ, ಸೂಕ್ಷ್ಮಸ್ಥೂಲಭೂತಾನಾಂ ವನಮಾಲಾಕಾರತ್ವಮ್ |

ಚೇತಶ್ಚಕ್ರಂ ಚೇತನಾಸಿರಮತಿಸ್ತತ್ಸಂವೃತಿರ್ಮಾಲಿಕಾ
ಭೂತಾನಿ ಸ್ವಗುಣೈರಹಂಕೃತಿಯುಗಂ ಶಂಖೇನ ಶಾರ್ಙ್ಗಾಯತೇ |
ಬಾಣಾಃ ಖಾನಿ ದಶಾಪಿ ಕೌಸ್ತುಭಮಣಿರ್ಜೀವಃ ಪ್ರಧಾನಂ ಪುನಃ

---

ಪ್ರತಿಪಾದನೆ ಮಾಡಿರುವ ಕಾರಣ ಅದು ಜಡವೆಂಬ ಮತವೂ ನಿರಸ್ತವಾಯಿತು.

೧೦. ಭಗವಂತನ ಅಪ್ರಾಕೃತವಾದ ದಿವ್ಯಮಂಗಳ ವಿಗ್ರಹವಾದರೋ ಅಸ್ತ್ರಭೂಷಣಾಧ್ಯಾಯದಲ್ಲಿ[101] ಹೇಳಿರುವುದಕ್ಕೆಲ್ಲಾ ಆಶ್ರಯವಾಗಿದೆ. ಪುರುಷನು ಕೌಸ್ತುಭರತ್ನದ ರೂಪದಲ್ಲಿದ್ದಾನೆ. ಪ್ರಕೃತಿಯು ಶ್ರೀವತ್ಸವಾಗಿದೆ: ತಾಮಸಾಹಂಕಾರವು ಶಾರ್ಙ್ಗವಾಗಿದೆ. ಜ್ಞಾನವು ಖಡ್ಗ ; ಅಜ್ಞಾನವು ಅದರ ಒರೆ ; ಮನಸ್ಸು ಚಕ್ರವಾಗಿದೆ ; ಕರ್ಮೇಂದ್ರಿಯಗಳೇ ಬಾಣಗಳು ; ಸೂಕ್ಷ್ಮವಾದ ಮತ್ತು ಸ್ಥೂಲವಾದ ಭೂತಗಳು ವನಮಾಲೆ. ಇದನ್ನೆಲ್ಲ ಸಂಗ್ರಹಿಸಿ ನಿರೂಪಿಸಿರುವ ಕೆಳಗಿನ ಪದ್ಯವನ್ನು ಅನುಸಂಧಾನ ಮಾಡಬೇಕು.

ಎಲೈ ಕಮಲಾಪತಿಯೇ, ವಿದ್ವಾಂಸರಾದವರು ನಿನ್ನ ಚಕ್ರವನ್ನು ಮನಸ್ಸೆಂದೂ, ಖಡ್ಗವನ್ನು ಜ್ಞಾನವೆಂದೂ, ಅದರ ಒರೆಯನ್ನು ಅಜ್ಞಾನವೆಂದೂ, ನಿನ್ನ ವನಮಾಲೆಯನ್ನು ಭೂತಗಳೆಂದೂ' ಗುಣಗಳಿಂದಾದ

ಶ್ರೀವತ್ಸಃ ಕಮಲಾಯತೇ ತವಗದಾಮಾಹುರ್ಮಹಾಂತಂ ಬುಧಾಃ ||
ಇತಿ ಸಂಗೃಹ್ಯೋಕ್ತಂ ಪದ್ಯಮನುಸಂಧೇಯಮ್ ।

೧೧. ಸಾ ವಿಭೂತಿಃ ಆಮೋದ–ಪ್ರಮೋದ–ಸಂಮೋದ–ವೈಕುಂಠಾಖ್ಯ ರೂಪೇಣ ಚತುರ್ವಿಧಾ ಪುನರನಂತಾ–ತ್ರಿಪಾದ್ವಿಭೂತಿ–ಪರಮಪದ–ಪರಮವ್ಯೋಮ– ಪರಮಾಕಾಶ–ಅಮೃತ–ನಾಕ–ಅಪ್ರಾಕೃತಲೋಕ–ಆನಂದಲೋಕ–ವೈಕುಂಠ–ಅಯೋಧ್ಯಾದಿ ಶಬ್ದ ವಾಚ್ಯಾ ಚ । ಏತಸ್ಯಾಂ ವಿಭೂತೌ ದ್ವಾದಶಾವರಣೋಪೇತಂ ಅನೇಕಗೋಪುರಪ್ರಾಕಾರೈರಾವೃತಂ ವೈಕುಂಠಂ ನಾಮ ನಗರಮ್ । ತತ್ರ ಆನಂದನಾಮಕೋ ದಿವ್ಯಾಲಯಃ । ತದಂತಃ ರತ್ನಮಯಾನೇಕ ಸ್ತಂಭ ಸಹಸ್ರೈರ್ವಿರಚಿತಾ ಮಹಾಮಣಿಮಂಡಪಾಖ್ಯಾ ಸಭಾ । ತಸ್ಯಾಂ ಸಹಸ್ರಫಣಾಮಣಿತೇಜೋವಿರಾಜಿತಃ ಅನಂತಃ । ತಸ್ಮಿನ್ ಧರ್ಮಾದಿಮಯ ದಿವ್ಯಸಿಂಹಾಸನಮ್ । ತದುಪರಿ ಚಾಮರಹಸ್ತಾಭಿಃ ವಿಮಲಾದಿಭಿಃ ಸೇವಿತಂ

---

ಎರಡು ರೂಪಗಳೇ ನಿನ್ನ ಶಂಖ ಮತ್ತು ಶಾರ್ಙ್ಗಗಳೆಂದೂ, ನಿನ್ನ ಬಾಣಗಳೇ ಹತ್ತು ಇಂದ್ರಿಯಗಳೆಂದೂ, ಕೌಸ್ತುಭ ರತ್ನವೇ ಜೀವಾತ್ಮನೆಂದೂ, ಶ್ರೀವತ್ಸವೆಂಬ ಮಚ್ಚೆಯೇ ಪ್ರಕೃತಿಯೆಂದೂ, ಗದೆಯೇ ಮಹತ್ತತ್ತ್ವವೆಂದು ನಿರೂಪಿಸುತ್ತಾರೆ.

೧೧. ಈ ನಿತ್ಯ ವಿಭೂತಿಯು ಆಮೋದ, ಪ್ರಮೋದ, ಸಮ್ಮೋದ ಮತ್ತು ವೈಕುಂಠ ಎಂಬುದಾಗಿ ನಾಲ್ಕು ವಿಧವಾಗಿದೆ ; ಮತ್ತೆ ಅನಂತವಾಗಿಯೂ ಇದೆ. ತ್ರಿಪಾದ್ವಿಭೂತಿ, ಪರಮಪದ, ಪರಮವ್ಯೋಮ, ಪರಮಾಕಾಶ, ಅಮೃತ, ನಾಕ, ಅಪ್ರಾಕೃತಲೋಕ, ಆನಂದಲೋಕ, ವೈಕುಂಠ, ಅಯೋಧ್ಯಾ ಮುಂತಾದ ಹೆಸರುಗಳಿಂದ ಇದು ಕರೆಯಲ್ಪಡುತ್ತದೆ. ಈ ನಿತ್ಯವಿಭೂತಿಯಲ್ಲಿ ಹನ್ನೆರಡು ಆವರಣಗಳಿಂದೊಡಗೂಡಿರುವುದೂ ಅನೇಕಾನೇಕ ಗೋಪುರ ಪ್ರಾಕಾರಗಳಿಂದ ಸುತ್ತುವರಿಯಲ್ಪಟ್ಟಿರುವುದೂ ಆದ ವೈಕುಂಠವೆಂಬ ಪಟ್ಟಣವಿದೆ. ಅಲ್ಲಿ ಆನಂದವೆಂಬ ಹೆಸರಿನ ದಿವ್ಯವಾದ ಆಲಯವಿದೆ. ಅದರೊಳಗೆ ರತ್ನಮಯವಾದ ಅನೇಕಾನೇಕ ಸಹಸ್ರ ಸ್ತಂಭಗಳಿಂದ ನಿರ್ಮಿಸಲ್ಪಟ್ಟ 'ಮಹಾಮಣಿಮಂಟಪ' ಎಂಬ ಸಭೆ ಇದೆ. ಆ ಸಭಾಭವನದಲ್ಲಿ ಸಹಸ್ರಾರು

ಅಷ್ಟದಲಾತ್ಮಕಂ ಪದ್ಮಮ್ | ತದುಪರಿ ಪ್ರಕೃಷ್ಟವಿಜ್ಞಾನಧಾಮಾ ಶೇಷಃ | ತದುಪರಿಃ ವಾಚಃ ಪರಮದ್ಭುತಮ್ | ಏವಂ ನಿತ್ಯವಿಭೂತಿಃ ನಿರೂಪಿತಾ |

ಇತಿ ಶ್ರೀ ವಾಧೂಲಕುಲತಿಲಕ ಶ್ರೀಮನ್ಮಹಾಚಾರ್ಯಸ್ಯ ಪ್ರಥಮದಾಸೇನ ಶ್ರೀನಿವಾಸದಾಸೇನ ವಿರಚಿತಾಯಾಂ ಯತೀಂದ್ರಮತದೀಪಿಕಾಯಾಂ ನಿತ್ಯವಿಭೂತಿನಿರೂಪಣಂ ನಾಮ ಷಷ್ಠೋಽವತಾರಃ

---

ಹೆಡೆಗಳ ರತ್ನಕಾಂತಿಯಿಂದ ಬೆಳಗುವ ಅನಂತನಿದ್ದಾನೆ. ಅವನ ಮೇಲೆ ಧರ್ಮವೇ ಮೊದಲಾದವುಗಳಿಂದಾದ[102] ದಿವ್ಯಸಿಂಹಾಸನವಿದೆ. ಅದರ ಮೇಲೆ ಚಾಮರಹಸ್ತೆಯರಾದ ವಿಮಲಾ ಮುಂತಾದವರಿಂದ ಸೇವಿಸಲ್ಪಟ್ಟ ಅಷ್ಟದಳ ಕಮಲವಿದೆ. ಅದರ ಮೇಲೆ ಪ್ರಕೃಷ್ಟವಾದ ಜ್ಞಾನದ ನಿಧಿಯಾದ ಶೇಷನಿದ್ದಾನೆ. ಆ ಶೇಷನ ಮೇಲೆ ವಾಕ್ಕಿಗೆ ಮೀರಿದ ಅದ್ಭುತನಿದ್ದಾನೆ. ಹೀಗೆ ನಿತ್ಯ ವಿಭೂತಿಯ ವಿವರಣೆ ಇದೆ.

ಇಂತು ವಾಧೂಲಕುಲತಿಲಕನೂ ಮಹಾಚಾರ್ಯರ ಪ್ರಥಮದಾಸನೂ ಆದ ಶ್ರೀನಿವಾಸದಾಸನಿಂದ ವಿರಚಿತವಾದ ಯತೀಂದ್ರಮತದೀಪಿಕೆಯಲ್ಲಿ ನಿತ್ಯವಿಭೂತಿ ನಿರೂಪಣೆ ಎಂಬ ಆರನೆಯ ಅವತಾರ ಮುಗಿದುದು.

## ಸಪ್ತಮೋಽವತಾರಃ

# ಧರ್ಮಭೂತಜ್ಞಾನಮ್

೧. ಅಥ ಕ್ರಮಪ್ರಾಪ್ತಂ ಧರ್ಮಭೂತಜ್ಞಾನಂ ನಿರೂಪ್ಯತೇ| ಸ್ವಯಂ ಪ್ರಕಾಶಾಚೇತನದ್ರವ್ಯತ್ವೇ ಸತಿ ವಿಷಯಿತ್ವಂ ವಿಭುತ್ವೇ ಸತಿ ಪ್ರಭಾವದ್ದ್ರವ್ಯ ಗುಣಾತ್ಮಕತ್ವಂ, ಅರ್ಥಪ್ರಕಾಶೋ ಬುದ್ಧಿಃ | ಇತಿ ತಲ್ಲಕ್ಷಣಮ್ |

೨. ತದ್ಧರ್ಮಭೂತಜ್ಞಾನಂ ಈಶ್ವರಸ್ಯ ನಿತ್ಯಾನಾಂ ಚ ಸರ್ವದಾ ನಿತ್ಯಮೇವ ವಿಭು ಚ | ಬದ್ಧಾನಾಂ ತಿರೋಹಿತಮೇವ | ಮುಕ್ತಾನಾಂ ಪೂರ್ವಂ ತಿರೋಹಿತಂ ಅನಂತರಂ ಆವಿರ್ಭೂತಮ್ |

೩. ಜ್ಞಾನಸ್ಯ ನಿತ್ಯತ್ವೇ 'ಜ್ಞಾನಮುತ್ಪನ್ನಂ ಜ್ಞಾನಂ ನಷ್ಟಂ' ಇತಿ

---

## ಏಳನೆಯ ಅವತಾರ

# ಧರ್ಮ ಭೂತ ಜ್ಞಾನ

೧. ಈಗ ಕ್ರಮಪ್ರಾಪ್ತವಾದ ಧರ್ಮಭೂತಜ್ಞಾನದ ವಿವರಣೆಯನ್ನು ಮಾಡುತ್ತೇನೆ. ಸ್ವಯಂ ಪ್ರಕಾಶವುಳ್ಳ ಅಚೇತನ ದ್ರವ್ಯವಾಗಿದ್ದು[103] ವಿಷಯ ಗಳನ್ನು ತಿಳಿಯಪಡಿಸುವುದು ಧರ್ಮಭೂತಜ್ಞಾನ. ಪ್ರಭೆಯಂತೆ ದ್ರವ್ಯವೂ ಆಗಿ ಗುಣವೂ ಆಗಿ[104] ವಿಭುವಾಗಿರುವುದು (ಸರ್ವಮೂರ್ತದ್ರವ್ಯ ಸಂಯೋಗತ್ವವುಳ್ಳದು) ಧರ್ಮಭೂತಜ್ಞಾನ. ಪದಾರ್ಥಗಳನ್ನು ಪ್ರಕಾಶ ಪಡಿಸುವುದು ಧರ್ಮಭೂತ ಜ್ಞಾನ. ಇವು ಇದರ ಲಕ್ಷಣಗಳು.

೨. ಈಶ್ವರನ ಮತ್ತು ನಿತ್ಯರುಗಳ ಧರ್ಮಭೂತಜ್ಞಾನವು ಯಾವಾ ಗಲೂ ನಿತ್ಯವಾಗಿ ವಿಭುವಾಗಿರುತ್ತದೆ. ಬದ್ಧಾತ್ಮರ ಧರ್ಮಭೂತಜ್ಞಾನವು (ಮರೆಸಲ್ಪಟ್ಟಿದೆ) ಸಂಕೋಚ ಹೊಂದಿದೆ. ಮುಕ್ತಾತ್ಮರ ಧರ್ಮಭೂತ ಜ್ಞಾನವು ಮೊದಲು ಮರೆಸಲ್ಪಟ್ಟಿದ್ದು ಅನಂತರ ತನ್ನ ನಿಜಸ್ವರೂಪವನ್ನು ಪಡೆದಿದೆ.

೩. ಜ್ಞಾನವು ನಿತ್ಯವೇ ಆದ ಪಕ್ಷದಲ್ಲಿ 'ಜ್ಞಾನ ಉಂಟಾಯಿತು, ಜ್ಞಾನವು ಹೋಯಿತು' ಮುಂತಾದ ವ್ಯವಹಾರಗಳು ಹೇಗೆ ಸರಿಯಾದಾವು

ವ್ಯವಹಾರಃ ಕಥಂ' ಇತಿ ಚೇತ್, ನ | ಜ್ಞಾನಸ್ಯ ಸಂಕೋಚವಿಕಾಸಾವಸ್ಥಾಮಾದಾಯ ತತ್ಸಂಭವಾತ್ | ದೃತೇಃ ಪಾತ್ರಾದ್ಯಥಾ ಉದಕಂ ಕ್ಷರತಿ ತಥಾ ಜ್ಞಾನಮಪಿ ಇಂದ್ರಿಯದ್ವಾರಾ ನಿಃಸೃತ್ಯ ಅರ್ಥೇನ ಸನ್ನಿಕೃಷ್ಯತೇ | ಅಹಿಕುಂಡಲವತ್ ಸಂಕೋಚವಿಕಾಸೌ |

೪. ಸರ್ವಂ ಜ್ಞಾನಂ ಸ್ವತ ಏವ ಪ್ರಮಾಣಂ ಸ್ವಯಂಪ್ರಕಾಶಂ ಚ | 'ವಿಪ್ರತಿಪನ್ನಾ ಸಂವಿತ್ ಸ್ವಗತವ್ಯವಹಾರಂ ಪ್ರತಿ ಸ್ವಾಧೀನಕಿಂಚಿತ್ಕರಾ, ಸ್ವಜಾತೀಯ ಸಂಬಂಧಾನಪೇಕ್ಷವ್ಯವಹಾರಹೇತುತ್ವಾತ್ ಅರ್ಥೇಂದ್ರಿಯದೀಪವತ್'| ನ ಚ ಚಕ್ಷುರಾಲೋಕಯೋಃ ಸಜಾತೀಯತ್ವಂ ಆಹಂಕಾರಿಕತೈಜಸಭೇದಾದ್ಭೇದಃ|

---

ಎಂದು ಕೇಳಿದರೆ ಇಲ್ಲಿ ಯಾವ ವಿರೋಧವೂ ಇಲ್ಲವೆಂದು ಹೇಳುತ್ತೇವೆ. ಏಕೆಂದರೆ ಜ್ಞಾನದ ಸಂಕೋಚಾವಸ್ಥೆ ಮತ್ತು ವಿಕಾಸಾವಸ್ಥೆಯ ದೃಷ್ಟಿಯಿಂದ ಜ್ಞಾನದ ಉತ್ಪತ್ತಿವಿನಾಶಗಳುಸಂಭವಿಸುತ್ತವೆ[105]. ಚರ್ಮದ ಚೀಲದ ರಂಧ್ರದ ಮೂಲಕ ನೀರು ಸ್ರವಿಸುವಂತೆ ಜ್ಞಾನವೂ ಕೂಡ ಇಂದ್ರಿಯಗಳ ಮುಖಾಂತರ ಹರಿದು ಪದಾರ್ಥಗಳೊಡನೆ ಸಂಪರ್ಕ ಹೊಂದುತ್ತದೆ. ಜ್ಞಾನದ ಸಂಕೋಚವಿಕಾಸಗಳು ಸುತ್ತಿಕೊಂಡ (ಮತ್ತು ಹರಡಿಕೊಂಡ) ಸರ್ಪದ ಸುರುಳಿಗಳಂತೆ.

೪. ಎಲ್ಲಾ ಜ್ಞಾನವೂ ಸ್ವತಃ ಪ್ರಮಾಣ ಮತ್ತು ಸ್ವಯಂಪ್ರಕಾಶ. (ಅದರ ಸ್ವಯಂ ಪ್ರಕಾಶತೆಯನ್ನು ಅನುಮಾನದಿಂದ ಕೆಳಕಂಡಂತೆ ಸಾಧಿಸಬಹುದು.) ವಿವಾದಾಸ್ಪದವಾದ ಜ್ಞಾನವು ತನ್ನನ್ನು ಕುರಿತ ವ್ಯವಹಾರದಲ್ಲಿ ಪರಾಧೀನವಿಲ್ಲದೆಯೇ (ಸ್ವಾಧೀನವಾಗಿಯೇ) ಪ್ರವರ್ತಿಸುತ್ತದೆ, ಅದು ಸ್ವಜಾತೀಯವಾದುದರ ಸಂಬಂಧವನ್ನು ಅಪೇಕ್ಷಿಸದೆಯೇ ವ್ಯವಹಾರಕ್ಕೆ ಕಾರಣವಾಗುವುದರಿಂದ, ಪದಾರ್ಥ, ದೀಪ, ಇಂದ್ರಿಯ ಮುಂತಾದವುಗಳಂತೆಯೇ. ಚಕ್ಷುರಿಂದ್ರಿಯಕ್ಕೂ ಬೆಳಕಿಗೂ ಸಜಾತೀಯತ್ವವಿಲ್ಲ ; ಚಕ್ಷುರಿಂದ್ರಿಯ ಅಹಂಕಾರ ತತ್ತ್ವದಿಂದ ಹುಟ್ಟಿರುವುದರಿಂದಲೂ ಮತ್ತೊಂದಾದ ಬೆಳಕು ತೇಜಸ್ತತ್ತ್ವದಿಂದ ಹುಟ್ಟಿರುವುದರಿಂದಲೂ ಇವುಗಳಿಗೆ ಭೇದವಿದೆ.

೫. ಅನೇನ ಜ್ಞಾನಸ್ಯ ಕ್ಷಣಿಕತ್ವಂ, ತ್ರಿಕ್ಷಣಾವಸ್ಥಾಯಿತ್ವಂ ಪ್ರಾತಿಭಾಸಿಕವತ್ ವ್ಯಾವಹಾರಿಕಸ್ಯಾಪಿ ಮಿಥ್ಯಾತ್ವಂ, ಪರತಃ ಪ್ರಾಮಾಣ್ಯಂ, ಜ್ಞಾನಸ್ಯೈವ ಆತ್ಮತ್ವಂ ಇತ್ಯಾದಿ ಪಕ್ಷಾಃ ನಿರಸ್ತಾಃ ।

೬. 'ಸ್ತಂಭಃ ಸ್ತಂಭಃ' ಇತ್ಯಾದಿ ಧಾರಾವಾಹಿಕಜ್ಞಾನಂ ತು ಏಕಮೇವ.

೭. ನನು ಆಗಮಬಲಾತ್ ಜ್ಞಾನಸ್ಯ ನಿತ್ಯತ್ವಾಂಗೀಕಾರೇ ಕಥಂ ಜಾಗರಸುಷುಪ್ತ್ಯಾದಿಭೇದಸಿದ್ಧಿಃ ಇತಿ ಚೇತ್‌ನ । ಯಥಾದಾಹಕಸ್ಯ ವಹ್ನೇಃ ದಾಹ್ಯಸನ್ನಿಧೌ ಮಣ್ಯಾದಿಪ್ರತಿಬಂಧಕೇ ದಾಹಾಭಾವಃ ತದ್ವತ್ ಜ್ಞಾನಸ್ಯ ತಿರೋಧಾಯಕ–ತಮೋವಿಶೇಷ–ಸನ್ನಿಧಾನ–ಅಸನ್ನಿಧಾನಾಭ್ಯಾಂ ಸ್ವಾಪಾದಿಸಿದ್ಧಿಃ । ಪುಂಸ್ತ್ವಾದಿವಚ್ಚ। ಪುಂಸ್ತ್ವಾದಿಕಂ ಬಾಲ್ಯೇ ತಿರೋಹಿತಂ ಯೌವನೇ ಆವಿರ್ಭವತಿ।

---

೫. ಜ್ಞಾನವು ಕ್ಷಣಿಕವೆಂಬವಾದ, ಮೂರುಕ್ಷಣಗಳ ಕಾಲ ಮಾತ್ರ ಇರುವುದೆಂಬ ವಾದ, ಪ್ರಾತಿಭಾಸಿಕದಲ್ಲಿ ಹೇಗೋ .ಹಾಗೆ ವ್ಯವಹಾರದಲ್ಲಿಯೂ ಅದು ಮಿಥ್ಯೆ ಎಂಬ ವಾದ, ಜ್ಞಾನ ಪರತ : ಪ್ರಮಾಣ ಎಂಬ ವಾದ, ಜ್ಞಾನವೇ ಆತ್ಮ ಎಂಬ ವಾದ–ಇವೇ ಮೊದಲಾದ ವಾದಗಳು ಮೇಲಿನ ನಿರೂಪಣೆಯಿಂದ ನಿರಾಕರಿಸಲ್ಪಟ್ಟಿವೆ.

೬. 'ಸ್ತಂಭ' 'ಸ್ತಂಭ' ಎಂಬ ಧಾರಾವಾಹಿಕಜ್ಞಾನವೂ ಒಂದೇ ಆದುದು. [106]

೭ ಆಗಮಪ್ರಮಾಣವನ್ನನುಸರಿಸಿ ಜ್ಞಾನಕ್ಕೆ ನಿತ್ಯತ್ವವನ್ನಂಗೀಕರಿಸಿದರೆ ಜಾಗ್ರತ ಮತ್ತು ಸುಷುಪ್ತಿ ಮುಂತಾದ ಅವಸ್ಥಾ ಭೇದಗಳು ಹೇಗೆ ಸಂಭವಿಸುವುವೆಂದು ಆಕ್ಷೇಪಮಾಡಿದರೆ ಅದಕ್ಕೆ ಯಾವ ಬಾಧಕವೂ ಇಲ್ಲವೆಂದೇ ಹೇಳುತ್ತೇವೆ. ಯಾವುದನ್ನಾದರೂ ದಹಿಸತಕ್ಕ ಬೆಂಕಿ ತಾನು ದಹಿಸುವ ಪದಾರ್ಥದ ಹತ್ತಿರವೇ ಇದ್ದರೂ ಪ್ರತಿಬಂಧಕ ಮಣಿಯಿದ್ದಾಗ ಹೇಗೆ ದಾಹಕಾರ್ಯವನ್ನು ಮಾಡುವುದಿಲ್ಲವೋ ಹಾಗೆಯೇ ಜ್ಞಾನವನ್ನು ಮರೆಮಾಡತಕ್ಕ ತಮೋವಿಶೇಷದ ಇರುವಿಕೆ ಅಥವಾ ಇಲ್ಲದಿರುವಿಕೆಗಳಿಗನುಗುಣವಾಗಿ ಸ್ವಪ್ನ ಮೊದಲಾದವು ಸಿದ್ಧಿಸುತ್ತವೆ. ಇದೂ ಪುಂಸ್ತ್ವ ಮೊದಲಾದವುಗಳಂತೆಯೇ.

೮. 'ಯೋ ಯದಾಶ್ರಿತಸ್ಸ್ವಭಾವಃ ಸ ತಸ್ಯ ಗುಣಃ ವಿಶೇಷಣಾದಿವತ್' ಇತಿ ಲಕ್ಷಣಲಕ್ಷಿತತ್ವಾತ್ ಜ್ಞಾನಂ ಗುಣಃ |

೯. ಯತಃ ಸಂಕೋಚವಿಕಾಸಾವಸ್ಥಾವತ್, ಅತೋ ದ್ರವ್ಯಮಪಿ ಭವತಿ | ಆತ್ಮಗುಣಭೂತಸ್ಯ ಜ್ಞಾನಸ್ಯ ದ್ರವ್ಯತ್ವಂ ಕಥಮಿತಿ ನ ಶಂಕನೀಯಂ | ಪ್ರಭಾವತ್ ಏಕಸ್ಯೈವ ದ್ರವ್ಯತ್ವಗುಣತ್ವಯೋಃ ವಿರೋಧಾಭಾವಾತ್ | ಅವಸ್ಥಾಶ್ರಯೋ ದ್ರವ್ಯಮಿತಿ ದ್ರವ್ಯಲಕ್ಷಣಂ | ಸ್ವಾಶ್ರಯಾದನ್ಯತ್ರ ವರ್ತಮಾನತ್ವಮಪಿ ಪ್ರಭಾವತ್ ಏವೋಪಪದ್ಯತೇ | ಪ್ರಯೋಗಶ್ಚ–'ಗುಣಭೂತಾ ಬುದ್ಧಿರ್ದ್ರವ್ಯಂ ಪ್ರಸರಣಾದಿಮತ್ವಾತ್, ಪ್ರಭಾವತ್' | 'ಜ್ಞಾನಂ ದ್ರವ್ಯಂ ಸಂಯೋಗಾದೃಷ್ಟಾನ್ಯತ್ವೇ ಸತಿ ಭಾವನಾಕಾರಣತ್ವಾತ್ ಆತ್ಮವತ್' ಇತಿ |

---

ಬಾಲ್ಯದಲ್ಲಿ ಮರೆಮಾಡಲ್ಪಟ್ಟ ಪುಂಸ್ತ್ವ ಮೊದಲಾದವು ಯೌವ್ವನದಲ್ಲಿ ಆವಿರ್ಭವವಾಗುತ್ತವೆ.

೮. ಯಾವುದು ಮತ್ತೊಂದು ಪದಾರ್ಥವನ್ನು ಆಶ್ರಯಿಸುವ ಸ್ವಭಾವವುಳ್ಳದೋ ಅದು ಆ (ಯಾವ ಪದಾರ್ಥವನ್ನಾಶ್ರಯಿಸಿರುವುದೋ) ಅದರ ಗುಣವಿಶೇಷಣ ಮೊದಲಾದವುಗಳಂತೆ ಎಂಬ ಲಕ್ಷಣಕ್ಕೆ ವಿಷಯವಾಗುವುದರಿಂದ ಜ್ಞಾನವೂ ಒಂದು ಗುಣ.

೯. ಜ್ಞಾನವು ಸಂಕೋಚ ಮತ್ತು ವಿಕಾಸಗಳೆಂಬ ಅವಸ್ಥೆಗಳನ್ನೊಳಗೊಂಡಿರುವುದರಿಂದ ದ್ರವ್ಯವೂ ಆಗುತ್ತದೆ. ಆತ್ಮಕ್ಕೆ ಗುಣವಾಗಿರುವ ಜ್ಞಾನವು ಹೇಗೆ ದ್ರವ್ಯವಾಗುತ್ತದೆ ಎಂದು ಸಂದೇಹಪಡಬೇಕಾಗಿಲ್ಲ. ಪ್ರಭೆಯು ಹೇಗೋ ಹಾಗೆ ಒಂದೇ ಪದಾರ್ಥ ಏಕಕಾಲದಲ್ಲಿ ದ್ರವ್ಯವೂ ಆಗಿ ಗುಣವೂ ಆಗಿರುವುದರಲ್ಲಿ ವಿರೋಧವಿರುವುದಿಲ್ಲ. ಬೇರೆ ಬೇರೆ ಅವಸ್ಥೆಗಳಿಗೆ ಆಶ್ರಯವಾಗಿರುವುದು ದ್ರವ್ಯ ಎಂಬುದು ದ್ರವ್ಯದ ಲಕ್ಷಣ. ಪ್ರಭೆಯ ಹಾಗೆ ಇದೂಸಹ ತನ್ನ ಆಶ್ರಯಕ್ಕಿಂತ ಬೇರೆಕಡೆ ಇರುವುದೂ ಉಪಪನ್ನವಾಗುತ್ತದೆ. ಇದಕ್ಕೆ ಕೆಳಕಂಡಂತೆ ಅನುಮಾನ ಪ್ರಯೋಗಗಳುಂಟು.

೧೦. ಮುಕ್ತಜ್ಞಾನಸ್ಯ ಯುಗಪತ್ ಅನಂತ ದೇಹಸಂಯೋಗೋ ನಯನಸೂರ್ಯಾದಿತೇಜೋವತ್ ಸಂಭವತಿ ।

೧೧. ಜ್ಞಾನಂ ಮತಿಃ ಪ್ರಜ್ಞಾ ಸಂವಿತ್ ಧಿಷಣಾ ಧೀಃ ಮನೀಷಾ ಶೇಮುಷೀ ಮೇಧಾ ಬುದ್ಧಿರಿತ್ಯೇವಮಾದಯಃ ಶಬ್ದಾಃ ಜ್ಞಾನಪರ್ಯಾಯಾಃ । ಬುದ್ಧಿರೇವ ಉಪಾಧಿಭೇದಾತ್ ಸುಖದುಃಖೇಚ್ಛಾದ್ವೇಷಪ್ರಯತ್ನರೂಪಾ । ಸುಖಾದಿಜನಕ ಜ್ಞಾನಾತಿರೇಕೇ ಪ್ರಮಾಣಾಭಾವಾತ್ । 'ಇಚ್ಛಾಮಿ ದ್ವೇಷ್ಮಿ' ಇತಿ ವ್ಯವಹಾರಸ್ಯ 'ಸ್ಮರಾಮಿ' ಇತ್ಯಾದಿವತ್ ಜ್ಞಾನವಿಶೇಷೇಣೈವೋಪಪತ್ತೇಃ.

---

(೧) ಪ್ರಭೆಯಹಾಗೆ ಪ್ರಸರಣವೇ ಮೊದಲಾದ ಗುಣಗಳನ್ನು ಹೊಂದಿರುವುದರಿಂದ ಗುಣಭೂತವಾದ ಜ್ಞಾನವು ದ್ರವ್ಯವಾಗಿದೆ.

(೨) ಸಂಯೋಗ ಮತ್ತು ಅದೃಷ್ಟಗಳಿಗಿಂತ ಬೇರೆಯಾಗಿ ಭಾವನೆಗೆ ಕಾರಣವಾಗಿರುವುದರಿಂದ ಆತ್ಮದಂತೆ ಜ್ಞಾನವು ದ್ರವ್ಯವಾಗಿದೆ.

೧೦. ಕಣ್ಣು, ಸೂರ್ಯ ಮುಂತಾದವುಗಳಿಂದ ಹೊರಡುವ ಕಿರಣಗಳೋಪಾದಿಯಲ್ಲಿ ಮುಕ್ತಾತ್ಮರ ಜ್ಞಾನವು ಏಕಕಾಲದಲ್ಲಿ ಅನಂತದೇಹಗಳೊಡನೆ ಸಂಯೋಗವನ್ನು ಹೊಂದಬಲ್ಲದು.

೧೧. ಜ್ಞಾನ, ಮತಿ, ಪ್ರಜ್ಞೆ, ಸಂವಿತ್, ಧಿಷಣಾ, ಧೀಃ, ಮನೀಷಾ, ಶೇಮುಷೀ, ಮೇಧಾ, ಬುದ್ಧಿಃ ಇವೇ ಮೊದಲಾದ ಪದಗಳು ಜ್ಞಾನವನ್ನು ಹೇಳುವ ಪರ್ಯಾಯಶಬ್ದಗಳು. ಉಪಾಧಿಗಳ ಭೇದದ ಕಾರಣ ಜ್ಞಾನವೇ ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ–ಇವುಗಳ ರೂಪವನ್ನು ಹೊಂದುತ್ತದೆ. ಜ್ಞಾನಕ್ಕಿಂತ ಬೇರೆಯಾದುದೊಂದು ಸುಖವೇ ಮೊದಲಾದವುಗಳನ್ನುಂಟು ಮಾಡುವುದೆಂದು ಹೇಳಲು ಪ್ರಮಾಣವಾವುದೂ ಇಲ್ಲ. 'ನಾನು ಇಚ್ಛಿಸುತ್ತೇನೆ', 'ದ್ವೇಷಿಸುತ್ತೇನೆ' ಮೊದಲಾದ ವ್ಯವಹಾರವೂ 'ಸ್ಮರಿಸುತ್ತೇನೆ' ಎಂಬುದರ ಹಾಗೆ ಜ್ಞಾನ ವಿಶೇಷವೇ ಆಗಿ ಉಪಪನ್ನವಾಗುತ್ತದೆ.

೧೨. ನನು 'ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಶ್ರದ್ಧಾ ಧೃತಿರಧೃತಿಃ ಹ್ರೀಃ ಧೀಃ ಭೀಃ ಇತ್ಯೇತತ್ ಸರ್ವಂ ಮನ ಏವ' ಇತ್ಯುಕ್ತಾನಾಂ ಜ್ಞಾನರೂಪತ್ವಂ ಕಥಂ ಇತಿ ಚೇತ್ ನ। ಜ್ಞಾನಸ್ಯ ಮನಸ್ಸಹಕಾರಿತ್ವನಿಯಮಾತ್ ಮನ ಏವೇತ್ಯುಪಚಾರಾದುಕ್ತಮಿತಿ ನ ವಿರೋಧಃ।

೧೩. ಏವಂ ಪ್ರತ್ಯಕ್ಷಾನುಮಾನ–ಆಗಮಸ್ಮೃತಿಸಂಶಯ ವಿಪರ್ಯಯ ಭ್ರಮವಿವೇಕ ವ್ಯವಸಾಯ–ಮೋಹರಾಗದ್ವೇಷಮದ ಮಾತ್ಸರ್ಯ ಧೈರ್ಯ ಚಾಪಲ್ಯದಂಭ ಲೋಭಕ್ರೋಧ ದರ್ಪಸ್ತಂಭ–ದ್ರೋಹಾಭಿನಿವೇಶ–ನಿರ್ವೇದಾ–ನಂದಾದಯಃ ಸುಮತಿ ದುರ್ಮತಿ ಸುಪ್ರೀತಿ ತುಷ್ಟ್ಯುನ್ನತಿ ಶಾಂತಿ ವಿರಕ್ತಿರತಿ ಮೈತ್ರೀ ದಯಾ ಮುಮುಕ್ಷಾ ಲಜ್ಜಾ ತಿತಿಕ್ಷಾ–ವಿಚಾರಣಾ–ವಿಜಿಗೀಷಾ–ಮುದಿ

---

೧೨. ಕಾಮ, ಸಂಕಲ್ಪ, ವಿಚಿಕಿತ್ಸಾ, ಶ್ರದ್ಧೆ, ಅಶ್ರದ್ಧೆ, ಧೃತಿ, ಅಧೃತಿ, ಹ್ರೀಃ, ಧೀಃ, ಭೀಃ ಇವೆಲ್ಲವೂ ಮನಸ್ಸೇ ಎಂದು ಹೇಳಲ್ಪಟ್ಟಿರುವಾಗ ಇವುಗಳಿಗೆ ಜ್ಞಾನರೂಪತ್ವ ಹೇಗೆ ತಾನೇ ಸಂಭವಿಸುವುದೆಂದು ಆಕ್ಷೇಪಿಸಿದರೆ ಈ ಆಕ್ಷೇಪ ಸಲ್ಲದೆಂದು ಹೇಳುತ್ತೇವೆ. ನಿಯಮೇನ ಮನಸ್ಸು ಜ್ಞಾನದೊಡನೆ ಸಹಕರಿಸುವ ಕಾರಣ 'ಇವೆಲ್ಲವೂ ಮನಸ್ಸೇ' ಎಂದು ಲಾಕ್ಷಣಿಕವಾಗಿ ಹೇಳಿದೆ. ಆದ್ದರಿಂದ ಯಾವ ವಿರೋಧವೂ ಇಲ್ಲ.

೧೩. ಹೀಗೆಯೇ ಪ್ರತ್ಯಕ್ಷ, ಅನುಮಾನ, ಆಗಮ, ಸ್ಮೃತಿ, ಸಂಶಯ, ವಿಪರ್ಯಯ, ಭ್ರಮ, ವಿವೇಕ, ವ್ಯವಸಾಯ, ಮೋಹ, ರಾಗ, ದ್ವೇಷ, ಮದ, ಮಾತ್ಸರ್ಯ, ಧೈರ್ಯ, ಚಾಪಲ್ಯ, ದಂಭ, ಲೋಭ, ಕ್ರೋಧ, ದರ್ಪ, ಸ್ತಂಭ, ದ್ರೋಹ, ಅಭಿನಿವೇಶ, ನಿರ್ವೇದ, ಆನಂದ ಮುಂತಾದವೂ ಸುಮತಿ, ದುರ್ಮತಿ, ಸುಪ್ರೀತಿ, ತುಷ್ಟಿ, ಉನ್ನತಿ, ಶಾಂತಿ, ವಿರಕ್ತಿ, ರತಿ, ಮೈತ್ರಿ, ದಯಾ, ಮುಮುಕ್ಷಾ, ಲಜ್ಜಾ, ತಿತಿಕ್ಷಾ, ವಿಚಾರಣ, ವಿಜಿಗೀಷಾ, ಮುದಿತಾ, ಕ್ಷಮಾ, ಚಿಕೀರ್ಷಾ, ಜುಗುಪ್ಸಾ, ಭಾವನಾ, ಕುಹನಾ, ಅಸೂಯಾ, ಜಿಘಾಂಸಾ, ತೃಷ್ಣಾ, ದುರಾಶಾ, ವಾಸನಾ, ಚರ್ಚಾ, ಶ್ರದ್ಧಾ, ಭಕ್ತಿ, ಪ್ರವೃತ್ತಿ ಮುಂತಾದ ಅನಂತವಾದ ಜೀವಗುಣಗಳೂ ಸಹ ಧರ್ಮಭೂತಜ್ಞಾನದ ಅವಸ್ಥಾವಿಶೇಷಗಳೇ ಆಗಿವೆ.

ತಾ–ಕ್ಷಮಾ–ಚಿಕೀರ್ಷಾ–ಜುಗುಪ್ಸಾ – ಭಾವನಾ – ಕುಹನಾ – ಅಸೂಯಾ–ಜಿಘಾಂಸಾ–ತೃಷ್ಣಾ–ದುರಾಶಾ–ವಾಸನಾ–ಚರ್ಚಾ–ಶ್ರದ್ಧಾ–ಭಕ್ತಿಪ್ರಪತ್ತ್ಯಾದಯಶ್ಚ ಜೀವಗುಣಾ ಅನಂತಾ ಧರ್ಮಭೂತಜ್ಞಾನಾವಸ್ಥಾ ವಿಶೇಷಾ ಏವ ।

೧೪. ಏವಂ ಜ್ಞಾನ–ಶಕ್ತಿ–ಬಲೈಶ್ವರ್ಯ–ವೀರ್ಯ–ತೇಜಃ–ಸೌಶೀಲ್ಯ–ವಾತ್ಸಲ್ಯ–ಮಾರ್ದವ–ಆರ್ಜವ–ಸೌಹಾರ್ದ–ಸಾಮ್ಯ–ಕಾರುಣ್ಯ–ಮಾಧುರ್ಯ–ಗಾಂಭೀರ್ಯ – ಔದಾರ್ಯ – ಚಾತುರ್ಯ – ಸ್ಥೈರ್ಯ–ಧೈರ್ಯ–ಶೌರ್ಯ–ಪರಾಕ್ರಮಾದಯೋ ಭಗವತೋ ಅನಂತಕಲ್ಯಾಣಗುಣಾಃ ಜ್ಞಾನಶಕ್ತ್ಯೋರ್ವಿತತಿಭೂತಾಃ ।

೧೫. ತತ್ರ ಜ್ಞಾನಂ ನಾಮ ಸರ್ವ ಸಾಕ್ಷಾತ್ಕಾರ ರೂಪಂ, ಶಕ್ತಿಃ ಅಘಟಿತಘಟನಾಸಾಮರ್ಥ್ಯಂ । ಬಲಂ ಧಾರಣಸಾಮರ್ಥ್ಯಂ । ಐಶ್ವರ್ಯಂ ನಿಯಮನ ಸಾಮರ್ಥ್ಯಂ । ವೀರ್ಯಮವಿಕಾರಿತ್ವಂ । ತೇಜಃಪರಾಭಿಭವಸಾಮರ್ಥ್ಯಂ ।

---

೧೪. ಹೀಗೆಯೇ ಭಗವಂತನ ಅನಂತ ಕಲ್ಯಾಣಗುಣಗಳಾದ ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು, ಸೌಶೀಲ್ಯ, ವಾತ್ಸಲ್ಯ, ಮಾರ್ದವ, ಆರ್ಜವ, ಸೌಹಾರ್ದ, ಸಾಮ್ಯ, ಕಾರುಣ್ಯ, ಮಾಧುರ್ಯ, ಗಾಂಭೀರ್ಯ, ಔದಾರ್ಯ, ಚಾತುರ್ಯ, ಸ್ಥೈರ್ಯ, ಧೈರ್ಯ, ಶೌರ್ಯ, ಪರಾಕ್ರಮ ಮುಂತಾದವೂ ಸಹ–ಇವು ಆತನ ಜ್ಞಾನ ಮತ್ತು ಶಕ್ತಿಗಳ ವಿಸ್ತಾರಗಳಾಗಿವೆ.

೧೫. ಇವುಗಳಲ್ಲಿ ಜ್ಞಾನವೆಂದರೆ ಎಲ್ಲವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಸ್ವರೂಪ. ಅಘಟಿತಘಟನಾಸಾಮರ್ಥ್ಯವೇ ಶಕ್ತಿ. ಧಾರಣ ಮಾಡುವ ಸಾಮರ್ಥ್ಯವೇ ಬಲ. ಆಳುವ ಸಾಮರ್ಥ್ಯ ಐಶ್ವರ್ಯ. ವಿಕಾರ ಹೊಂದದಿರುವಿಕೆ ವೀರ್ಯ. ಮತ್ತೊಬ್ಬರನ್ನು ಅಭಿಭವಿಸುವ ಸಾಮರ್ಥ್ಯ ತೇಜಸ್ಸು. ಮಹಾತ್ಮರಾದವರು ಮಂದರೊಡನೆ ಯಾವ ಭೇದವೂ ಇಲ್ಲದೆ ಸಮರಸದಿಂದ ಬೆರೆಯುವುದು ಸೌಶೀಲ್ಯ. ದೋಷದಲ್ಲಿಯೂ ಗುಣಬುದ್ಧಿಯನ್ನು ಮಾಡುವುದು ಅಥವಾ ದೋಷವನ್ನು ಕಾಣದಿರುವುದು ವಾತ್ಸಲ್ಯ. ತನ್ನನ್ನು ಆಶ್ರಯಿಸಿದವರ ವಿರಹವನ್ನು ತಾಳಲಾರದಿರುವುದು ಮಾರ್ದವ. ಮನಸ್ಸು,

ಮಹತೋ ಮಂದ್ಯೈಃ ಸಹ ನೀರಂಧ್ರೇಣ ಸಂಶ್ಲೇಷಸ್ವಭಾವತ್ವಂ ಸೌಶೀಲ್ಯಂ। ವಾತ್ಸಲ್ಯಂ ದೋಷೇಪಿ ಗುಣತ್ವಬುದ್ಧಿಃ ದೋಷಾದರ್ಶಿತ್ವಂವಾ। ಆಶ್ರಿತವಿರಹಾ ಸಹತ್ವಂ ಮಾರ್ದವಂ। ಮನೋವಾಕ್ಕಾಯೈಕರೂಪ್ಯಮಾರ್ಜವಂ। ಸ್ವಸತ್ತಾನ ಪೇಕ್ಷತದ್ರಕ್ಷಾಪರತ್ವಂ ಸೌಹಾರ್ದಂ। ಜನ್ಮಜ್ಞಾನವೃತ್ತಗುಣಾದ್ಯನಪೇಕ್ಷಯಾ ಸರ್ವೈರಾಶ್ರಯಣೀಯತ್ವಂ ಸಾಮ್ಯಂ। ಸ್ವಾರ್ಥಾನಪೇಕ್ಷಪರದುಃಖ–ನಿರಾಚಿ ಕೀರ್ಷಾ ಕಾರುಣ್ಯಂ, ಪರದುಃಖಾಸಹಿಷ್ಣುತ್ವಂವಾ। ಕ್ಷೀರವತ್ ಉಪಾಧ್ಯ ಭಾವೇಽಪಿ ಸ್ವಾದುತ್ವಂ ಮಾಧುರ್ಯಂ। ಭಕ್ತಾನುಗ್ರಹ–ವದಾನ್ಯತ್ವಾದೇಃ ಆ ಮೂಲತೋ ದುರವಗಾಹತ್ವಂ ಗಾಂಭೀರ್ಯಂ। ಅಪರಿಮಿತಂ ದತ್ವಾಪಿ ಅತೃಪ್ತತ್ವಂ ಔದಾರ್ಯಂ। ಆಶ್ರಿತದೋಷಗೋಪನಂ ಚಾತುರ್ಯಂ। ಅಕಂಪ ನೀಯತ್ವಂ ಸ್ಥೈರ್ಯಂ। ಅಭಗ್ನಪ್ರತಿಜ್ಞತ್ವಂ ಧೈರ್ಯಂ। ಪರಬಲಪ್ರವೇಶನ ಸಾಮರ್ಥ್ಯಂ ಶೌರ್ಯಂ। ತನ್ನಿರಾಕರಣಂ ಪರಾಕ್ರಮಃ ಇತ್ಯಾದ್ಯೂಹ್ಯಂ।

---

ವಾಕ್ಕು ಮತ್ತು ಶರೀರ ಇವುಗಳಲ್ಲಿ ಏಕರೂಪತೆ ಇರುವುದು ಆರ್ಜವ. ತನ್ನ ಇರುವಿಕೆಯನ್ನೂ ಅಪೇಕ್ಷಿಸದೆ ಆಶ್ರಿತರನ್ನು ರಕ್ಷಿಸುವುದರಲ್ಲಿ ಆತುರವನ್ನು ತೋರುವುದು ಸೌಹಾರ್ದ. ಹುಟ್ಟು, ತಿಳಿವಳಿಕೆ, ನಡತೆ, ಗುಣ ಮೊದಲಾದವುಗಳ ಅಪೇಕ್ಷೆ ಇಲ್ಲದೆ ಎಲ್ಲರಿಂದಲೂ ಆಶ್ರಯಿಸಲನುಕೂಲ ವಾಗಿರುವುದು ಸಾಮ್ಯ. ಸ್ವಾರ್ಥವೇನೂ ಇಲ್ಲದೆ ಇತರರ ದುಃಖವನ್ನು ಹೋಗಲಾಡಿಸುವ ಇಚ್ಛೆ ಕಾರುಣ್ಯ ; ಪರರ ದುಃಖದಲ್ಲಿ ದುಃಖಿಸುವುದೂ ಕಾರುಣ್ಯ. ಹಾಲಿನಂತೆ ಯಾವ ಉಪಾಧಿಯೂ ಇಲ್ಲದೆ ಸ್ವಾದುವಾಗಿರುವುದು ಮಾಧುರ್ಯ. ಭಕ್ತರಲ್ಲಿ ಅನುಗ್ರಹ ಮಾಡುವುದು, ಅವರ ಇಷ್ಟಾರ್ಥ ಗಳನ್ನು ಸಲ್ಲಿಸುವುದು ಮೊದಲಾದುವುಗಳ ಗಾಢತೆಯನ್ನು ಆಮೂಲಾಗ್ರವಾಗಿ ಅಳೆಯಲಸಾಧ್ಯವಾಗಿರುವಿಕೆಯೇ ಗಾಂಭೀರ್ಯ. ಅಪರಿಮಿತವಾಗಿ ಕೊಟ್ಟೂ ತೃಪ್ತಿಪಡದಿರುವುದು ಔದಾರ್ಯ. ಆಶ್ರಿತರ ದೋಷವನ್ನು ಮರೆಸುವುದು ಚಾತುರ್ಯ. ಅಚಲವಾಗಿರುವಿಕೆ ಸ್ಥೈರ್ಯ. ತನ್ನ ಪ್ರತಿಜ್ಞೆಗೆ ಭಂಗವಿಲ್ಲದಿರು ವಿಕೆ ಧೈರ್ಯ. ಶತ್ರುಸೈನ್ಯದೊಳಗೆ ಪ್ರವೇಶಮಾಡುವ ಸಾಮರ್ಥ್ಯವೇ ಶೌರ್ಯ. ಶತ್ರುಸೈನ್ಯವನ್ನು ನಿರ್ಮೂಲಿಸುವುದು ಪರಾಕ್ರಮ. ಹೀಗೆಯೇ ಇತರ ಗುಣಗಳನ್ನು ಊಹಿಸಿಕೊಳ್ಳಬೇಕು.

೧೬. ಜ್ಞಾನವಿಶೇಷಭೂತಯೋಃ ಭಕ್ತಿಪ್ರಪತ್ಯೋಃ ಸ್ವರೂಪಂ ಕಿಂಚಿದುಚ್ಯತೇ। ಭಕ್ತಿಪ್ರಪತ್ತಿಭ್ಯಾಂ ಪ್ರಸನ್ನಃ ಈಶ್ವರ ಏವ ಮೋಕ್ಷಂ ದದಾತಿ। ಅತಸ್ತಯೋರೇವ ಮೋಕ್ಷೋಪಾಯತ್ವಂ।

೧೭. ಮೋಕ್ಷೋಪಾಯತ್ವೇನ ಉಕ್ತಾನಾಂ ಕರ್ಮಯೋಗ-ಜ್ಞಾನ ಯೋಗಪ್ರಭೃತೀನಾಂ ಭಕ್ತಿದ್ವಾರೈವ ಸಾಧನತ್ವಮ್।

೧೮. ಕರ್ಮಯೋಗೋ ನಾಮ ಉಪದೇಶಾತ್ ಜೀವಪರಯಥಾತ್ಮ್ಯ ಜ್ಞಾನವತಾ ಶಕ್ತ್ಯನುಸಾರೇಣ ಫಲಸಂಗರಹಿತ–ಅನಿಷಿದ್ಧ–ಕಾಮ್ಯ ನಿತ್ಯ ನೈಮಿತ್ತಿಕ ರೂಪ–ಪರಿಗೃಹೀತ–ಕರ್ಮವಿಶೇಷಃ। ಸ ತು ದೇವಾರ್ಚನಾತಪಸ್ತೀರ್ಥ ದಾನಯಜ್ಞಾದಿಭೇದಭಿನ್ನಃ। ಅಯಂ ತು ಜೀವಗತಕಲ್ಮಷಾಪನಯನ ದ್ವಾರಾ ಜ್ಞಾನಯೋಗಮುತ್ಪಾದ್ಯ ತದ್ದ್ವಾರಾ ಸಾಕ್ಷಾದ್ವಾ ಭಕ್ತ್ಯುತ್ಪಾದಕೋ ಭವತಿ।

---

೧೬. ಜ್ಞಾನದ ವಿಶೇಷ ರೂಪಗಳಾದ ಭಕ್ತಿ ಮತ್ತು ಪ್ರಪತ್ತಿಗಳ ಸ್ವರೂಪವನ್ನು ಕೊಂಚ ಹೇಳುತ್ತೇವೆ. ಭಕ್ತಿಪ್ರಪತ್ತಿಗಳಿಂದ ಪ್ರಸನ್ನನಾದ ಈಶ್ವರನೇ ಮೋಕ್ಷವನ್ನು ಕೊಡುತ್ತಾನೆ. ಆದುದರಿಂದ ಇವೆರಡಕ್ಕೆ ಮಾತ್ರ ಮೋಕ್ಷೋಪಾಯತ್ವ ಇದೆ.

೧೭. ಮೋಕ್ಷೋಪಾಯ ಎಂದು ಹೇಳಿರುವ ಕರ್ಮಯೋಗ, ಜ್ಞಾನ ಯೋಗ ಮುಂತಾದುವುಗಳು ಭಕ್ತಿಯ ಮೂಲಕವೇ ಮೋಕ್ಷಸಾಧನಗಳೆಂದು ತಿಳಿಯಬೇಕು.

೧೮. ಆಚಾರ್ಯೋಪದೇಶದಿಂದ ಜೀವಾತ್ಮರ ಮತ್ತು ಪರಮಾತ್ಮನ ಯಥಾರ್ಥ ಜ್ಞಾನವನ್ನು ಪಡೆದ ಸಾಧಕನು ತನ್ನ ಶಕ್ತಿಗನುಸಾರವಾಗಿ ಫಲಸಂಗ ರಹಿತವಾಗಿ ಮಾಡುವ ಕರ್ಮವಿಶೇಷ ಕರ್ಮಯೋಗವೆನಿಸುವುದು, ಇದು ನಿಷಿದ್ಧವಲ್ಲದ ಕಾಮ್ಯ ಕರ್ಮದೊಡನೆಯೂ ನಿತ್ಯ ನೈಮಿತ್ತಿಕ ಕರ್ಮದೊಡನೆಯೂ ಕೂಡಿರುವುದು. ಇದು ದೇವತಾರ್ಚನೆ, ತಪಸ್ಸು, ತೀರ್ಥಯಾತ್ರೆ, ದಾನ, ಯಜ್ಞ ಎಂದು ವಿವಿಧವಾಗಿರುವುದು. ಈ ಕರ್ಮಯೋಗ ಜೀವನಲ್ಲಿರುವ

೧೯. ಜ್ಞಾನಯೋಗೋ ನಾಮ ಕರ್ಮಯೋಗಾನ್ನಿರ್ಮಲಾಂತಃ ಕರಣಸ್ಯ ಈಶ್ವರಶೇಷತ್ವೇನ ಪ್ರಕೃತಿವಿಯುಕ್ತಸ್ವಾತ್ಮಚಿಂತಾವಿಶೇಷಃ। ಏತಸ್ಯ ಸಾಕ್ಷಾತ್ ಭಕ್ತ್ಯುಪಯೋಗಿತ್ವಂ। ಏವಂ ಸಾಧನಾಂತರಾಣಾಮಪಿ ಭಕ್ತ್ಯುಪಯೋಗಿತ್ವಮೂಹ್ಯಂ।

೨೦. ಭಕ್ತಿಯೋಗೋ ನಾಮ ಯಮ–ನಿಯಮ–ಆಸನ–ಪ್ರಾಣಾಯಾಮ–ಪ್ರತ್ಯಾಹಾರ–ಧಾರಣಾ – ಧ್ಯಾನ–ಸಮಾಧಿರೂಪ – ಅಷ್ಟಾಂಗವಾನ್ ತೈಲಧಾರಾವದವಿಚ್ಛಿನ್ನಸ್ಮೃತಿಸಂತಾನ ರೂಪಃ।

೨೧. ಸ ಚ ವಿವೇಕ–ವಿಮೋಕ–ಅಭ್ಯಾಸ–ಕ್ರಿಯಾ–ಕಲ್ಯಾಣ–ಅನವಸಾದ–ಅನುದ್ಧರ್ಷರೂಪ–ಸಾಧನಸಪ್ತಕಜನ್ಯಃ।

---

ಕಲ್ಮಷವನ್ನು ಹೋಗಲಾಡಿಸುವ ಮೂಲಕ ಜ್ಞಾನಯೋಗವನ್ನುಂಟುಮಾಡಿ ತನ್ಮೂಲಕವಾಗಿಯಾಗಲೀ ನೇರವಾಗಿಯೇ ಆಗಲಿ ಈಶ್ವರನಲ್ಲಿ ಭಕ್ತಿಯನ್ನುಂಟು ಮಾಡುತ್ತದೆ.

೧೯. ಕರ್ಮಯೋಗದಿಂದ ನಿರ್ಮಲವಾದ ಚಿತ್ತವುಳ್ಳವನಾಗಿ ಪ್ರಕೃತಿಯಿಂದ ಬೇರೆಯಾದ ತನ್ನ ಆತ್ಮ ಈಶ್ವರನಿಗೇ ಶೇಷಭೂತವಾಗಿದೆಯೆಂದು ಮಾಡುವ ಚಿಂತನೆಯೇ ಜ್ಞಾನಯೋಗ. ಇದು ನೇರವಾಗಿ ಭಕ್ತಿಯೋಗವನ್ನುಂಟುಮಾಡುವುದರಲ್ಲಿ ಸಹಾಯಕವಾಗುವುದು. ಹೀಗೆಯೇ ಇತರ ಸಾಧನೆಗಳೂ ಸಹ ಭಕ್ತಿಯನ್ನುಂಟುಮಾಡಲು ಸಹಕಾರಿಗಳೆಂದು ಊಹಿಸಿಕೊಳ್ಳಬೇಕು.

೨೦. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ಎಂಬ ಅಷ್ಟಾಂಗಗಳಿಂದ[107] ಕೂಡಿದ್ದು ತೈಲ ಧಾರೆಯಂತೆ ಅವಿಚ್ಛಿನ್ನವಾಗಿರುವ ಭಗವತ್ಸ್ಮರಣೆಯ ಪ್ರವಾಹವೇ ಭಕ್ತಿಯೋಗ[108].

೨೧. ಈ ಭಕ್ತಿಯೋಗವು ವಿವೇಕ, ವಿಮೋಕ, ಅಭ್ಯಾಸ, ಕ್ರಿಯಾ, ಕಲ್ಯಾಣ, ಅನವಸಾದ, ಅನುದ್ಧರ್ಷ ಎಂಬ ಸಾಧನಸಪ್ತಕಗಳಿಂದ[109] ಉಂಟಾಗುತ್ತದೆ.

೨೨. ತತ್ರ ವಿವೇಕೋ ನಾಮ ಜಾತ್ಯಾಶ್ರಯನಿಮಿತ್ತ–ಅದುಷ್ಟಾತ್–ಅನ್ನಾತ್ ಕಾಯಶುದ್ಧಿಃ। ವಿಮೋಕಃ ಕಾಮಾನಭಿಷ್ವಂಗಃ। ಅಭ್ಯಾಸಃ ಪುನಃ ಪುನಃ ಆಲಂಬನಸಂಶೀಲನಂ। ಶಕ್ತಿತಃ ಪಂಚಮಹಾಯಜ್ಞಾದ್ಯನುಷ್ಠಾನಂ ಕ್ರಿಯಾ। ಸತ್ಯಾರ್ಜವ–ದಯಾ–ದಾನ–ಅಹಿಂಸಾ–ಅನಭಿಧ್ಯಾಃ ಕಲ್ಯಾಣಾನಿ। ಅನವಸಾದೋ ದೈನ್ಯಾಭಾವಃ। ಅನುದ್ಧರ್ಷಃ ತುಷ್ಟ್ಯಭಾವಃ। ಅತಿಸಂತೋಷಶ್ಚ ವಿರೋಧೀತ್ಯರ್ಥಃ।

೨೩. ಏವಂ ಸಾಧನಸಪ್ತಕಾನುಗೃಹೀತಾ ಭಕ್ತಿಃ ದರ್ಶನಸಮಾನಾಕಾರಾ ಅಂತಿಮಪ್ರತ್ಯಯಾವಧಿಕಾ ಚ ಭವತಿ। ಸ ಚ ಅಂತಿಮ ಪ್ರತ್ಯಯಃ ಏತಚ್ಛರೀರಾವಸಾನೇ ವಾ ಶರೀರಾಂತರಾವಸಾನೇ ವಾ ಭವತಿ।

೨೪. ವೇದನ-ಧ್ಯಾನೋಪಾಸನಾದಿಶಬ್ದವಾಚ್ಯಾ ಭಕ್ತಿಃ ಪರಭಕ್ತಿ ಪರಜ್ಞಾನ–ಪರಮಭಕ್ತಿ–ರೂಪಕ್ರಮವತೀ ಪ್ರಪತ್ಯಂಗಿಕಾ ಚ।

---

೨೨. ವಿವೇಕವೆಂಬುದು ಜಾತಿದುಷ್ಟವಾಗಲೀ ನಿಮಿತ್ತದುಷ್ಟವಾಗಲೀ ಆಶ್ರಯದುಷ್ಟವಾಗಲೀ ಆಗಿರದ ಆಹಾರದಿಂದ ಆಗುವ ಕಾಯಶುದ್ಧಿ. ವಿಮೋಕವೆಂಬುದು ಕಾಮದ ಸಂಪರ್ಕವಿಲ್ಲದಿರುವಿಕೆ. ಭಗವಂತನನ್ನು ಎಡೆಬಿಡದೆ ಧ್ಯಾನಿಸುವುದು ಅಭ್ಯಾಸ. ತಮ್ಮ ತಮ್ಮ ಶಕ್ತಿಗನುಸಾರವಾಗಿ ಮಾಡುವ ಪಂಚಮಹಾಯಜ್ಞಗಳ ಅನುಷ್ಠಾನ ಕ್ರಿಯೆ. ಸತ್ಯ, ಆರ್ಜವ, ದಯೆ, ದಾನ, ಅಹಿಂಸೆ, ಅನಭಿಧ್ಯಾ ಎಂಬವು ಕಲ್ಯಾಣಗಳು. ದೈನ್ಯವಿಲ್ಲದಿರುವಿಕೆ ಅನವಸಾದ. ಅತಿಹರ್ಷವಿಲ್ಲದಿರುವಿಕೆ ಅನುದ್ಧರ್ಷ. ಅತಿ ಸಂತೋಷವೂ ವಿರೋಧಿ ಎಂಬುದು ಇದರ ಅಭಿಪ್ರಾಯ.

೨೩. ಹೀಗೆ ಸಾಧನಸಪ್ತಕಗಳಿಂದ ಉತ್ಪನ್ನವಾದ ಭಕ್ತಿಯು (ಧ್ಯೇಯ ವಸ್ತುವಿನ) ದರ್ಶನಸಮಾನಾಕಾರತೆಯನ್ನು ಹೊಂದುತ್ತದೆ. 'ಅಂತಿಮ ಪ್ರತ್ಯಯ' ವನ್ನು ಇದು ತನ್ನ ಅವಧಿಯನ್ನಾಗಿ ಹೊಂದಿರುವುದು. ಈ 'ಅಂತಿಮ ಪ್ರತ್ಯಯವು'[111] (ಭಗವತ್ಸಾಕ್ಷಾತ್ಕಾರವು) ಈ ಶರೀರದ ಅವಸಾನದಲ್ಲಿಯೇ ಉಂಟಾಗುತ್ತದೆ.

೨೪. ವೇದನ, ಧ್ಯಾನ, ಉಪಾಸನ ಮೊದಲಾದ ಶಬ್ದಗಳಿಂದ ಹೇಳ

೨೫. ಸಾ ದ್ವಿವಿಧಾ—ಸಾಧನಭಕ್ತಿಫಲಭಕ್ತಿಭೇದಾತ್ । ಉಕ್ತಸಾಧನಜನ್ಯಾ ಸಾಧನಭಕ್ತಿಃ । ಫಲಭಕ್ತಿಸ್ತು ಈಶ್ವರಕೃಪಾಜನ್ಯಾ ಶ್ರೀಪರಾಂಕುಶನಾಥಾದಿನಿಷ್ಠಾ । 'ಮದ್ಭಕ್ತಜನವಾತ್ಸಲ್ಯಂ' ಇತ್ಯಾದಿಷು ಸ್ತುತಿನಮಸ್ಕಾರಾದಿಷು ಚ ಭಕ್ತಿಶಬ್ದಪ್ರಯೋಗಃ ಔಪಚಾರಿಕಃ ।

೨೬. ನನು ವೇದಾಂತೇಷು ಶ್ರವಣಮನನಯೋರಪಿ ವಿಧಾನಾತ್ ಕಥಂ ಧ್ಯಾನಮೇವ ವಿಧೀಯತೇ ಇತಿಚೇತ್ ಉಚ್ಯತೇ । ಅಧೀತಸಾಂಗವೇದಃ ಪುರುಷಃ ಪ್ರಯೋಜನವದರ್ಥಾವಬೋಧಿತ್ವದರ್ಶನಾತ್ ತನ್ನಿರ್ಣಯಾಯ

---

ಲ್ಪಡುವ ಭಕ್ತಿಯು ಕ್ರಮವಾಗಿ ಪರಭಕ್ತಿ, ಪರಜ್ಞಾನ, ಪರಮಭಕ್ತಿ ಎಂಬ ಪರ್ವಗಳನ್ನು[112] ಹೊಂದಿರುತ್ತದೆ. ಈ ಭಕ್ತಿ ಯೋಗಕ್ಕೆ ಪ್ರಪತ್ತಿಯು ಅಂಗವಾಗಿರುತ್ತದೆ.

೨೫. ಈ ಭಕ್ತಿ ಸಾಧನಭಕ್ತಿ ಮತ್ತು ಫಲಭಕ್ತಿ ಎಂದು ಎರಡು ವಿಧ. ಮೇಲೆ ಹೇಳಿದಂತೆ ಸಾಧನಸಪ್ತಕಗಳಿಂದ ಉದಿಸುವ ಭಕ್ತಿ ಸಾಧನಭಕ್ತಿ. ಫಲಭಕ್ತಿಯು ಶ್ರೀಪರಾಂಕುಶರು, ಶ್ರೀಮನ್ನಾಥಮುನಿಗಳು ಮುಂತಾದವರಲ್ಲಿ ಕಂಡುಬರುವಂಥದು. ಈಶ್ವರನ ಕೃಪೆಯಿಂದ ಇದು ಉದಿಸುತ್ತದೆ. 'ಮದ್ಭಕ್ತಜನವಾತ್ಸಲ್ಯಂ' ಮುಂತಾದುವುಗಳಲ್ಲಿ ಸ್ತುತಿ, ನಮಸ್ಕಾರ ಮುಂತಾದುವುಗಳಿಗೆ ಭಕ್ತಿ ಶಬ್ದಪ್ರಯೋಗ ಮಾಡಿರುವುದು ಔಪಚಾರಿಕವಾಗಿದೆ.

೨೬. ವೇದಾಂತಗಳಲ್ಲಿ ಶ್ರವಣಮನನಗಳನ್ನು ವಿಧಿಸಿರುವುದರಿಂದ ಧ್ಯಾನವನ್ನೇ ವಿಧಿಸಿದೆ ಎಂದು ಹೇಗೆ ಹೇಳುವುದು ಎಂದು ಆಕ್ಷೇಪಿಸಿದರೆ ಕೆಳಕಂಡಂತೆ ಉತ್ತರಿಸುತ್ತೇವೆ. ವೇದವನ್ನು ವೇದಾಂಗಗಳೊಡನೆ ಅಧ್ಯಯನ ಮಾಡಿದವನು ಅಲ್ಲಿನ ಕೆಲವು ವಿಧಿಗಳಿಂದ ಫಲಗಳು ದೊರೆಯುವುವೆಂಬ ಅರ್ಥವನ್ನು ಕಾಣುತ್ತಾನೆ. ಅವುಗಳನ್ನು ನಿರ್ಧರಿಸಿಕೊಳ್ಳಲು ತಾನೇ ಶ್ರವಣ ಮಾಡಲು ತೊಡಗುತ್ತಾನೆ. ಆದರಿಂದ ಶ್ರವಣವು ಸಿದ್ಧವಾಗುವ ಕಾರಣ ಅದು ಅನುವಾದವಾಗುತ್ತದೆ. ಆದುದರಿಂದ ಧ್ಯಾನವನ್ನೇ ವಿಧಿಸಿದೆ ಎಂಬುವುದರಲ್ಲಿ ವಿರೋಧವಿಲ್ಲ[113].

ಸ್ವಯಮೇವ ಶ್ರವಣೇ ಪ್ರವರ್ತತೇ ಇತಿ ಶ್ರವಣಸ್ಯ ಪ್ರಾಪ್ತತ್ವಾತ್ ಅನುವಾದಃ । ಶ್ರವಣಪ್ರತಿಷ್ಠಾರ್ಥತ್ವಾತ್ ಮನನಸ್ಯಾಪಿ ಅನುವಾದಃ । ತಸ್ಮಾತ್ ಧ್ಯಾನಮೇವ ವಿಧೀಯತೇ ಇತಿ ನ ವಿರೋಧಃ।

೨೭. ಧ್ಯಾನಶಬ್ದವಾಚ್ಯಾ ಭಕ್ತಿಃ ವಿದ್ಯಾಭೇದಾತ್ ಬಹುವಿಧಾ । ತಾಶ್ಚ ವಿದ್ಯಾಃ ದ್ವಿವಿಧಾಃ ಐಹಿಕಫಲಾಃ ಮುಕ್ತಿಫಲಾಶ್ಚೇತಿ । ತತ್ರ ಐಹಿಕಫಲಾ ಉದ್ಗೀಥವಿದ್ಯಾದಯಃ । ಮುಕ್ತಿಫಲಾಸ್ತು ಅಂತರಕ್ಷಿವಿದ್ಯಾ, ದಹರವಿದ್ಯಾ, ಭೂಮವಿದ್ಯಾ, ಸದ್ವಿದ್ಯಾ, ಮಧುವಿದ್ಯಾ, ಉಪಕೋಸಲವಿದ್ಯಾ, ಶಾಂಡಿಲ್ಯವಿದ್ಯಾ, ಪುರುಷವಿದ್ಯಾ, ವೈಶ್ವಾನರವಿದ್ಯಾ, ಪಂಚಾಗ್ನಿವಿದ್ಯಾ ಇತ್ಯಾದಿಕಾಃ ಬ್ರಹ್ಮವಿದ್ಯಾಃ ।

೨೮. ನ್ಯಾಸವಿದ್ಯಾ ಪ್ರಪತ್ತಿಃ । ಪ್ರಪತ್ತಿರ್ನಾಮ—

ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಂ ।
ರಕ್ಷಿಷ್ಯತೀತಿ ವಿಶ್ವಾಸಃ ಗೋಪ್ತೃತ್ವವರಣಂ ತಥಾ ॥

ಆತ್ಮನಿಕ್ಷೇಪ ಕಾರ್ಪಣ್ಯಂ–ಇತ್ಯಂಗ ಪಂಚಕ ಯುಕ್ತಾ। ಏತದ್ದೇಹಾವಸಾನೇ ಮೋಕ್ಷಪ್ರದಾ ಸಕೃತ್ಕರ್ತವ್ಯಾ ನ್ಯಾಸಃ ಶರಣಾಗತಿರಿತ್ಯಾದಿಶಬ್ದವೇದ್ಯಾ

---

೨೭. ಧ್ಯಾನ ಎಂದು ಕರೆಯಲ್ಪಡುವ ಭಕ್ತಿಯು ವಿದ್ಯಾಭೇದದ ಕಾರಣ ಅನೇಕ ವಿಧವಾಗಿದೆ[114]. ಆ ವಿದ್ಯೆಗಳು ಎರಡು ಬಗೆ. ಐಹಿಕಫಲಗಳನ್ನುಳ್ಳವು ಒಂದು ಬಗೆ. ಮೋಕ್ಷಫಲವನ್ನುಳ್ಳವು ಮತ್ತೊಂದು ಬಗೆ. ಐಹಿಕ ಫಲಕ್ಕಾಗಿ ಆಗತಕ್ಕವು ಉದ್ಗೀಥವಿದ್ಯೆ ಮುಂತಾದುವು. ಮುಕ್ತಿಯನ್ನು ಫಲವನ್ನಾಗಿ ಉಳ್ಳ ವಿದ್ಯೆಗಳಾದರೋ ಅಂತರಿಕ್ಷಿ ವಿದ್ಯೆ, ದಹರವಿದ್ಯೆ, ಭೂಮವಿದ್ಯೆ, ಸದ್ವಿದ್ಯೆ, ಉಪಕೋಸಲವಿದ್ಯೆ, ಶಾಂಡಿಲ್ಯವಿದ್ಯೆ, ಪುರುಷವಿದ್ಯೆ ವೈಶ್ವಾನರವಿದ್ಯೆ, ಪಂಚಾಗ್ನಿವಿದ್ಯೆ ಮೊದಲಾದ ಬ್ರಹ್ಮವಿದ್ಯೆಗಳು[115].

೨೮. ನ್ಯಾಸವಿದ್ಯೆ ಎಂಬುದು ಪ್ರಪತ್ತಿ. ಭಗವಂತನಿಗೆ ಅನುಕೂಲವಾದುದನ್ನು ಸಂಕಲ್ಪಿಸುವುದು. ಅವನಿಗೆ ಪ್ರತಿಕೂಲವಾದುದನ್ನು ಬಿಡುವುದು, ಅವನು ಸಂರಕ್ಷಿಸುವನೆಂದು ಮಹಾವಿಶ್ವಾಸ ತಳೆಯುವುದು, ಅವನನ್ನೇ ರಕ್ಷಕ

ಜ್ಞಾನವಿಶೇಷರೂಪಾ । ಏಷಾ ಪ್ರಪತ್ತಿಃ ಗುರುಮುಖಾದ್ರಹಸ್ಯಶಾಸ್ತ್ರೇಷು ಸಂಪ್ರದಾಯತಯಾ ವೇದಿತವ್ಯೇತಿ ಇಹ ಬಾಲಬೋಧಾರ್ಥಂ ಪ್ರವೃತ್ತೇ ಗ್ರಂಥೇ ನ ಪ್ರಕಾಶ್ಯಾ ಇತಿ ವಿರಮ್ಯತೇ ।

೨೯. ಭಕ್ತಿಪ್ರಪತ್ತ್ಯೋರೇವ ಮೋಕ್ಷಸಾಧನತ್ವೇನ ಸ್ವೀಕಾರಾತ್ ಪರೋಕ್ತೋಪಾಯನಿರಾಸಃ । ಯಥಾ ವೇದಬಾಹ್ಯಾನಾಂ ಮಧ್ಯೇ ಕೇಷಾಂ ಚಿನ್ಮತೇ ದೇಹಾತಿರಿಕ್ತಾತ್ಮನಃ ಅನಂಗೀಕಾರಾತ್ ಮೋಕ್ಷಪ್ರವೃತ್ತಿರೇವ ನ ಸಂಭವತಿ । ಅನ್ಯೇಷಾಂ ಮತೇ ಜ್ಞಾನಸ್ಯ ಕ್ಷಣಿಕತ್ವಾತ್, ತಸ್ಯೈವಾತ್ಮತ್ವಾತ್ ಕಸ್ಯ ಪ್ರವೃತ್ತಿಃ? ಸಂತಾನಸ್ಯೇತಿ ಚೇತ್ ನ । ಅನ್ಯಂ ಪ್ರತಿ ಅನ್ಯೇನ ಯತ್ನೋ ನ ಕರ್ತವ್ಯ ಇತಿ ನ ಪ್ರವೃತ್ತಿಃ । ಅಪರೇಷಾಂ ಮತೇ ಧರ್ಮಾಧರ್ಮಾದಿ

---

ನನ್ನಾಗಿ ವರಿಸುವುದು, ಕಾರ್ಪಣ್ಯವನ್ನು ಹೊಂದಿರುವುದು ಮತ್ತು ಆತನಲ್ಲಿ ಆತ್ಮವನ್ನು ಅರ್ಪಣೆಮಾಡುವುದು ಎಂಬಂತೆ ಆತ್ಮ ಸಮರ್ಪಣೆಯು ಐದು ಅಂಗಗಳೊಡನೆ ಕೂಡಿರುವುದು. ಈ ಪ್ರಪತ್ತಿಯಿಂದ ಈ ದೇಹದ ಕೊನೆಯಲ್ಲಿ ಮೋಕ್ಷವು ಲಭಿಸುತ್ತದೆ ಅದನ್ನು ಒಂದೇ ಒಂದು ಬಾರಿ (ಒಂದು ಪ್ರಯೋಜನಕ್ಕಾಗಿ) ಅನುಷ್ಠಿಸಬೇಕು. ನ್ಯಾಸ, ಶರಣಾಗತಿ ಎಂಬ ಶಬ್ದಗಳೂ ಇದನ್ನೇ ಹೇಳುತ್ತವೆ. ಈ ಪ್ರಪತ್ತಿಯನ್ನು ಕುರಿತು ಸಂಪ್ರದಾಯಕ್ಕನುಸಾರವಾಗಿ ಗುರು ಮುಖೇನ ರಹಸ್ಯ ಶಾಸ್ತ್ರಗಳಿಂದ ಅರಿಯಬೇಕಾದ ಕಾರಣ ಬಾಲಬೋಧಾರ್ಥವಾಗಿ ಪ್ರವೃತ್ತವಾದ ಈ ಗ್ರಂಥದಲ್ಲಿ ಇದರ ವಿವರಣೆಯನ್ನು ಇಲ್ಲಿಗೆ ನಿಲ್ಲಿಸಿ ಕೊಳ್ಳುತ್ತೇವೆ.

೨೯. ಭಕ್ತಿ ಮತ್ತು ಪ್ರಪತ್ತಿಗಳೇ ಮೋಕ್ಷಕ್ಕೆ ಉಪಾಯಗಳೆಂದು ಅಂಗೀಕರಿಸುವುದರಿಂದ ಇತರರು ಹೇಳುವ ಉಪಾಯಗಳನ್ನು ತಳ್ಳಿಹಾಕಲಾಗಿದೆ. ಉದಾಹರಣೆಗಾಗಿ ವೇದಪ್ರಾಮಾಣ್ಯವನ್ನಂಗೀಕರಿಸದ ಕೆಲವರ ಮತದಲ್ಲಿ ದೇಹಕ್ಕಿಂತ ಬೇರೆಯಾದ ಆತ್ಮವೇ ಇರುವುದಿಲ್ಲ. ಆದ್ದರಿಂದ ಅವರಿಗೆ ಮೋಕ್ಷವನ್ನು ಪಡೆಯಬೇಕೆಂಬ ಪ್ರವೃತ್ತಿಗೇ ಅವಕಾಶವಿಲ್ಲದೆ ಹೋಗುತ್ತದೆ. ಇತರ ಕೆಲವರ ಅಭಿಪ್ರಾಯದಲ್ಲಿ ಜ್ಞಾನವು ಕ್ಷಣಿಕವಾಗಿದ್ದು ಅದೇ ಆತ್ಮವಾಗಿರುವುದರಿಂದ ಮೋಕ್ಷಪ್ರವೃತ್ತಿ ಯಾರಿಗೆ ತಾನೇ ಆಗಬೇಕು? ಆ (ಕ್ಷಣಿಕವಾದ)

ಸಪ್ತಭಂಗೀರೀತ್ಯಾ ಅನೈಕಾಂತವಾದಾತ್ ನ ಪ್ರವೃತ್ತಿಃ। ವೈಶೇಷಿಕಾದಿಪಕ್ಷೇ ಪಾಷಾಣಕಲ್ಪೇ ಮೋಕ್ಷೇ ಪ್ರವೃತ್ತಿಃ ಕಸ್ಯಾಪಿ ನ ಸಂಭವತಿ। ಸಾಂಖ್ಯಾದಿಪಕ್ಷೇಷು ಈಶ್ವರಾನಂಗೀಕಾರಾತ್ ಪುರುಷಸ್ಯ ಪ್ರಕೃತೇರ್ವಾ ಮೋಕ್ಷ ಇತಿ ಸಂಶಯಾತ್ ನ ಪ್ರವೃತ್ತಿಃ। ಭಾಸ್ಕರಯಾದವಯೋಸ್ತು ಕರ್ಮಜ್ಞಾನಸಮುಚ್ಚಯವಾದೋಽಪಿ ಉಕ್ತಾದೇವ ನಿರಸ್ತಃ। ಶೈವಮತೇ ತು ಪಶುಪತೇಃ ಪ್ರಾಪ್ಯತ್ವ

---

ಜ್ಞಾನಸಂತಾನಕ್ಕೇ ಆಗಲಿ ಎಂದೂ ಹೇಳುವುದಕ್ಕಾಗುವುದಿಲ್ಲ. ಏಕೆಂದರೆ (ನಷ್ಟವಾದ) ಒಂದು ಮತ್ತೊಂದರ ಬಿಡುಗಡೆಗೆ ಪ್ರಯತ್ನಿಸಲಾರದ ಕಾರಣ ಪ್ರವೃತ್ತಿಯೇ ಉಂಟಾಗದು. ಮತ್ತಿತರರ ಸಿದ್ಧಾಂತದಲ್ಲಿ ಧರ್ಮ, ಅಧರ್ಮ ಮುಂತಾದ ಸಪ್ತಭಂಗೀರೀತಿಯಿಂದ ಅನೈಕಾಂತವಾದ ತಲೆದೋರುವ ಕಾರಣ ಮೋಕ್ಷಪ್ರವೃತ್ತಿಯೇ ಉಂಟಾಗದು. ವೈಶೇಷಿಕರೇ ಮುಂತಾದವರ ಸಿದ್ಧಾಂತದಲ್ಲಿ ಹೇಳುವ ಪಾಷಾಣಸಮಾನವಾದ ಮೋಕ್ಷದಲ್ಲಿ ಯಾರಿಗೆ ತಾನೇ ಪ್ರವೃತ್ತಿ ಉಂಟಾಗಬಲ್ಲದು ? ಸಾಂಖ್ಯಾದಿ ಪಕ್ಷಗಳವರು ಈಶ್ವರನನ್ನೇ ಒಪ್ಪುವುದಿಲ್ಲವಾದ್ದರಿಂದ ಮೋಕ್ಷವು ಪುರುಷನಿಗೋ ಪ್ರಕೃತಿಗೋ ಎಂಬ ಸಂದೇಹ ತಲೆದೋರಿ ಮೋಕ್ಷ ಪ್ರವೃತ್ತಿಯನ್ನು ನಿವಾರಿಸಿಬಿಡುತ್ತದೆ. ಮಾಯಿಮತದಲ್ಲಿ ವ್ಯಾವಹಾರಿಕವಾಕ್ಯ ಪಾರಮಾರ್ಥಿಕವಾದ ಅಭೇದ ಜ್ಞಾನವನ್ನು ಉಂಟುಮಾಡಲಾರದ ಕಾರಣ ಮೋಕ್ಷಪ್ರವೃತ್ತಿ ಉಂಟಾಗಲಾರದು. ಭಾಸ್ಕರ, ಯಾದವ ಮುಂತಾದವರ ಕರ್ಮಜ್ಞಾನಸಮುಚ್ಚಯವಾದವೂ ಸಹ ಮೇಲೆ ಹೇಳಿರುವುದರಿಂದಲೇ ನಿರಾಕೃತವಾಗುತ್ತದೆ. ಶೈವಮತದಲ್ಲಿ ಪಶುಪತಿಯನ್ನೇ ಪ್ರಾಪ್ಯವೆಂದು ಒಪ್ಪಿರುವುದರಿಂದಲೂ, ವೇದವಿರುದ್ಧವಾದ ಭಸ್ಮಧಾರಣೆ ಮುಂತಾದವು

ಸ್ವೀಕಾರಾತ್ ವೇದವಿರುದ್ಧಭಸ್ಮಧಾರಣಾದೇಃ ಸಾಧನತ್ವೇನ ಸ್ವೀಕಾರಾಚ್ಚ ತನ್ನಿರಾಸಃ । ಏವಂ ಮತಿರ್ನಿರೂಪಿತಾ ।

ಇತಿ ಶ್ರೀ ವಾಧೂಲಕುಲತಿಲಕ ಶ್ರೀಮನ್ಮಹಾಚಾರ್ಯಸ್ಯ ಪ್ರಥಮದಾಸೇನ
ಶ್ರೀನಿವಾಸದಾಸೇನ ವಿರಚಿತಾಯಾಂ ಯತೀಂದ್ರಮತದೀಪಿಕಾಯಾಂ
ಧರ್ಮಭೂತಜ್ಞಾನ ನಿರೂಪಣಂ ನಾಮ ಸಪ್ತಮೋऽವತಾರಃ

---

ಗಳನ್ನು ಸಾಧನಗಳೆಂದು ಅಂಗೀಕರಿಸಿರುವುದರಿಂದಲೂ ಅವರ ಪಕ್ಷವೂ ನಿರಾಕರಿಸಲ್ಪಟ್ಟಿದೆ[116]. ಇದಿಷ್ಟು ಧರ್ಮಭೂತ ಜ್ಞಾನದ ನಿರೂಪಣೆಯಾಗಿದೆ.

ಇಂತು ವಾಧೂಲಕುಲತಿಲಕನೂ ಮಹಾಚಾರ್ಯರ ಪ್ರಥಮದಾಸನೂ ಆದ
ಶ್ರೀನಿವಾಸದಾಸನಿಂದ ವಿರಚಿತವಾದ ಯತೀಂದ್ರಮತದೀಪಿಕೆಯಲ್ಲಿ
ಧರ್ಮಭೂತಜ್ಞಾನನಿರೂಪಣೆ ಎಂಬ ಏಳನೆಯ
ಅವತಾರ ಮುಗಿದುದು.

## ಅಷ್ಟಮೋಽವತಾರಃ

# ಜೀವಃ

೧. ಅಥ ಜೀವೋ ನಿರೂಪ್ಯತೇ। ಪ್ರತ್ಯಕ್ತ್ವ-ಚೇತನತ್ವ-ಆತ್ಮತ್ವ ಕರ್ತೃತ್ವಾದೀನಿ ಈಶ್ವರಜೀವಸಾಧಾರಣಾನಿ ಲಕ್ಷಣಾನಿ। ಪ್ರತ್ಯಕ್ತ್ವಂ ನಾಮ ಸ್ವಯಮೇವ ಸ್ವಸ್ಮೈ ಭಾಸಮಾನತ್ವಂ। ಚೇತನತ್ವಂ ಜ್ಞಾನಾಶ್ರಯತ್ವಂ। ಆತ್ಮತ್ವಂ ಶರೀರಪ್ರತಿಸಂಬಂಧಿತ್ವಂ। ಕರ್ತೃತ್ವಂ ಸಂಕಲ್ಪಜ್ಞಾನಾಶ್ರಯತ್ವಂ।

೨. ಏವಂ ಸಾಮಾನ್ಯ ಲಕ್ಷಣಲಕ್ಷಿತಸ್ಯ ವಿಶೇಷಲಕ್ಷಣಾನಿ ಉಚ್ಯಂತೇ- ಅಣುತ್ವೇಸತಿ ಚೇತನತ್ವಂ, ಸ್ವತಃ ಶೇಷತ್ವೇ ಸತಿ ಚೇತನತ್ವಂ। ಏವಂ ಆಧೇಯತ್ವ ವಿಧೇಯತ್ವ-ಪರಾಧೀನ ಕರ್ತೃತ್ವ-ಪರತಂತ್ರತ್ವಾದಿಕಂ ಊಹ್ಯಂ।

---

## ಎಂಟನೆಯ ಅವತಾರ

# ಜೀವಾತ್ಮನು

೧. ಈಗ ಜೀವಾತ್ಮನ ಸ್ವರೂಪವನ್ನು ನಿರೂಪಿಸುತ್ತೇವೆ. ಪ್ರತ್ಯಕ್ತ್ವ, ಚೇತನತ್ತ್ವ, ಆತ್ಮತ್ವ ಮತ್ತು ಕರ್ತೃತ್ವಗಳು ಜೀವನಿಗೂ ಈಶ್ವರನಿಗೂ ಸಮಾನವಾಗಿರುವ ಲಕ್ಷಣಗಳು. ಪತ್ಯಕ್ತ್ವವೆಂಬುದು ತನಗೆ ತಾನೇ ಪ್ರಕಾಶಿಸುವಿಕೆ. ಚೇತನತ್ತ್ವವೆಂದರೆ ಜ್ಞಾನಕ್ಕೆ ಆಶ್ರಯವಾಗಿರುವಿಕೆ. ಆತ್ಮತ್ವವೆಂದರೆ ಶರೀರ ಸಂಬಂಧವನ್ನು ಹೊಂದಿರುವಿಕೆ. ಸಂಕಲ್ಪಜ್ಞಾನಕ್ಕೆ ಆಶ್ರಯವಾಗಿರುವಿಕೆ ಕರ್ತೃತ್ವ.

೨. ಮೇಲೆ ಹೇಳಿದ ಸಾಮಾನ್ಯಲಕ್ಷಣಗಳನ್ನುಳ್ಳ ಜೀವನ ವಿಶೇಷ ಲಕ್ಷಣಗಳನ್ನೀಗ ಹೇಳುತ್ತೇವೆ-ಅಣುತ್ವವನ್ನು ಹೊಂದಿದ್ದು ಚೇತನತ್ವವನ್ನು ಹೊಂದಿರುವುದು ಜೀವನ ಲಕ್ಷಣ. ಹಾಗೆಯೇ ಸ್ವತಃ ಶೇಷತ್ವವನ್ನು ಹೊಂದಿದ್ದು ಚೇತನತ್ವವನ್ನು ಹೊಂದಿರುವುದೂ ಅವನ ಲಕ್ಷಣವಾಗಿದೆ[117] ಹೀಗೆಯೇ ಆಧೇಯತ್ವ, ವಿಧೇಯತ್ವ, ಪರಾಧೀನಕರ್ತೃತ್ವ, ಪರತಂತ್ರತ್ವ ಮೊದಲಾದುವನ್ನು ಹೊಂದಿರುವುದೂ ಅವನ ಲಕ್ಷಣವೆಂದು ಊಹಿಸಿಕೊಳ್ಳಬೇಕು.

೩. ಸ ದೇಹೇಂದ್ರಿಯಮನಃಪ್ರಾಣಾದಿಭ್ಯೋ ವಿಲಕ್ಷಣಃ । ಯಥಾ ಮಮಶರೀರಂ ಇತಿ ಪ್ರತೀತ್ಯಾ ದೇಹಾತ್ ವ್ಯಾವೃತ್ತಃ । 'ಚಕ್ಷುಷಾ ಪಶ್ಯಾಮಿ', 'ಶ್ರೋತ್ರೇಣ ಶೃಣೋಮಿ', 'ವಾಚಾ ವದಾಮಿ' ಇತ್ಯಾದಿ ಪ್ರತ್ಯಯಾತ್ ಬಾಹ್ಯೇಂದ್ರಿಯೇಭ್ಯೋ ವ್ಯಾವೃತ್ತಃ । 'ಮನಸಾ ಜಾನಾಮಿ' ಇತಿ ಮನಸೋ ಜ್ಞಾನಕರಣತ್ವಪ್ರತೀತೇಃ, 'ಮಮ ಪ್ರಾಣಾ' ಇತಿ ವ್ಯತಿರೇಕೋಕ್ತೇಃ 'ಜಾನಾಮಿ ಅಹಂ' ಇತಿ ಜ್ಞಾನಾಚ್ಚ ಮನಃಪ್ರಾಣಜ್ಞಾನೇಭ್ಯೋ ವ್ಯಾವೃತ್ತಃ ।

೪. ಸ ಚ ಅಣುಪರಿಮಾಣಃ । ಉತ್ಕ್ರಾಂತ್ಯಾದೇಃ ಶ್ರವಣಾತ್ ಪ್ರಮಾಣಾನುಸಾರಾಚ್ಚ । ಅಣುತ್ವೇ ಯುಗಪದನೇಕ ವಿಷಯಾನುಭವಃ ಕಥ ಮಿತಿ ನ ಶಂಕನೀಯಂ । ಧರ್ಮಭೂತಜ್ಞಾನವ್ಯಾಪ್ತ್ಯಾ ಉಪಪತ್ತೇಃ । ಏತೇ

---

೩. ದೇಹ, ಇಂದ್ರಿಯ, ಮನಸ್ಸು, ಪ್ರಾಣ ಮೊದಲಾದವುಗಳಿಗಿಂತ ವಿಲಕ್ಷಣವಾದುದು ಆತ್ಮವಸ್ತು. 'ನನ್ನ ಶರೀರ' ಎಂಬ ಅನುಭವದಲ್ಲಿ ಗೋಚರಿಸುವಂತೆ ಅದು ದೇಹಕ್ಕಿಂತ ಬೇರೆಯಾದುದು. 'ಕಣ್ಣಿನಿಂದ ಕಾಣುತ್ತೇನೆ' 'ಕಿವಿಯಿಂದ ಕೇಳುತ್ತೇನೆ' 'ಬಾಯಿಯಿಂದ ಮಾತಾಡುತ್ತೇನೆ' ಮೊದಲಾದ ಅನುಭವಗಳಿಗನುಸಾರವಾಗಿ ಅದು ಬಾಹ್ಯೇಂದ್ರಿಯಗಳಿಗಿಂತ ಬೇರೆಯಾದುದು. 'ಮನಸ್ಸಿನಿಂದ ತಿಳಿಯುತ್ತೇನೆ' ಎಂಬಲ್ಲಿ ಮನಸ್ಸೂ ಸಹ ಜ್ಞಾನವನ್ನುಂಟು ಮಾಡುವ ಸಾಧನವಾಗಿರುವುದು ತಿಳಿದುಬರುವ ಕಾರಣದಿಂದಲೂ 'ನನ್ನ ಪ್ರಾಣ' ಎಂದು ಪ್ರಾಣಗಳನ್ನು ಪ್ರತ್ಯೇಕಿಸಿ ಹೇಳುವುದರಿಂದಲೂ, 'ನಾನು ತಿಳಿಯುತ್ತೇನೆ' ಎಂಬ ಜ್ಞಾನದ ಕಾರಣದಿಂದಲೂ ಆತ್ಮವು ಮನಸ್ಸು, ಪ್ರಾಣ ಮತ್ತು ಜ್ಞಾನಗಳಿಗಿಂತ ಭಿನ್ನವಾಗಿದೆ.

೪. ಈ ಆತ್ಮನು ಅಣುವಿನಷ್ಟು ಪರಿಮಾಣವನ್ನು ಹೊಂದಿದ್ದಾನೆ. ಜೀವನು ದೇಹದಿಂದ ಉತ್ಕ್ರಮಿಸುವುದೇ ಮೊದಲಾದವನ್ನು ಶಾಸ್ತ್ರಗಳು ತಿಳಿಸಿವೆ[118]. ಇದು ಪ್ರಮಾಣಗಳಿಗನುಸಾರವಾಗಿಯೂ ಇದೆ. ಜೀವನು ಅಣುವಾದರೆ ಏಕಕಾಲದಲ್ಲಿ ಅನೇಕ ವಿಷಯಗಳ ಅನುಭವ ಹೇಗಾಗುವುದೆಂದು ಸಂದೇಹ ಪಡಬೇಕಾಗಿಲ್ಲ. ಅದು ಧರ್ಮಭೂತಜ್ಞಾನದ ಮುಖಾಂತರ ಸಾಧ್ಯ

ನ್ನೈವ ಸೌಭರಿಪ್ರಭೃತೀನಾಂ ಮುಕ್ತಾನಾಂ ಚ ಯುಗಪದನೇಕಶರೀರಪರಿಗ್ರಹೋಽಪಿ ಸಂಭವತಿ ।

೫. ಸ ಚ ನಿತ್ಯಃ । ಪೂರ್ವಾನುಭೂತಾರ್ಥಪ್ರತಿಸಂಧಾನಾತ್ । ನಿತ್ಯಶ್ಚೇತ್ 'ಜೀವಃ ಉತ್ಪನ್ನಃ' 'ಜೀವಃ ನಷ್ಟಃ'।, ಇತಿ ಪ್ರತೀತಿಃ ಕಥಂ ಇತಿ ಚೇತ್ ನ । ಜೀವಸ್ಯ ದೇಹಸಂಬಂಧಃ ಉತ್ಪತ್ತಿಃ ತದ್ವಿಯೋಗೋ ನಾಶ ಇತಿ ಪ್ರತಿಪಾದನಾತ್ । ಜೀವಸ್ವರೂಪಂ ನಿತ್ಯಮೇವ ।

೬. ಸ ಚ ಪ್ರತಿಶರೀರಂ ಭಿನ್ನಃ । ಏಕಪರಿಮಾಣೇಷು–ಅನೇಕೇಷು ಸುವರ್ಣಘಟೇಷು–'ಏಕೋಘಟ' ಇತಿ ಪ್ರತೀತಿವತ್, ವ್ರೀಹಿರಾಶೌ 'ಏಕೋ ವ್ರೀಹಿಃ' ಇತಿವಚ್ಚ ಜ್ಞಾನೈಕಾಕಾರತಯಾ ಏಕತ್ವವ್ಯವಹಾರಃ । ನ ತು ಸ್ವರೂಪೈಕ್ಯಂ ಪ್ರಮಾಣವಿರೋಧಾತ್ ।

---

ವಾಗುತ್ತದೆ[119]. ಆದುದರಿಂದಲೇ ಸೌಭರಿ ಮುಂತಾದವರುಗಳೂ ಹಾಗೆಯೇ ಮುಕ್ತಾತ್ಮರುಗಳೂ ಏಕಕಾಲದಲ್ಲಿ ಅನೇಕ ಶರೀರಗಳನ್ನು ಪಡೆಯುವುದು ಸಾಧ್ಯವಾಗುತ್ತದೆ.

೫. ಈ ಆತ್ಮನು ನಿತ್ಯನು. ಏಕೆಂದರೆ ಹಿಂದೆ ಅನುಭವಿಸಿದ ವಿಷಯಗಳನ್ನು ಅವನು ನೆನೆಸಿಕೊಳ್ಳುತ್ತಾನೆ. ಹೀಗೆ ನಿತ್ಯನಾದರೆ 'ಜೀವನು ಹುಟ್ಟಿದನು, ನಷ್ಟನಾದನು' ಎಂಬ ಅನುಭವ ಹೇಗಾದೀತು ಎಂದರೆ ಹೀಗೆ ಹೇಳುತ್ತೇವೆ. ಜೀವನಿಗೆ ದೇಹದೊಡನೆ ಸಂಬಂಧವಾಗುವುದೇ ಉತ್ಪತ್ತಿಯು. ದೇಹಸಂಬಂಧದ ನಾಶವೇ ವಿನಾಶ. ಆದರೆ ಜೀವಸ್ವರೂಪವು ಮಾತ್ರ ನಿತ್ಯವಾದುದೇ ಆಗಿದೆ[120].

೬. ಒಂದೊಂದು ಶರೀರದಲ್ಲಿಯೂ ಆತ್ಮನು ಬೇರೆ ಬೇರೆಯಾಗಿದ್ದಾನೆ. ಒಂದೇ ಪರಿಮಾಣದ ಅನೇಕಾನೇಕ ಸ್ವರ್ಣಪಾತ್ರೆಗಳನ್ನು 'ಪಾತ್ರೆಯೆಲ್ಲಾ ಒಂದು' ಎಂದು ಹೇಳುವಂತೆ, ಧಾನ್ಯದ ರಾಶಿಯಲ್ಲಿ 'ಧಾನ್ಯವೆಲ್ಲ ಒಂದು' ಎಂದು ಹೇಳುವಂತೆ, ಇವೆಲ್ಲಾ ಒಂದೇ ವಿಧವಾದ ಜ್ಞಾನಾಕಾರವನ್ನು ಹೊಂದಿರುವುದರಿಂದ ಏಕತ್ವವ್ಯವಹಾರ ಬಂದಿದೆ[121]. ಆದರೆ ಸ್ವರೂಪತಃ ಅವೆಲ್ಲಾ ಒಂದೇ ಆಗಿಲ್ಲ. ಅಂಥ ಸ್ವರೂಪೈಕ್ಯಕ್ಕೆ ಪ್ರಮಾಣಗಳು ವಿರುದ್ಧವಾಗಿವೆ.

೭. ಸ್ವತಃ ಸುಖೀ, ಉಪಾಧಿವಶಾತ್ ಸಂಸಾರಃ : ಅಯಂ ಚ ಕರ್ತಾ ಭೋಕ್ತಾ ಶರೀರೀ ಶರೀರಂ ಚ ಭವತಿ । ಪ್ರಕೃತ್ಯಪೇಕ್ಷಾಯಾ ಶರೀರೀ, ಈಶ್ವರಾಪೇಕ್ಷಯಾ ಶರೀರಂ । ತಸ್ಯ ಪ್ರತ್ಯಕ್ಷಶ್ರುತಿಭ್ಯಾಂ ಸ್ವಯಂಪ್ರಕಾಶತ್ವಂ ಚ ಸಿದ್ಧಂ । ಪ್ರಯೋಗಶ್ಚ–'ಆತ್ಮಾ ಸ್ವಯಂಪ್ರಕಾಶಃ ಜ್ಞಾನತ್ವಾತ್ ಧರ್ಮಭೂತ ಜ್ಞಾನವತ್' ಇತಿ । ಜ್ಞಾನತ್ವ–ಅಣುತ್ವ–ಅಮಲತ್ವಾದಯಃ ಏತಸ್ಯ ಸ್ವರೂಪ ನಿರೂಪಕ ಧರ್ಮಾಃ ।

೮. ಏತೇನ ಜ್ಞಾನಸ್ಯ ಕ್ಷಣಿಕತ್ವಾತ್ ಕ್ಷಣಿಕಸಂತಾನರೂಪ ಆತ್ಮೇತಿ ಬೌದ್ಧಪಕ್ಷಃ, ಭೂತಚತುಷ್ಟಯಾತ್ಮಕತ್ವಾತ್ ದೇಹಸ್ಯ ದೇಹಾವಧಿಕ ಆತ್ಮೇತಿ ಚಾರ್ವಾಕಪಕ್ಷಃ, ಗಜದೇಹೇ ಗಜಪರಿಮಾಣಃ ಪಿಪೀಲಿಕದೇಹೇ ತತ್ಪರಿ

---

೭. ಆತ್ಮನು ಸ್ವತಃ ಸುಖಿ. ಆದರೆ ಜನನಮರಣರೂಪವಾದ ಉಪಾಧಿಗಳ ಕಾರಣ ಸಂಸಾರ ಬಂದಿದೆ. ಈ ಆತ್ಮನು ಕರ್ಮ ಮಾಡುವವನಾಗಿದ್ದಾನೆ (ಕರ್ತಾ)[122]. ತನ್ನ ಕರ್ಮದ ಫಲವನ್ನು ಅನುಭವಿಸುವವನಾಗಿದ್ದಾನೆ (ಭೋಕ್ತಾ). ಶರೀರಿಯೂ ಆಗಿದ್ದಾನೆ ಶರೀರವೂ ಆಗಿದ್ದಾನೆ. ಪ್ರಕೃತಿ ಸಂಬಂಧದಿಂದ ಶರೀರೀ ಈಶ್ವರನಿಗೆ ಶರೀರವಾಗಿದ್ದಾನೆ. ಈ ಆತ್ಮನು ಸ್ವಯಂ ಪ್ರಕಾಶನೆಂಬುದು ಪ್ರತ್ಯಕ್ಷ ಪ್ರಮಾಣದಿಂದಲೂ ಶ್ರುತಿಗಳಿಂದಲೂ ಸಿದ್ಧವಾಗಿದೆ. ಇದನ್ನು ಅನುಮಾನದಿಂದಲೂ ಸಾಧಿಸಬಹುದು. ಹೇಗೆಂದರೆ,

'ಧರ್ಮಭೂತಜ್ಞಾನದಂತೆ ಆತ್ಮನೂ ಜ್ಞಾನಸ್ವರೂಪನಾಗಿರುವುದರಿಂದ ಸ್ವಯಂಪ್ರಕಾಶನಾಗಿದ್ದಾನೆ.'

ಜ್ಞಾನತ್ವ, ಅಣುತ್ತ್ವ ಮತ್ತು ಅಮಲತ್ತ್ವ–ಇವು ಈ ಆತ್ಮನ ಸ್ವರೂಪ ನಿರೂಪಕ ಧರ್ಮಗಳು.

೮. ಜ್ಞಾನವು ಕ್ಷಣಿಕವಾದ ಕಾರಣ ಅಂತಹ ಕ್ಷಣಿಕವಾದ ಜ್ಞಾನ ಪ್ರವಾಹದ ರೂಪವೇ ಆತ್ಮವೆಂಬ ಬೌದ್ಧಪಕ್ಷವೂ, ಶರೀರವು ನಾಲ್ಕು ಭೂತಗಳಿಂದಾದ ಕಾರಣ ಆತ್ಮನು ದೇಹದ ಅವಧಿಯನ್ನೇ ಅವಧಿಯನ್ನಾಗಿ ಹೊಂದಿರುವನೆಂಬ ಚಾರ್ವಾಕ ಪಕ್ಷವೂ, ಆನೆಯ ದೇಹದಲ್ಲಿ ಆನೆಯ ಗಾತ್ರವನ್ನೂ ಇರುವೆಯ ದೇಹದಲ್ಲಿ ಇರುವೆಯ ಗಾತ್ರವನ್ನೂ ಹೊಂದಿರುವುದರಿಂದ ಆತ್ಮನು

ಮಾಣಃ ಅತೋ ದೇಹಪರಿಮಾಣ ಆತ್ಮೇತಿ ಜೈನಪಕ್ಷಃ, ಕರ್ತೃತ್ವಭೋಕ್ತೃತ್ವಾದಿಕಂ ಪ್ರಕೃತೇರೇವ ನ ತು ಪುರುಷಸ್ಯೇತಿ ಸಾಂಖ್ಯಪಕ್ಷಃ, ಬ್ರಹ್ಮಾಂಶೋ ಜೀವ ಇತಿ ಯಾದವಪಕ್ಷಃ, ಸೋಪಾಧಿಬ್ರಹ್ಮಖಂಡೋ ಜೀವ ಇತಿ ಭಾಸ್ಕರ ಪಕ್ಷಃ, ಅವಿದ್ಯಾಕಲ್ಪಿತ ಏಕಜೀವವಾದಪಕ್ಷಃ, ಅಂತಃಕರಣಾವಚ್ಛಿನ್ನಾನೇಕ ಜೀವವಾದಪಕ್ಷ–ಇತ್ಯೇವಮಾದಯೋ ವಿರುದ್ಧಪಕ್ಷಾ ನಿರಸ್ತಾಃ । ವಿಭುತ್ವವಾದ ಪಕ್ಷೋಽಪಿ ।

೯. ನನು ಜೀವಸ್ಯ ವಿಭುತ್ವಾನಂಗೀಕಾರೇ ಅದೃಷ್ಟಜನಿತದೇಶಾಂತರಫಲೋಪಲಬ್ಧಿಃ ಕಥಂ ಇತಿ ಚೇತ್ ನ । ಜೀವಸ್ಯ ಸಂಬಂಧಾಭಾವೇಽಪಿ ಅದೃಷ್ಟವಶಾದೇವ ಉಪಪದ್ಯತೇ । ಅದೃಷ್ಟಂ ನಾಮ ಭಗವತ್ಪ್ರೀತ್ಯಪ್ರೀತಿಜನಕ-ಜೀವಕರ್ತೃಕ–ಕರ್ಮವಿಶೇಷಜನ್ಯೋ ಜ್ಞಾನವಿಶೇಷಃ । ಸ ವಿಶೇಷೋ ಭಗ

---

ಶರೀರಕ್ಕನುಗುಣವಾದ ಗಾತ್ರವನ್ನು ಹೊಂದಿರುವನೆಂಬ ಜೈನಪಕ್ಷವೂ, ಕರ್ತೃತ್ವ, ಭೋಕ್ತೃತ್ವ ಮುಂತಾದವು ಪ್ರಕೃತಿಗೇ ವಿನಾ ಪುರುಷನಿಗಿಲ್ಲವೆಂಬ ಸಾಂಖ್ಯಪಕ್ಷವೂ, ಬ್ರಹ್ಮವಸ್ತುವಿನ ಅಂಶವೇ ಜೀವನೆಂಬ ಯಾದವ ಪ್ರಕಾಶರ ಪಕ್ಷವೂ, ಉಪಾಧಿಯಿಂದ ಕೂಡಿದ ಬ್ರಹ್ಮವಸ್ತುವಿನ ಭಾಗವೇ ಆತ್ಮನೆಂಬ ಭಾಸ್ಕರ ಪಕ್ಷವೂ, ಆತ್ಮನು ಅವಿದ್ಯೆಯಿಂದ ಪರಿಕಲ್ಪಿತವಾದವನೆಂಬ ಏಕಜೀವ ವಾದವೂ, ಅಂತಃಕರಣದಿಂದ ಅವಚ್ಛಿನ್ನವಾದ ಚೈತನ್ಯವೇ ಜೀವನೆಂಬ ಅನೇಕ ಜೀವವಾದ ಪಕ್ಷವೂ ಮೇಲೆ ಹೇಳಿದ ಆತ್ಮಲಕ್ಷಣಗಳಿಂದ ನಿರಾಕರಿಸಲ್ಪಟ್ಟವೆ[123]. ಆತ್ಮನು ವಿಭುವೆಂಬ ಪಕ್ಷವನ್ನೂ ಹಾಗೆಯೇ ತಿರಸ್ಕರಿಸಲಾಗಿದೆ.

೯. ಜೀವಾತ್ಮನಿಗೆ ವಿಭುತ್ವವನ್ನಂಗೀಕರಿಸದಿದ್ದರೆ ದೇಶಾಂತರಗಳಲ್ಲಿ ಅದೃಷ್ಟದ ಕಾರಣ ಉಂಟಾಗುವ ಫಲಗಳ ಪ್ರಾಪ್ತಿ ಹೇಗಾಗುವುದು ಎಂದು ಆಕ್ಷೇಪಿಸಿದರೆ ಅದಕ್ಕೇನೂ ಬಾಧಕವಿಲ್ಲವೆನ್ನುತ್ತೇವೆ. ಜೀವನಿಗೆ ದೇಶಾಂತರಗಳ ಸಂಬಂಧವು ನೇರವಾಗಿ ಉಂಟಾಗದಿದ್ದರೂ ಆ ಅದೃಷ್ಟದ ಕಾರಣವೇ ಅಲ್ಲಿನ ಫಲಪ್ರಾಪ್ತಿಯು ಸಂಭವಿಸುವುದು. ಅದೃಷ್ಟವೆಂಬುದು ಜೀವಾತ್ಮನು ಮಾಡಿದ ಕರ್ಮವಿಶೇಷದಿಂದ ಉಂಟಾಗುವ ಒಂದು ರೀತಿಯ ಜ್ಞಾನವಿಶೇಷ. ಇದು ಭಗವಂತನ ಪ್ರೀತಿಯನ್ನೋ ಕೋಪವನ್ನೋ ಉಂಟುಮಾಡುತ್ತದೆ. ಈ ಜ್ಞಾನ

ವತ್ಸಂಕಲ್ಪ ಏವ ವಿಭುಸ್ವರೂಪಂ ಭಗವಂತಮಾಶ್ರಿತಃ। ಅತಃ ಫಲೋಪಲಬ್ಧಿರೇವೇತಿ ನ ವಿರೋಧಃ।

೧೦. ಸ ಜೀವಸ್ತ್ರಿವಿಧಃ–ಬದ್ಧಮುಕ್ತನಿತ್ಯಭೇದಾತ್। ತತ್ರ ಬದ್ಧಾ ನಾಮ ಅನಿವೃತ್ತಸಂಸಾರಾಃ। ತೇ ಚತುರ್ದಶಭುವನಾತ್ಮಕ-ಅಂಡಕಟಾಹವರ್ತಿನೋ ಬ್ರಹ್ಮಾದಿಕೀಟಪರ್ಯಂತಾಃ ಚೇತನವಿಶೇಷಾಃ।

೧೧. ಶ್ರೀಮನ್ನಾರಾಯಣನಾಭಿಕಮಲಾತ್ ಉತ್ಪನ್ನೋ ಬ್ರಹ್ಮಾ। ಬ್ರಹ್ಮಣೋ ರುದ್ರಃ। ಪುನರ್ಬ್ರಹ್ಮಣಃ ಸನಕಾದಿಯೋಗಿನೋ ನಾರದಾದಿದೇವಋಷಯೋ ವಸಿಷ್ಠಭೃಗ್ವಾದಿ ಬ್ರಹ್ಮಋಷಯಃ ಪುಲಸ್ತ್ಯಮರೀಚಿದಕ್ಷಕಶ್ಯಪಾದಿ–ನವಪ್ರಜಾಪತಯೋ ಬಭೂವುಃ। ತೇಭ್ಯೋ ದೇವಾ ದಿಕ್ಪಾಲಾಶ್ಚ

---

ವಿಶೇಷವು ಭಗವತ್ಸಂಕಲ್ಪವೇ ಆಗಿದೆ. ಆದಕ್ಕೆ ವಿಭುಸ್ವರೂಪಿಯಾದ ಭಗವಂತನು ಆಶ್ರಯನಾಗಿದ್ದಾನೆ ಆ ದ್ದ ರಿಂ ದ ಲೇ ದೇಶಾಂತರಗಳಲ್ಲಿನ ಫಲಪ್ರಾಪ್ತಿಯು ತಪ್ಪದೆ ಉಂಟಾಗುತ್ತದೆ. ಹೀಗೆ ಯಾವ ವಿರೋಧವೂ ಇಲ್ಲಿಲ್ಲ.

೧೦. ಜೀವರು ಬದ್ಧ, ಮುಕ್ತ, ನಿತ್ಯರೆಂದು ಮೂರು ವಿಧ. ಸಂಸಾರವು ಇನ್ನೂ ನಿವೃತ್ತಿಯಾಗದೆ ಇರುವವರು ಬದ್ಧರು. ಅವರು ಹದಿನಾಲ್ಕು ಲೋಕಗಳನ್ನೊಳಗೊಂಡಿರುವ ಅಂಡಕಟಾಹದಲ್ಲಿ ಇರುವ ಬ್ರಹ್ಮನಿಂದ ಹಿಡಿದು ಕೀಟದವರೆಗಿನ ಚೇತನವಿಶೇಷಗಳಾಗಿದ್ದಾರೆ.

೧೧. ಶ್ರೀಮನ್ನಾರಾಯಣನ ನಾಭಿಕಮಲದಿಂದ ಬ್ರಹ್ಮನು ಹುಟ್ಟಿದನು. ಬ್ರಹ್ಮನಿಂದ ರುದ್ರನು ಹುಟ್ಟಿದನು. ಮತ್ತೆ ಬ್ರಹ್ಮನಿಂದ ಸನಕಾದಿ ಯೋಗಿಗಳೂ ನಾರದನೇ ಮೊದಲಾದ ದೇವಋಷಿಗಳೂ, ಪುಲಸ್ತ್ಯ, ಮರೀಚಿ, ದಕ್ಷ, ಕಶ್ಯಪ ಮೊದಲಾದ ಒಂಭತ್ತು ಜನ ಪ್ರಜಾಪತಿಗಳೂ ಜನಿಸಿದರು. ಅವರಿಂದ ದೇವತೆಗಳೂ, ದಿಕ್ಪಾಲಕರೂ, ಹದಿನಾಲ್ಕುಮಂದಿ ಇಂದ್ರರೂ, ಹದಿನಾಲ್ಕು ಮನುಗಳೂ ಅಸುರರೂ, ಪಿತೃಗಳೂ, ಸಿದ್ಧರು, ಗಂಧರ್ವರು, ಕಿನ್ನರರು, ಕಿಂಪುರುಷರು ವಿದ್ಯಾಧರರು ಮೊದಲಾದವರೂ, ವಸುಗಳು, ರುದ್ರರು, ಆದಿತ್ಯರು, ಅಶ್ವಿನೀ

ತುರ್ದಶೇಂದ್ರಾಃ ಚತುರ್ದಶಮನವಃ ಅಸುರಾಃ ಪಿತರಃ ಸಿದ್ಧ ಗಂಧರ್ವ ಕಿನ್ನರ ಕಿಂಪುರುಷ ವಿದ್ಯಾಧರಾದಯೊ ವಸವೋ ರುದ್ರಾ ಆದಿತ್ಯಾ ಅಶ್ವಿನೌ ಚ ದಾನವ ಯಕ್ಷರಾಕ್ಷಸಪಿಶಾಚ ಗುಹ್ಯಕಾದಯಃ। ಏವಂ ದೇವಯೋನಯಃ।

೧೨. ಮನುಷ್ಯಾ ಅಪಿ ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರಾದಿಜಾತಿ ಭೇದಾತ್ ಬಹುವಿಧಾಃ। ತಿರ್ಯಂಚೋऽಪಿ ಪಶುಮೃಗಪಕ್ಷಿಸರೀಸೃಪಪತಂಗ ಕೀಟಾದಿಭೇದಾತ್ ಬಹುವಿಧಾಃ। ಸ್ಥಾವರಾ ಅಪಿ ವೃಕ್ಷಗುಲ್ಮಲತಾವೀರುಧ ತೃಣಾದಿಭೇದಾತ್ ಬಹುವಿಧಾಃ। ವೃಕ್ಷಾದೀನಾಂ ಜಲಾಹರಣೋಪಯುಕ್ತ ಕಿಂಚಿತ್‌ಜ್ಞಾನ ಸಂಬಂಧೋऽಸ್ತ್ಯೇವ। 'ಅಪ್ರಾಣಿಮತ್ಸು ಸ್ವಲ್ಪಾ ಸಾ' ಇತ್ಯುಕ್ತ ತ್ವಾತ್। ಅತೋ ದೇವಮನುಷ್ಯತಿರ್ಯಕ್‌ಸ್ಥಾವರಭೇದಭಿನ್ನಾಃ ಬದ್ಧಾಃ।

೧೩. ಜರಾಯುಜ–ಅಂಡಜ–ಉದ್ಭಿಜ್ಜ–ಸ್ವೇದಜಾಶ್ಚ ಭವಂತಿ। ದೇವ ಮನುಷ್ಯಾ ಜರಾಯುಜಾಃ। ತೇಷು ಬ್ರಹ್ಮರುದ್ರಾದಯಃ ಸನಕಾದಯಶ್ಚ

---

ದೇವತೆಗಳೂ ಹಾಗೆಯೇ ದಾನವ, ಯಕ್ಷ, ರಾಕ್ಷಸ, ಪಿಶಾಚ, ಗುಹ್ಯಕ ಮೊದಲಾದವರೂ ಜನಿಸಿದರು. ಹೀಗೆ ದೇವತೆಗಳ ಕುಲಗಳು ಹುಟ್ಟಿದವು.

೧೨. ಮನುಷ್ಯರೂ ಸಹ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ಅನೇಕ ಬಗೆಯಾಗಿದ್ದಾರೆ. ಪ್ರಾಣಿಗಳೂ ಸಹ ಹಸುಗಳು, ಮೃಗಗಳು, ಪಕ್ಷಿಗಳು, ಸರ್ಪಗಳು, ಪತಂಗಗಳು, ಕೀಟಗಳು ಎಂಬುದಾಗಿ ಬಹುವಿಧ ವಾಗಿವೆ. ಸ್ಥಾವರಗಳೂ ಸಹ ವೃಕ್ಷ, ಗುಲ್ಮ, ಲತೆ, ಪೊದೆ, ಹುಲ್ಲು ಎಂಬುದಾಗಿ ಅನೇಕ ಬಗೆಯಾಗಿವೆ. ಮರವೇ ಮೊದಲಾದವುಗಳಿಗೂ ಜಲವನ್ನು ಹೀರುವುದರಲ್ಲಿ ಉಪಯುಕ್ತವಾಗುವಂತಹ ಅತ್ಯಲ್ಪವಾದ ಜ್ಞಾನ ಸಂಬಂಧವಿದೆ. 'ಪ್ರಾಣವಿಲ್ಲದವರಲ್ಲಿ ಜ್ಞಾನವು ಅತ್ಯಲ್ಪವಾಗಿದೆ' ಎಂದು ಹೇಳಿರುವುದು ಇದಕ್ಕೆ ಸಾಕ್ಷಿ. ಈ ರೀತಿಯಲ್ಲಿ ಬದ್ಧರು—ದೇವ, ಮನುಷ್ಯ, ತಿರ್ಯಕ್, ಸ್ಥಾವರ ಎಂದು ನಾಲ್ಕುವಿಧವಾಗಿದ್ದಾರೆ.

೧೩. ಜರಾಯುಜ, ಅಂಡಜ, ಉದ್ಭಿಜ್ಜ ಮತ್ತು ಸ್ವೇದಜಗಳೆಂದೂ ಇವರನ್ನು ಪುನಃ ವಿಭಾಗ ಮಾಡಬಹುದು. ದೇವತೆಗಳೂ ಮನುಷ್ಯರೂ

ದ್ರೌಪದೀ ಧೃಷ್ಟದ್ಯುಮ್ನಾದಯೋ ಭೂತವೇತಾಲಾದಯಶ್ಚ ಅಯೋನಿಜಾಃ। ತಿರ್ಯಗಾದಯಶ್ಚ ಜರಾಯುಜಾ ಅಂಡಜಾಃ ಸ್ವೇದಜಾಶ್ಚ ಭವಂತಿ। ಸ್ಥಾವ ರಾದಯಃ ಉದ್ಭಿಜ್ಜಾಃ।

೧೪. ಏವಂ ಭೂತಾ ಬದ್ಧಾ ಬೀಜಾಂಕುರನ್ಯಾಯೇನ ವಿಷಯ ಪ್ರವಾಹತಯಾ ಅನಾದಿಕಾಲಪ್ರವೃತ್ತ–ಅವಿದ್ಯಾ – ಕರ್ಮವಾಸನಾ–ರುಚಿ–ಪ್ರಕೃತಿಸಂಬಂಧೈಃ ಚಕ್ರವತ್ಪರಿವರ್ತಮಾನೈಃ ಗರ್ಭಜನ್ಮಬಾಲ್ಯಯೌವ್ವನ ಜಾಗರಸ್ವಪ್ನಸುಷುಪ್ತಿಮೂರ್ಛಾ – ಜರಾಮರಣ – ಸ್ವರ್ಗ – ನರಕಗಮನಾದಿ–ವಿವಿಧವಿಚಿತ್ರಾವಸ್ಥಾವಂತಃ ಅನಾದ್ಯನಂತ ಪ್ರಕಾರ–ಅತಿ ದುಸ್ಸಹ ತಾಪತ್ರ ಯಾಭಿತಪ್ತಾಃ ಸ್ವತಃ ಪ್ರಾಪ್ತಭಗವದನುಭವವಿಚ್ಛೇದವಂತಶ್ಚ।

---

ಜರಾಯುಜರು (ಗರ್ಭಸಂಭೂತರು). ಇವರಲ್ಲಿ ಬ್ರಹ್ಮ, ರುದ್ರ ಮುಂತಾದವರು, ಸನಕ ಮೊದಲಾದವರು ದ್ರೌಪದೀ, ಧೃಷ್ಟದ್ಯುಮ್ನ ಮುಂತಾದವರು, ಭೂತ, ಭೇತಾಳ ಮೊದಲಾದವರು ಅಯೋನಿಜರು. ಪ್ರಾಣಿಗಳೇ ಮೊದಲಾದವು ಜರಾ ಯುಜಗಳೂ, ಅಂಡಜಗಳೂ, ಸ್ವೇದಜಗಳೂ ಆಗಿವೆ. ಸ್ಥಾವರವೇ ಮೊದಲಾ ದವು ಉದ್ಭಿಜ್ಜಗಳು (ಬೀಜದಿಂದ ಮೊಳೆತು ಬೆಳೆಯುವುವು).

೧೪. ಅನಾದಿ ಕಾಲದಿಂದ ಆರಂಭವಾದ ಅವಿದ್ಯೆ, ಕರ್ಮ, ವಾಸನಾ, ರುಚಿ, ಪ್ರಕೃತಿಸಂಬಂಧ ಮೊದಲಾದುವುಗಳ ಕಾರಣ ಚಕ್ರದೋಪಾದಿಯಲ್ಲಿ ಸುತ್ತುತ್ತಿರುವ–ಬೀಜಾಂಕುರನ್ಯಾಯದಂತೆ ಕೊನೆಯಿಲ್ಲದ–ವಿಷಮ ಪ್ರವಾಹದ ದೆಸೆಯಿಂದ ಮೇಲೆ ಹೇಳಿದಂತಹ ಈ ಬದ್ಧರು ಗರ್ಭ, ಜನ್ಮ, ಬಾಲ್ಯ, ಯೌವನ ಜಾಗರ, ಸ್ವಪ್ನ, ಸುಷುಪ್ತಿ, ಮೂರ್ಛೆ, ಮುಪ್ಪು, ಮರಣ, ಸ್ವರ್ಗ, ನರಕ ಗಮನ ಮೊದಲಾದ ವಿವಿಧವಾದ ವಿಚಿತ್ರಾವಸ್ಥೆಗಳುಳ್ಳವರಾಗಿ ಮೊದಲು ಕೊನೆ ಯಿಲ್ಲದವೂ ಬಗೆಬಗೆಯವೂ ಅತಿದುಸ್ಸಹವೂ ಆದ ತಾಪತ್ರಯಗಳಿಂದ ಪೀಡಿತರಾಗಿ ಸ್ವತಃಪ್ರಾಪ್ತವಾದ ಭಗವದನುಭವದಿಂದ ವಿಚ್ಛೇದಹೊಂದಿದ ವರಾಗಿದ್ದಾರೆ.

೧೫. ತೇ ದ್ವಿವಿಧಾಃ–ಶಾಸ್ತ್ರವಶ್ಯಾಃ ತದವಶ್ಯಾಶ್ಚೇತಿ । ತಯೋಃ ಮಧ್ಯೇ ಕರಣಾಯತ್ತಜ್ಞಾನಾನಾಂ ಬದ್ಧಾನಾಂ ಶಾಸ್ತ್ರವಶ್ಯತಾ ಅಸ್ತಿ । ತಿರ್ಯಕ್ ಸ್ಥಾವರಾದೀನಾಂ ತನ್ನಾಸ್ತಿ । ಶಾಸ್ತ್ರವಶ್ಯಾ ದ್ವಿವಿಧಾಃ ಬುಭುಕ್ಷವೋ ಮುಮುಕ್ಷವಶ್ಚೇತಿ । ತತ್ರ ಬುಭುಕ್ಷವಃ ತ್ರೈವರ್ಗಿಕಪುರುಷಾರ್ಥನಿಷ್ಠಾಃ ಪುರುಷಾಃ । ತೇ ದ್ವಿವಿಧಾಃ ಅರ್ಥಕಾಮಪರಾ ಧರ್ಮಪರಾಶ್ಚೇತಿ । ಕೇವಲಾರ್ಥಕಾಮಪರಾ ದೇಹಾತ್ಮಾಭಿಮಾನವಂತಃ । ಧರ್ಮಪರಾಶ್ಚ–'ಅಲೌಕಿಕ ಶ್ರೇಯಃ ಸಾಧನಂ ಧರ್ಮಃ', 'ಚೋದನಾಲಕ್ಷಣೋಽರ್ಥೋ ಧರ್ಮಃ', ಇತಿ ಲಕ್ಷಣಲಕ್ಷಿತಯಜ್ಞದಾನತಪಸ್ತೀರ್ಥಯಾತ್ರಾದಿನಿಷ್ಠಾಃ । ತೇ ಚ ದೇಹಾತಿರಿಕ್ತಾತ್ಮನಃ ಪರಲೋಕೋ ಅಸ್ತೀತಿ ಜ್ಞಾನವಂತಃ । ಧರ್ಮ ಪರಾ ದ್ವಿವಿಧಾಃ ದೇವತಾಂತರಪರಾ ಭಗವತ್ಪರಾಶ್ಚೇತಿ । ದೇವತಾಂತರಪರಾ ಬ್ರಹ್ಮರುದ್ರೇಂ

---

೧೫. ಈ ಬದ್ಧರು ಶಾಸ್ತ್ರವಶ್ಯರು, ಶಾಸ್ತ್ರವಶ್ಯರಲ್ಲದವರು ಎಂದು ಎರಡುಬಗೆ. ಯಾರ ಜ್ಞಾನವು ಅವರವರ ಇಂದ್ರಿಯಗಳಿಗೆ ಅಧೀನವಾಗಿದೆಯೋ ಅವರಿಗೆ ಶಾಸ್ತ್ರವಶ್ಯತೆ ಉಂಟು. ಪ್ರಾಣಿಗಳಿಗೂ ಸ್ಥಾವರಗಳಿಗೂ ಇದು ಸಂಭವಿಸುವುದಿಲ್ಲ. ಶಾಸ್ತ್ರಗಳಿಗೆ ಅಧೀನರಾಗಿರುವವರೂ ಎರಡು ಬಗೆಯಾಗಿದ್ದಾರೆ. ಇವರು ಭೋಗಾಪೇಕ್ಷಿಗಳು ಮತ್ತು ಮೋಕ್ಷಾಪೇಕ್ಷಿಗಳು ಎಂಬುವರಾಗಿದ್ದಾರೆ. ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗದ ಫಲಗಳಲ್ಲಿ ನಿಷ್ಠೆಯುಳ್ಳವರು ಭೋಗಾಪೇಕ್ಷಿಗಳು ಅಥವಾ ಬುಭುಕ್ಷುಗಳು. ಇವರೂ ಸಹ ಅರ್ಥಕಾಮ ಪರರು ಮತ್ತು ಧರ್ಮಪರರು ಎಂದು ಎರಡು ವಿಧ. ಕೇವಲ ಅರ್ಥಕಾಮಪರರು ದೇಹವೇ ಆತ್ಮವೆಂಬ ಅಭಿಮಾನವನ್ನು ಹೊಂದಿರುವರು. ಧರ್ಮಪರರಾದರೋ 'ಅಲೌಕಿಕವಾದ ಶ್ರೇಯಸ್ಸಿಗೆ ಧರ್ಮವು ಸಾಧನ' ಎಂಬ ಲಕ್ಷಣಗಳಿಂದ ಹೇಳಲ್ಪಟ್ಟ ಯಜ್ಞ, ದಾನ, ತಪಸ್ಸು, ತೀರ್ಥಯಾತ್ರೆ ಮೊದಲಾದುವುಗಳಲ್ಲಿ ನಿಷ್ಠೆಯನ್ನು ಹೊಂದಿರುತ್ತಾರೆ. ದೇಹಕ್ಕಿಂತ ಬೇರೆಯಾದ ಆತ್ಮನಿಗೆ ಪರಲೋಕವೊಂದುಂಟೆಂಬ ನಂಬಿಕೆಯನ್ನು ಇವರು ಹೊಂದಿರುತ್ತಾರೆ. ಧರ್ಮಪರರೂ ಎರಡು ವಿಧ–ದೇವತಾಂತರಪರರು ಮತ್ತು ಭಗವತ್ಪರರು ಎಂದು. ಬ್ರಹ್ಮ, ರುದ್ರ, ಇಂದ್ರ, ಅಗ್ನಿ ಮೊದಲಾದ ಇತರ ದೇವತೆಗಳನ್ನು ಆರಾಧಿಸುವವರು ದೇವತಾಂತರಪರರು. ಆರ್ತ, ಜಿಜ್ಞಾಸು, ಅರ್ಥಾರ್ಥೀ ಎಂದು

ದ್ರ—ಆಗ್ನ್ಯಾರಾಧಾನಪರಾಃ ; ಭಗವತ್ಪರಾಶ್ಚ—'ಆರ್ತೋ ಜಿಜ್ಞಾಸುರರ್ಥಾರ್ಥೀ' ಇತ್ಯುಕ್ತಾಧಿಕಾರಿಣಃ । ಆರ್ತೋ ಭ್ರಷ್ಟೈಶ್ವರ್ಯಕಾಮಃ । ಅರ್ಥಾರ್ಥೀ ತು ಅಪೂರ್ವೈಶ್ವರ್ಯಕಾಮಃ ।

೧೬. ಮುಮುಕ್ಷವೋ ದ್ವಿವಿಧಾಃ—ಕೈವಲ್ಯಪರಾ ಮೋಕ್ಷಪರಾಶ್ಚೇತಿ । ಕೈವಲ್ಯಂ ನಾಮ ಜ್ಞಾನಯೋಗಾತ್ ಪ್ರಕೃತಿವಿಯುಕ್ತಸ್ವಾತ್ಮಾನುಭವ ರೂಪಂ । ಸೋಽನುಭವಃ ಅರ್ಚಿರಾದಿಮಾರ್ಗೇಣ ಪರಮಂ ಪದಂ ಗತವತ ಏವ ಕ್ವಚಿತ್ ಕೋಣೇ ಪತಿತ್ಯಕ್ತಪತ್ನೀನ್ಯಾಯೇನ ಭಗವದನುಭವವ್ಯತಿರಿಕ್ತ ಸ್ವಾತ್ಮಾನುಭವ ಇತ್ಯಾಹುಃ । ಕೇಚಿತ್ ಅರ್ಚಿರಾದಿ ಮಾರ್ಗೇಣ ಗತಸ್ಯ ಪುನರಾವೃತ್ತ್ಯಶ್ರವಣಾತ್ ಪ್ರಕೃತಿಮಂಡಲ ಏವ ಕ್ವಚಿದ್ದೇಶೇ ಸ್ವಾತ್ಮಾನುಭವ ಇತ್ಯಪ್ಯಾಹುಃ ।

೧೭. ಮೋಕ್ಷಪರಾಶ್ಚ ದ್ವಿವಿಧಾಃ—ಭಕ್ತಾಃ ಪ್ರಪನ್ನಾಶ್ಚೇತಿ, ಭಕ್ತಾಃ

---

ಹೇಳಿರುವ ಅಧಿಕಾರಿಗಳು ಭಗವತ್ಪರರು. ನಷ್ಟವಾದ ಐಶ್ವರ್ಯವನ್ನು ಬಯಸುವವನು ಆರ್ತ. ಹಿಂದೆ ಪಡೆಯದೆ ಇದ್ದ ಐಶ್ವರ್ಯವನ್ನು ಬಯಸುವವನು ಅರ್ಥಾರ್ಥೀ.

೧೬. ಮೋಕ್ಷಾಪೇಕ್ಷಿಗಳೂ ಎರಡು ಬಗೆಯಾಗಿದ್ದಾರೆ ಕೈವಲ್ಯಪರರು ಮತ್ತು ಮೋಕ್ಷಪರರು ಎಂದು. ಪ್ರಕೃತಿಯಿಂದ ಬಿಡಲ್ಪಟ್ಟ ಸ್ವಾತ್ಮಾನುಭವ ರೂಪವಾದ ಕೈವಲ್ಯವು ಜ್ಞಾನಯೋಗದಿಂದ ಪ್ರಾಪ್ತವಾಗುತ್ತದೆ. ಪತಿಯಿಂದ ಪರಿತ್ಯಕ್ತಳಾದ ಪತ್ನಿಯ ನ್ಯಾಯದಂತೆ ಈ ಅನುಭವವು ಅರ್ಚಿರಾದಿಮಾರ್ಗದಿಂದ ಪರಮಪದವನ್ನು ಸೇರಿದವನಿಗೇ ಅಲ್ಲಿಯೇ ಯಾವುದೋ ಮೂಲೆಯಲ್ಲಿ ಉಂಟಾಗುವ ಭಗವದನುಭವರಹಿತವಾದ ಸ್ವಾತ್ಮಾನುಭವವೆಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ಅರ್ಚಿರಾದಿಮಾರ್ಗದಿಂದ ಹೋದವನಿಗೆ ಪುನರಾವೃತ್ತಿಯನ್ನು ಶ್ರುತಿಯಲ್ಲಿ ಹೇಳದಿರುವ ಕಾರಣ ಪ್ರಕೃತಿಮಂಡಲದಲ್ಲಿಯೇ ಎಲ್ಲಿಯೋ ಈ ಸ್ವಾತ್ಮಾನುಭವ ಉಂಟಾಗುವುದೆಂದು ಹೇಳುತ್ತಾರೆ[124].

೧೭. ಮೋಕ್ಷಪರರೂ ಎರಡುವಿಧ—ಭಕ್ತರು, ಪ್ರಪನ್ನರು ಎಂದು. ವೇದಾಂ

ಪುನರಧೀತಸಾಂಗಸಶಿರಸ್ಕವೇದಾಃ ಪೂರ್ವೋತ್ತರ ಮೀಮಾಂಸಾಪರಿಚಯಾತ್ ಚಿದಚಿದ್ವಿಲಕ್ಷಣಂ ಅನವಧಿಕಾತಿಶಯಾನಂದಸ್ವರೂಪಂ ನಿಖಿಲಹೇಯಪ್ರತ್ಯನೀಕಂ ಸಮಸ್ತಕಲ್ಯಾಣಗುಣಾತ್ಮಕಂ ಬ್ರಹ್ಮ ಅವಧಾರ್ಯ ತತ್ಪ್ರಾಪ್ತ್ಯುಪಾಯಭೂತಾಂ ಸಾಂಗಭಕ್ತಿಂ ಸ್ವೀಕೃತ್ಯ ತಯಾ ಮೋಕ್ಷಂ ಪ್ರಾಪ್ತುಕಾಮಾಃ ।

೧೮. ಭಕ್ತೌ ಅಧಿಕಾರಃ ತ್ರೈವರ್ಣಿಕಾನಾಮೇವ। ದೇವಾದೀನಾಮಪ್ಯಸ್ತಿ ಅರ್ಥಿತ್ವ ಸಾಮರ್ಥ್ಯಯೋಃ ಸಂಭವಾತ್ ।

೧೯. ನ ಶೂದ್ರಾಧಿಕಾರಃ । ಅಪಶೂದ್ರಾಧಿಕರಣವಿರೋಧಾತ್ ।

೨೦. ಭಕ್ತಿಸ್ವರೂಪಂ ತು ಬುದ್ಧಿಪರಿಚ್ಛೇದೇ ಪ್ರತಿಪಾದಿತಂ । ಭಕ್ತಾ

---

ಗಗಳು ಮತ್ತು ಉಪನಿಷತ್ತುಗಳೊಡನೆ ವೇದಾಧ್ಯಯನ ಮಾಡಿ ಪೂರ್ವೋತ್ತರ ಮೀಮಾಂಸಾಶಾಸ್ತ್ರಗಳ ಪರಿಚಯವನ್ನು ಪಡೆದುಕೊಂಡು ಬ್ರಹ್ಮವಸ್ತುವು ಚೇತನಾಚೇತನಪದಾರ್ಥಗಳಿಗಿಂತ ವಿಲಕ್ಷಣವಾದುದೂ, ಅನವಧಿಕವೂ ಅತಿಶಯವೂ ಆದ ಆನಂದ ಸ್ವರೂಪವುಳ್ಳುದೂ, ಎಲ್ಲಬಗೆಯ ದೋಷಗಳಿಗೂ ಹೊರತಾದುದೂ, ಸಮಸ್ತ ಕಲ್ಯಾಣ ಗುಣಗಳನ್ನುಳ್ಳುದೂ ಆಗಿದೆಯೆಂದು ನಿರ್ಧರಿಸಿ ಆ ಬ್ರಹ್ಮವಸ್ತುವನ್ನು ಪಡೆಯಲು ಸಾಧನವಾದ ಭಕ್ತಿಯೋಗವನ್ನು ಅದರ ಅಂಗಗಳೆಲ್ಲದರೊಡನೆ ಸ್ವೀಕರಿಸಿ ಮೋಕ್ಷವನ್ನು ಪಡೆಯಲು ಬಯಸುವವರು ಭಕ್ತರು.

೧೮. ಮೇಲಿನ ಮೂರು ವರ್ಣದವರಿಗೆ ಮಾತ್ರ ಭಕ್ತಿಯೋಗಕ್ಕೆ ಅಧಿಕಾರ. ದೇವತೆಗಳಿಗೂ ಈ ಬಗೆಯ ಅಧಿಕಾರವುಂಟು. ಮೋಕ್ಷಾಪೇಕ್ಷೆ ಮತ್ತು ಸಾಮರ್ಥ್ಯಗಳು ಅವರಿಗೂ ಸಂಭವಿಸುವುದೇ ಇದಕ್ಕೆ ಕಾರಣ.

೧೯. ಅಪಶೂದ್ರಾಧಿಕರಣದ ಉಪದೇಶಕ್ಕೆ ವಿರೋಧ ಬರುವುದರಿಂದ ಶೂದ್ರರಿಗೆ ಅಧಿಕಾರವಿಲ್ಲ.

೨೦. ಭಕ್ತಿಸ್ವರೂಪವನ್ನು ಬುದ್ಧಿಪರಿಚ್ಛೇದದಲ್ಲಿ ಪ್ರತಿಪಾದಿಸಿದೆ. ಭಕ್ತರು ಎರಡು ಬಗೆ–ಸಾಧನಭಕ್ತಿನಿಷ್ಠರು, ಸಾಧ್ಯಭಕ್ತಿನಿಷ್ಠರು ಎಂದು.

ದ್ವಿವಿಧಾಃ—ಸಾಧನಭಕ್ತಿನಿಷ್ಠಾಃ ಸಾಧ್ಯಭಕ್ತಿನಿಷ್ಠಾಶ್ಚ । ವ್ಯಾಸಾದಯಃ ಸಾಧನಭಕ್ತಿನಿಷ್ಠಾಃ । ಶ್ರೀಪರಾಂಕುಶಾದಯಃ ಸಾಧ್ಯಭಕ್ತಿ ನಿಷ್ಠಾಃ ।

೨೧. ಆ ಕಿಂಚನ್ಯಾನನ್ಯಗತಿಕತ್ವಧರ್ಮವಿಶಿಷ್ಟೋ ಭಗವಂತಂ ಆಶ್ರಿತಃ ಪ್ರಪನ್ನಃ । ಸೋಽಪಿ ದ್ವಿವಿಧಃ–ತ್ರೈವರ್ಗಿಕಪರೋ ಮೋಕ್ಷಪರಶ್ಚೇತಿ । ತ್ರೈವರ್ಗಿಕಪರೋ ನಾಮ ಭಗವಂತ ಏವ ಧರ್ಮಾರ್ಥಕಾಮಾಭಿಲಾಷೀ । ಮೋಕ್ಷಪರಸ್ತು ಸತ್ಸಂಗಾತ್ ನಿತ್ಯಾನಿತ್ಯವಿವೇಕೇ ಸತಿ ಸಂಸಾರೇ ನಿರ್ವೇದಾತ್ ವೈರಾಗ್ಯೇ ಉತ್ಪನ್ನೇ ಮೋಕ್ಷೇಚ್ಛಾಯಾಂ ಜಾತಾಯಾಂ ತತ್ಸಿದ್ಧ್ಯರ್ಥಂ 'ಆಚಾರ್ಯೋ ವೇದಸಂಪನ್ನಃ' ಇತ್ಯಾದಿ ಆಚಾರ್ಯಲಕ್ಷಣಲಕ್ಷಿತಂ ಗುರುಂ ಸಂಶ್ರಿತ್ಯ ತದ್ದ್ವಾರಾ ಪುರುಷಕಾರಭೂತಾಂ ಶ್ರಿಯಂ ಪ್ರತಿಪದ್ಯ ಭಕ್ತ್ಯಾದ್ಯುಪಾಯಾಂತರೇ ಆಶಕ್ತಃ ಅತ ಏವ ಅಕಿಂಚನಾನನ್ಯಗತಿಃ ಶ್ರೀಮನ್ನಾರಾಯಣ ಚರಣಾವೇವ ಉಪಾಯತ್ವೇನ ಯಃ ಸ್ವೀಕರೋತಿ ಸಃ ಪ್ರಪನ್ನಃ । ಪ್ರಪತ್ತಿಃ ಸರ್ವಾಧಿಕಾರಾ ।

---

ವ್ಯಾಸರೇ ಮುಂತಾದವರು ಸಾಧನ ಭಕ್ತಿನಿಷ್ಠರು. ಶ್ರೀಪರಾಂಕುಶರೇ ಮೊದಲಾದವರು ಸಾಧ್ಯಭಕ್ತಿನಿಷ್ಠರು.

೨೧. ಅಸಹಾಯತೆ ಮತ್ತು ಬೇರೆ ಗತಿಯಿಲ್ಲದಿರುವಿಕೆ ಎಂಬ ಲಕ್ಷಣಗಳಿಂದೊಡಗೂಡಿ ಭಗವಂತನನ್ನಾಶ್ರಯಿಸಿದವನು ಪ್ರಪನ್ನನು ಅಥವಾ ಶರಣಾಗತನು. ತ್ರಿವರ್ಗ (ಧರ್ಮಾರ್ಥಕಾಮ) ಫಲವನ್ನು ಬಯಸುವವನು ಮತ್ತು ಮೋಕ್ಷವನ್ನು ಬಯಸುವವನು ಎಂದು ಶರಣಾಗತನೂ ಎರಡು ಬಗೆ. ಭಗವಂತನಿಂದಲೇ ಧರ್ಮಾರ್ಥಕಾಮಗಳನ್ನು ಪಡೆಯಲಿಚ್ಛಿಸುವವನು ತ್ರೈವರ್ಗಿಕಪರ. ಸತ್ಸಂಗದಿಂದ ನಿತ್ಯವಾದುದು ಯಾವುದು ಅನಿತ್ಯವಾದುದು ಯಾವುದು ಎಂಬ ಅರಿವುಂಟಾಗಿ ಸಂಸಾರದಲ್ಲಿ ನಿರ್ವೇದ ಉದಿಸಿ ವೈರಾಗ್ಯವು ತಲೆದೋರಲು ಮೋಕ್ಷವನ್ನು ಪಡೆಯಬೇಕೆಂಬ ಬಯಕೆಯನ್ನು ಹೊಂದಿ ಅದನ್ನು ಸಾಧಿಸಲು 'ವೇದಸಂಪನ್ನನು ಆಚಾರ್ಯನು' ಎಂಬಂತೆ ಆಚಾರ್ಯನ ಲಕ್ಷಣಗಳನ್ನುಳ್ಳ ಗುರುವನ್ನು ಮೋಕ್ಷಪರನು ಆಶ್ರಯಿಸುವನು. ಇವನು ಆಚಾರ್ಯನ ಮುಖಾಂತರ ಪುರುಷಕಾರ ಭೂತೆಯಾದ[125] ಶ್ರೀದೇವಿಯಲ್ಲಿ ಮರೆಹೊಕ್ಕು ಭಕ್ತಿ

೨೨. ಸ ಚ ಪ್ರಪನ್ನೋ ದ್ವಿವಿಧಃ–ಏಕಾಂತೀ ಪರಮೈಕಾಂತೀ ಚೇತಿ । ಯೋ ಮೋಕ್ಷಫಲೇನ ಸಾಕಂ ಫಲಾಂತರಾಣ್ಯಪಿ ಭಗವತ ಏವ ಇಚ್ಛತಿ ಸ ಏಕಾಂತೀ । ದೇವತಾಂತರಶೂನ್ಯ ಇತ್ಯರ್ಥಃ । ಭಕ್ತಿಜ್ಞಾನಾಭ್ಯಾಂ ಅನ್ಯತ್ಫಲಂ ಭಗವತೋಽಪಿ ಯೋ ನೇಚ್ಛತಿ ಸ ಪರಮೈಕಾಂತೀ । ಸ ದ್ವಿವಿಧಃ–ದೃಪ್ತಃ ಆರ್ತಶ್ಚೇತಿ ಭೇದಾತ್ । ಅವಶ್ಯಮನುಭೋಕ್ತವ್ಯಮಿತಿ ಪ್ರಾರಬ್ಧಕರ್ಮ ಅನುಭವನ್ ಏತದ್ದೇಹಾವಸಾನಸಮಯೇ ಮೋಕ್ಷಮುಪೇಕ್ಷಮಾಣೋ ದೃಪ್ತಃ । ಜಾಜ್ವಲ್ಯಮಾನಾಗ್ನಿಮಧ್ಯ ಸ್ಥಿತೇರಿವ ಸಂಸಾರಾವಸ್ಥಿತೇಃ ಅತಿದುಸ್ಸಹತ್ವಾತ್ ಪ್ರಪತ್ತ್ಯುತ್ತರಕ್ಷಣ ಮೋಕ್ಷ ಕಾಮಃ ಆರ್ತಃ ।

---

ಮುಂತಾದವುಗಳಲ್ಲಿ ಅಶಕ್ತನಾದ ಕಾರಣದಿಂದಲೇ ಅಸಹಾಯನೂ ಅನ್ಯಗತಿಯಿಲ್ಲದವನೂ ಆಗಿ ಶ್ರೀಮನ್ನಾರಾಯಣನ ಚರಣಗಳನ್ನೇ ಅಂಗೀಕರಿಸುವನು. ಇವನೇ ಪ್ರಪನ್ನನು. ಈ ಪ್ರಪತ್ತಿಯನ್ನನುಷ್ಠಿಸಲು ಎಲ್ಲರಿಗೂ ಅಧಿಕಾರವುಂಟು.

೨೨. ಪ್ರಪನ್ನನೂ ಎರಡು ಬಗೆ–ಏಕಾಂತೀ ಮತ್ತು ಪರಮೈಕಾಂತೀ ಎಂಬುದಾಗಿ. ಮೋಕ್ಷಫಲದೊಡನೆ ಇತರ ಫಲಗಳನ್ನೂ ಸಹ ಭಗವಂತನಿಂದಲೇ ಬಯಸುವವನು ಏಕಾಂತೀ. ಇತರ ದೇವತೆಗಳನ್ನವನು ಉಪಾಸನೆ ಮಾಡುವುದಿಲ್ಲವೆಂದು ಇದರ ಅರ್ಥ. ಭಕ್ತಿ ಮತ್ತು ಜ್ಞಾನಗಳನ್ನು ಬಿಟ್ಟು ಉಳಿದ ಯಾವ ಪ್ರಯೋಜನವನ್ನೂ ಭಗವಂತನಿಂದಲೂ ಬಯಸದವನು ಪರಮೈಕಾಂತೀ. ಆ ಪರಮೈಕಾಂತಿಯೂ ಸಹ ದೃಪ್ತ ಮತ್ತು ಆರ್ತ ಎಂಬುದಾಗಿ ಎರಡುಬಗೆ. 'ಅವಶ್ಯವಾಗಿ ಅನುಭವಿಸಲ್ಪಡಬೇಕಾದುದೇ' ಎಂಬುದಾಗಿ ಪ್ರಾರಬ್ಧಕರ್ಮವನ್ನನುಭವಿಸುತ್ತಾ ತನ್ನ ಆ ದೇಹದ ಕೊನೆಯ ಕಾಲವನ್ನು ನಿರೀಕ್ಷಿಸುತ್ತಿರುವವನು ದೃಪ್ತನು. ಪ್ರಜ್ವಲಿಸುತ್ತಿರುವ ಬೆಂಕಿಯ ಮಧ್ಯದಲ್ಲಿ ನಿಂತಿರುವವನಿಗೆ ಹೇಗೋ ಹಾಗೆ ಸಂಸಾರದಲ್ಲಿರುವುದು ಅತಿ ದುಸ್ಸಹವಾಗುವ್ವ ಕಾರಣ ಪ್ರಪತ್ತಿ ಮಾಡಿದ ಮರುಕ್ಷಣದಲ್ಲಿಯೇ ಮೋಕ್ಷವನ್ನು ಬಯಸುವವನು ಆರ್ತನು.

೨೩. ಮುಕ್ತೋ ನಾಮ ಉಪಾಯಪರಿಗ್ರಹಣಾನಂತರಂ ನಿತ್ಯ ನೈಮಿತ್ತಿಕ ಭಗವದಾಜ್ಞಾಕೈಂಕರ್ಯರೂಪಾಣಿ ಸ್ವಯಂಪ್ರಯೋಜನತಯಾ ಕುರ್ವನ್, ಭಗವದ್ಭಾಗವತಾಪರಾಧಾಂಶ್ಚ ವರ್ಜಯನ್, ದೇಹಾವಸಾನ ಕಾಲೇ ಸುಕೃತದುಷ್ಕೃತೇ ಮಿತ್ರಾಮಿತ್ರಯೋರ್ನಿಕ್ಷಿಪನ್, 'ವಾಙ್ಮನಸಿ' ಇತ್ಯಾದಿ ಪ್ರಕಾರೇಣ ಹಾರ್ದೇ ಪರಮಾತ್ಮನಿ ವಿಶ್ರಮ್ಯ ಮುಕ್ತಿದ್ವಾರಭೂತ ಸುಷುಮ್ನಾಖ್ಯನಾಡ್ಯಾಂ ಪ್ರವಿಶ್ಯ, ಬ್ರಹ್ಮರಂಧ್ರಾನ್ನಿಷ್ಕ್ರಮ್ಯ, ಹಾರ್ದೇನ ಸಾಕಂ ಸೂರ್ಯಕಿರಣದ್ವಾರಾ ಅಗ್ನಿಲೋಕಂ ಗತ್ವಾ, ದಿನಪೂರ್ವಪಕ್ಷೋತ್ತ ರಾಯಣ-ಸಂವತ್ಸರಾಭಿಮಾನಿದೇವತಾಭಿಃ ವಾಯುನಾ ಚ ಪಥಿ ಸತ್ಕೃತಃ, ಸೂರ್ಯಮಂಡಲಂ ಭಿತ್ವಾ, ನಭೋರಂಧ್ರದ್ವಾರಾ ಸೂರ್ಯಲೋಕಂ ಗತ್ವಾ,

---

೨೩. ಮುಕ್ತನ ಸ್ವರೂಪ ಕೆಳಗೆ ಕಂಡತೆ ಇರುವುದು. ಮೋಕ್ಷೋಪಾಯ ವನ್ನನುಷ್ಠಿಸಿದ ನಂತರ ಸಾಧಕನು ಭಗವದಾಜ್ಞಾರೂಪವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನು ಸ್ವಯಂಪ್ರಯೋಜನವೆಂದು ಮಾಡುತ್ತಾ ಭಗವಂತನಿಗೂ ಭಾಗವತರಿಗೂ ಅಪರಾಧವಾಗದಂತೆ ಎಚ್ಚರ ವಹಿಸಿರುವವನಾಗಿ ದೇಹಾವಸಾನ ಕಾಲದಲ್ಲಿ ಪುಣ್ಯಪಾಪಗಳನ್ನು ಮಿತ್ರರು ಮತ್ತು ಶತ್ರುಗಳು ಇವರಲ್ಲಿ ಬಿಟ್ಟು[126] 'ವಾಕ್ಕನ್ನು ಮನಸ್ಸಿನಲ್ಲಿ ಸೇರಿಸಬೇಕು' ಎಂದೆಂದು ಹೇಳಿರುವ ಪ್ರಕಾರ ಹೃದಯದಲ್ಲಿರುವ ಪರಮಾತ್ಮನನ್ನು ತಾನು ಸೇರಿ, ಮುಕ್ತಿಗೆ ಮಾರ್ಗವಾದ ಸುಷುಮ್ನಾ ಎಂಬ ನಾಡಿಯನ್ನು ಪ್ರವೇಶಿಸಿ[127], ಬ್ರಹ್ಮರಂಧ್ರದ ಮೂಲಕ ಶರೀರದಿಂದ ಹೊರಹೊರಟು ಹೃದಯದಲ್ಲಿರುವ ಅಂತರ್ಯಾಮಿಯಾದ ಪರಮಾತ್ಮನೊಡನೆ ಸೂರ್ಯಕಿರಣಗಳ ಮುಖಾಂತರ ಅಗ್ನಿಲೋಕವನ್ನು ಸೇರುವನು. ಮಾರ್ಗದಲ್ಲಿ ಹಗಲು, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ ಇವುಗಳ ಅಭಿಮಾನಿದೇವತೆಗಳಿಂದಲೂ, ವಾಯುವಿನಿಂದಲೂ ಸತ್ಕಾರ ಮಾಡಲ್ಪಟ್ಟವನಾಗಿ, ಸೂರ್ಯಮಂಡಲವನ್ನು ಭೇದಿಸಿಕೊಂಡು ಆಕಾಶರಂಧ್ರದ ಮೂಲಕ ಸೂರ್ಯಲೋಕಕ್ಕೆ ಹೋಗಿ ಆನಂತರ ಚಂದ್ರ, ವಿದ್ಯುತ್, ವರುಣ, ಇಂದ್ರ, ಪ್ರಜಾಪತಿ ಮೊದಲಾದ ಮಾರ್ಗ ತೋರುವ ಆತಿವಾಹಿಕರ ಸಮೂಹಗಳಿಂದ ಉಪಚಾರದೊಡನೆ ದಾರಿತೋರಿಸಲ್ಪಟ್ಟು, ಆಯಾ ಲೋಕ ಗಳನ್ನು ದಾಟಿ, ಪ್ರಕೃತಿ ಮತ್ತು ವೈಕುಂಠಗಳ ಎಲ್ಲೆಗುರುತಾದ ವಿರಜಾನದಿ

ಅನಂತರಂ ಚಂದ್ರ–ವಿದ್ಯುದ್ವರುಣ–ಇಂದ್ರಪ್ರಜಾಪತಿಭಿಃ ಮಾರ್ಗದರ್ಶಿಭಿಃ ಆತಿವಾಹಿಕಗಣೈಃ ಸೋಪಚಾರೈಃ ಸಹ ತತ್ತಲ್ಲೋಕಾನತೀತ್ಯ ಪ್ರಕೃತಿವೈಕುಂಠ ಸೀಮಪರಿಚ್ಛೇದಿಕಾಂ ವಿರಜಾಂ ತೀರ್ತ್ವಾ ಸೂಕ್ಷ್ಮಶರೀರಂ ವಿಹಾಯ ಅಮಾನವ ಕರಸ್ಪರ್ಶಾತ್ ಅಪ್ರಾಕೃತದಿವ್ಯವಿಗ್ರಹಯುಕ್ತಃ, ಚತುರ್ಭುಜೋ ಬ್ರಹ್ಮಾ ಲಂಕಾರೇಣಾಲಂಕೃತಃ, ಇಂದ್ರಪ್ರಜಾಪತಿಸಂಜ್ಞಕ–ನಗರದ್ವಾರಪಾಲಕಾ ಭ್ಯನುಜ್ಞಯಾ ಶ್ರೀವೈಕುಂಠಾಖ್ಯಂ ದಿವ್ಯನಗರಂ ಪ್ರವಿಶ್ಯ, ಗರುಡಾನಂತಯುಕ್ತ ಪತಾಕಾಲಂಕೃತ – ದೀರ್ಘಪ್ರಾಕಾರಸಹಿತ ಗೋಪುರಮತೀತ್ಯ, ಐರಮ್ಮದಾ ಖ್ಯಾಮೃತಸರಃ ಸೋಮಸವನಾಖ್ಯಾಶ್ವತ್ಥಂ ಚ ದೃಷ್ಟ್ವಾ, 'ಶತಂ ಮಾಲಾ ಹಸ್ತಾಃ'ಇತ್ಯುಕ್ತ ಪಂಚಶತದಿವ್ಯಾಪ್ಸರೋಗಣೈರುಪಚರಿತಃ, ಬ್ರಹ್ಮಗಂಧಾದಿಭಿರ ಲಂಕೃತಃ, ತತ್ರಸ್ಥಾನಂತಗರುಡವಿಷ್ವಕ್ಸೇನಾದೀನ್ ಪ್ರಣಮ್ಯ, ತೈರ್ಬಹುಮತಃ, ಮಹಾಮಣಿಮಂಡಪಮಾಸಾದ್ಯ ಪರ್ಯಂಕಸಮೀಪೇ ಸ್ವಾಚಾರ್ಯಾನ್ ಪ್ರಣಮ್ಯ

---

ಯನ್ನು ದಾಟಿ, ಸೂಕ್ಷ್ಮಶರೀರವನ್ನು ಒದರಿಬಿಟ್ಟು ಅಮಾನವನ ಹಸ್ತ ಸ್ಪರ್ಶದಿಂದ ಅಪ್ರಾಕೃತವಾದ ದಿವ್ಯಶರೀರವನ್ನು ಹೊಂದಿ[128], ನಾಲ್ಕು ಭುಜ ಗಳನ್ನು ಪಡೆದು, ಬ್ರಹ್ಮಾಲಂಕಾರದಿಂದ ಅಲಂಕೃತನಾಗಿ, ಇಂದ್ರ ಪ್ರಜಾಪತಿ ಎಂಬ ಹೆಸರುಳ್ಳವೈಕುಠನಗರದ ದ್ವಾರಪಾಲಕರ ಅನುಮತಿಯಿಂದ ಶ್ರೀವೈಕುಂಠಂ ವೆಂಬ ದಿವ್ಯನಗರವನ್ನು ಪ್ರವೇಶಿಸಿ, ಗರುಡ, ಅನಂತ ಇವರಿಂದ ಅಂಕಿತವಾದ ಧ್ವಜಾಲಂಕಾರವುಳ್ಳ ದೀರ್ಘಪ್ರಾಕಾರಗಳನ್ನುಳ್ಳ ಗೋಪುರವನ್ನು ದಾಟಿ, ಐರಮ್ಮದವೆಂಬ ಅಮೃತಸರೋವರವನ್ನೂ ಸೋಮಸವನವೆಂಬ ಅಶ್ವತ್ಥ ವೃಕ್ಷವನ್ನೂ ಅವನು ಸಂದರ್ಶಿಸುತ್ತಾನೆ. 'ಕೈಗಳಲ್ಲಿ ಮಾಲೆಗಳನ್ನುಳ್ಳವರು ನೂರುಮಂದಿ' ಎಂದು ಹೇಳಿದಂತೆ ಐನೂರುಸಂಖ್ಯೆಯ ದಿವ್ಯಾಪ್ಸರೆಯರ ಗಣಗಳಿಂದ ಸತ್ಕೃತನಾಗಿ, ಬ್ರಹ್ಮಗಂಧವೇ ಮೊದಲಾದುವುಗಳಿಂದ ಅಲಂಕೃತ ನಾಗುವನು ಅವನು. ಅನಂತರ ಅಲ್ಲಿರುವ ಗರುಡ, ಅನಂತ, ವಿಷ್ವಕ್ಸೇನ ಮೊದಲಾದವರಿಗೆ ನಮಿಸಿ ಅವರಿಂದ ಬಹುಮಾನಿಸಲ್ಪಟ್ಟವನಾದ ಮುಕ್ತನು ಮಹಾಮಣಿಮಂಟಪವನ್ನುಸೇರಿ ಪರ್ಯಂಕದ ಸಮೀಪದಲ್ಲಿರುವ ತನ್ನ ಆಚಾರ್ಯರುಗಳಿಗೆ ಪ್ರಣಾಮ ಮಾಡುವನು. ಮುಂದೆ ಪರ್ಯಂಕವನ್ನು ಸಮೀಪಿಸಿ ಅಲ್ಲಿ ಧರ್ಮ ಮೊದಲಾದವುಗಳ ಪೀಠದ ಮೇಲಿನ ಕಮಲದ

ಪರ್ಯಂಕಸಮೀಪಂ ಗತ್ವಾತತ್ರ ಧರ್ಮಾದಿಪೀಠೋಪರಿಕಮಲೇ ಅನಂತೇ ವಿಮಲಾದಿಭಿಶ್ಚಾಮರಹಸ್ತಾಭಿಃ ಸೇವ್ಯಮಾನಂ ಶ್ರೀಭೂನೀಲಾಸಮೇತಂ ಶಂಖಚಕ್ರಾದಿ ದಿವ್ಯಾಯುಧೋಪೇತಂ ಜಾಜ್ವಲ್ಯಮಾನ–ಕಿರೀಟಮಕರಕುಂಡಲ–ಗ್ರೈವೇಯ–ಹಾರ ಕೇಯೂರ–ಕಟಕ–ಶ್ರೀವತ್ಸ–ಕೌಸ್ತುಭ – ಮುಕ್ತಾದಾಮೋದರಬಂಧನ–ಪೀತಾಂಬರ – ಕಾಂಚೀಗುಣ – ನೂಪುರಾದ್ಯಪರಿಮಿತ–ದಿವ್ಯಭೂಷಣಭೂಷಿತಂ ಅಪರಿಮಿತೋದಾರಕಲ್ಯಾಣಗುಣಸಾಗರಂ ಭಗವಂತಂ ದೃಷ್ಟ್ವಾ ತತ್ಪಾದಾರವಿಂದಯುಗಲೇ ಶಿರಸಾ ಪ್ರಣಮ್ಯ ಪಾದೇನ ಪರ್ಯಂಕಮಾರುಹ್ಯ ತೇನ ಸ್ವಾಂಕೇ ಸ್ಥಾಪಿತಃ, 'ಕೋಽಸಿ' ಇತಿ ಪೃಷ್ಟಃ, 'ಬ್ರಹ್ಮಪ್ರಕಾರೋಽಸ್ಮಿ' ಇತ್ಯುಕ್ತ್ವಾ ತೇನ ಕಟಾಕ್ಷಿತಃ, ತದನುಭವಜನಿತಹರ್ಷಪ್ರಕರ್ಷಾತ್ ಸರ್ವ

---

ಮೇಲಿರುವ ಅನಂತನ ಮೇಲೆ ಶ್ರೀದೇವಿ, ಭೂದೇವಿ, ನೀಳಾದೇವಿಗಳೊಡನೆ ವಿರಾಜಿಸಿರುವವನೂ, ವಿಮಲೆಯೇ ಮುಂತಾದ ಚಾಮರಹಸ್ತೆಯರಿಂದ ಸೇವಿಸಲ್ಪಡುವವನೂ ಶಂಖಚಕ್ರಾದಿ ದಿವ್ಯಾಯುಧಗಳನ್ನುಳ್ಳವನೂ, ಜ್ವಲಿಸುತ್ತಿರುವ ಕಿರೀಟ, ಮಕರ ಕುಂಡಲ, ಗ್ರೈವೇಯಕ, ಹಾರ, ಕೇಯೂರ, ಕಟಕ, ಶ್ರೀವತ್ಸ, ಕೌಸ್ತುಭ, ಮುಕ್ತಾದಾಮ, ಉದರ ಬಂಧನ, ಪೀತಾಂಬರ, ಕಾಂಚೀಗುಣ, ನೂಪುರ–ಮೊದಲಾದ ಅಪರಿಮಿತವಾದ ದಿವ್ಯಭೂಷಣಗಳಿಂದಲಂಕೃತನಾದವನೂ, ಎಲ್ಲೆಯೇ ಇಲ್ಲದುದೂ, ಉದಾರವೂ ಆದ ಕಲ್ಯಾಣಗುಣಗಳಿಗೆ ಸಮುದ್ರದಂತಿರುವವನೂ ಆದ ಭಗವಂತನನ್ನು ಸಂದರ್ಶಿಸುವನು. ಅವನು ಭಗವಂತನ ಪಾದಕಮಲಗಳಿಗೆ ಶಿರಸಾ ನಮಿಸಿ ಪರ್ಯಂಕವನ್ನೇರಿ, ಭಗವಂತನಿಂದ (ಪ್ರೀತಿಯಿಂದ) ತೊಡೆಯಮೇಲೆ ಕುಳ್ಳಿರಿಸಿಕೊಳ್ಳಲ್ಪಟ್ಟವನಾಗಿ 'ನೀನು ಯಾರು ?' ಎಂದು ಕೇಳಲ್ಪಟ್ಟಾಗ 'ನಾನು ಬ್ರಹ್ಮಪ್ರಕಾರ' ಎಂದು ಉತ್ತರಿಸುವನು. ಭಗವಂತನಿಂದ ಕಟಾಕ್ಷಿಸಲ್ಪಟ್ಟವನಾಗಿ ಆ ಭಗವದನುಭವದಿಂದಾದ ಆನಂದಾತಿರೇಕದಿಂದ ಸರ್ವದೇಶಸರ್ವಕಾಲಸರ್ವಾವಸ್ಥೆಗಳಲ್ಲಿಯೂ ಅವನಿಗೆ ಉಚಿತವಾದ ಸರ್ವವಿಧವಾದ ಕೈಂಕರ್ಯದಲ್ಲಿ ಆಸೆಯುಳ್ಳವನಾಗಿ ಅಷ್ಟಗುಣಗಳ ಆವಿರ್ಭಾವ ಹೊಂದಿ[129] ಎಂದೂ ಕೊನೆಯಾಗದ ಬ್ರಹ್ಮಾನುಭವವನ್ನು ಹೊಂದುತ್ತಾನೆ. ಅಂಥವನನ್ನು ಮುಕ್ತನೆಂದು ಹೇಳುತ್ತಾರೆ.

ದೇಶ–ಸರ್ವಕಾಲ–ಸರ್ವಾವಸ್ಥೋಚಿತ–ಸರ್ವವಿಧಕೈಂಕರ್ಯರತಿಃ, ಆವಿರ್ಭೂತಗುಣಾಷ್ಟಕಃ, ಉತ್ತರಾವಧಿರಹಿತಬ್ರಹ್ಮಾನುಭವವಾನ್ ।

೨೪. ಮುಕ್ತಸ್ಯ ಬ್ರಹ್ಮಸಾಮ್ಯಾಪತ್ತಿಶ್ರುತಿಸ್ತು ಭೋಗಸಾಮ್ಯಮಾಹ । ಜಗದ್ವ್ಯಾಪಾರವರ್ಜನಸ್ಯ ಪ್ರತಿಪಾದನಾತ್ । ತಸ್ಯ ನಾನಾತ್ವಂ ಸರ್ವಲೋಕಸಂಚರಣಂ ಚ ಸಂಭವತಿ ।

೨೫. ನನು ಮುಕ್ತಸ್ಯ ಅನಾವೃತ್ತಿತ್ವಪ್ರತಿಪಾದನಾತ್ ಅಸ್ಮಿನ್ ಲೋಕೇ ಸಂಚಾರಃ ಕಥಮಿತಿ ನ ಶಂಕನೀಯಮ್ । ಕರ್ಮಕರ್ತೃತ್ವಸ್ಯೈವ ನಿಷೇಧಾತ್ ಸ್ವೇಚ್ಛಯಾ ಸಂಚರಣೋಪಪತ್ತೇಃ । ಅತೋ ಮುಕ್ತೋ ಭಗವತ್ಸಂಕಲ್ಪಾಯತ್ತ ಸ್ವೇಚ್ಛಯಾ ಸರ್ವತ್ರ ಸಂಚರತಿ ।

೨೬. ನಿತ್ಯಾನಾಮ ಕದಾಚಿದಪಿ ಭಗವದಭಿಮತವಿರುದ್ಧಾಚರಣಾ

---

೨೪. ಮುಕ್ತನು ಬ್ರಹ್ಮಸಾಮ್ಯವನ್ನು ಹೊಂದುತ್ತಾನೆಂಬ ಶ್ರುತಿಯು[130] ಭೋಗದಲ್ಲಿ (ಆನಂದಾನುಭವದಲ್ಲಿ) ಸಾಮ್ಯವನ್ನು ಹೇಳುತ್ತದೆ. ಈ ಜೀವನಿಗೆ ಜಗದ್ವ್ಯಾಪಾರದಲ್ಲಿ (ಸೃಷ್ಟ್ಯಾದಿಗಳಲ್ಲಿ) ಅನ್ವಯವಿಲ್ಲವೆಂದು ಹೇಳಿರುವುದೇ ಇದಕ್ಕೆ ಕಾರಣ. ಮುಕ್ತನು ಅನೇಕ ರೂಪವನ್ನು ಹೊಂದಬಲ್ಲನು ಹಾಗೂ ಸರ್ವಲೋಕಗಳಲ್ಲಿಯೂ ಸಂಚರಿಸಬಲ್ಲನು.

೨೫. ಮುಕ್ತನಿಗೆ ಪುನರ್ಜನ್ಮ ವಿಲ್ಲವೆಂದು ಪ್ರತಿಪಾದಿಸಿರುವಾಗ ಈ ಲೋಕದಲ್ಲಿ ಅವನ ಸಂಚಾರ ಹೇಗೆ ಸಂಭವಿಸಬಹುದೆಂದು ಸಂದೇಹ ಪಡಬೇಕಾಗಿಲ್ಲ. ಮೇಲೆ ನಿಷೇಧ ಮಾಡಿರುವುದು ಕರ್ಮದ ಕಾರಣ ಆಗತಕ್ಕ ಪುನರಾವೃತ್ತಿ. ತನ್ನ ಇಷ್ಟದಂತೆ ಸಂಚರಣ ಮಾಡುವುದು ಉಪಪನ್ನವೇ ಆಗುತ್ತದೆ. ಆದುದರಿಂದ ಮುಕ್ತನು ಭಗವಂತನ ಸಂಕಲ್ಪಕ್ಕನುಗುಣವಾದ ತನ್ನ ಸ್ವಂತ ಇಚ್ಛೆಯಿಂದ ಎಲ್ಲೆಡೆಯಲ್ಲಿಯೂ ಸಂಚರಿಸುತ್ತಾನೆ[131].

೨೬. ಅನಂತಗರುಡವಿಷ್ವಕ್ಸೇನಾದಿಗಳು ನಿತ್ಯರು. ಭಗವಂತನ ಅಭಿಮತಕ್ಕೆ ವಿರುದ್ಧವಾದ ಆಚರಣೆಯನ್ನು ಎಂದೂ ಇವರು ಮಾಡದೆ ಇರುವುದ

ಭಾವೇನ ಜ್ಞಾನಸಂಕೋಚಪ್ರಸಂಗರಹಿತಾ ಅನಂತಗರುಡವಿಷ್ವಕ್ಸೇನಾದಯಃ। ತೇಷಾಂ ಅಧಿಕಾರವಿಶೇಷಾ ಈಶ್ವರಸ್ಯ ನಿತ್ಯೇಚ್ಛಯೈವ ಅನಾದಿತ್ವೇನ ವ್ಯವಸ್ಥಿತಾಃ। ಏತೇಷಾಂ ಅವತಾರಾಸ್ತು ಭಗವದವತಾರವತ್ ಸ್ವೇಚ್ಛಯಾ। ಏವಂ ಬದ್ಧಮುಕ್ತನಿತ್ಯಭೇದಭಿನ್ನೋ ಜೀವಃ ನಿರೂಪಿತಃ।

ಇತಿ ವಾಧೂಲ ಕುಲ ತಿಲಕ ಶ್ರೀಮನ್ಮಹಾಚಾರ್ಯಸ್ಯ ಪ್ರಥಮದಾಸೇನ ಶ್ರೀನಿವಾಸದಾಸೇನ ವಿರಚಿತಾಯಾಂ ಯತೀಂದ್ರಮತದೀಪಿಕಾಯಾಂ ಜೀವನಿರೂಪಣಂ ನಾಮ ಅಷ್ಟಮೋಽವತಾರಃ

---

ರಿಂದ ಇವರ ಜ್ಞಾನವು ಸಂಕುಚಿತವಾಗುವ ಪ್ರಸಂಗವೇ ಬರುವುದಿಲ್ಲ. ಭಗವಂತನ ನಿತ್ಯೇಚ್ಛೆಯಿಂದಲೇ ಅವರ ಅಧಿಕಾರ ವಿಶೇಷಗಳು ಅನಾದಿಕಾಲದಿಂದ ವ್ಯವಸ್ಥಿತವಾಗಿವೆ. ಭಗವಂತನ ಅವತಾರದಂತೆಯೇ ಇವರ ಅವತಾರವೂ ಇವರಿವರ ಇಚ್ಛೆಗೆ ಅಧೀನವಾಗಿರುತ್ತದೆ ಹೀಗೆ ಬದ್ಧ, ಮುಕ್ತ, ನಿತ್ಯ ಎಂಬ ಭೇದವುಳ್ಳ ಜೀವಾತ್ಮ ಸ್ವರೂಪವನ್ನು ಇದುವರೆಗೂ ನಿರೂಪಿಸಲಾಯಿತು.

ಇಂತು ವಾಧೂಲಕುಲತಿಲಕನೂ ಮಹಾಚಾರ್ಯರ ಪ್ರಥಮದಾಸನೂ ಆದ ಶ್ರೀನಿವಾಸದಾಸನಿಂದ ವಿರಚಿತವಾದ ಯತೀಂದ್ರಮತದೀಪಿಕೆಯಲ್ಲಿ ಜೀವಾತ್ಮನಿರೂಪಣೆ ಎಂಬ ಎಂಟನೆಯ ಅವತಾರ ಮುಗಿದುದು.

## ನವಮೋಽವತಾರಃ

# ಈಶ್ವರಃ

೧. ಅಥ ಈಶ್ವರೋ ನಿರೂಪ್ಯತೇ । ಸರ್ವೇಶ್ವರತ್ವಂ ಸರ್ವಶೇಷಿತ್ವಂ ಸರ್ವಕರ್ಮಾರಾಧ್ಯತ್ವಂ ಸರ್ವಫಲಪ್ರದತ್ವಂ ಸರ್ವಾಧಾರತ್ವಂ ಸರ್ವಕಾರ್ಯೋತ್ಪಾದಕತ್ವಂ ಸ್ವಜ್ಞಾನಸ್ವೇತರಸಮಸ್ತದ್ರವ್ಯಶರೀರತ್ವಂ ಇತ್ಯಾದೀನಿ ಈಶ್ವರ ಲಕ್ಷಣಾನಿ ।

೨. ಅಯಮೀಶ್ವರಃ ಸೂಕ್ಷ್ಮಚಿದಚಿದ್ವಿಶಿಷ್ಟವೇಷೇಣ ಜಗದುಪಾದಾನ ಕಾರಣಂ ಭವತಿ । ಸಂಕಲ್ಪವಿಶಿಷ್ಟವೇಷೇಣ ನಿಮಿತ್ತಕಾರಣಂ ಭವತಿ । ಕಾಲಾದ್ಯಂತರ್ಯಾಮಿವೇಷೇಣ ಸಹಕಾರಿಕಾರಣಂ ಚ ।

---

## ಒಂಭತ್ತನೆಯ ಅವತಾರ

# ಈಶ್ವರ

೧. ಈಗ ಈಶ್ವರಸ್ವರೂಪವನ್ನು ನಿರೂಪಿಸಲಾಗುವುದು. ಸರ್ವೇಶ್ವರನಾಗಿರುವಿಕೆ, ಶರ್ವಶೇಷಿಯಾಗಿರುವಿಕೆ, ಸರ್ವಕರ್ಮಗಳಿಂದಲೂ ಆರಾಧಿಸಲ್ಪಡುತ್ತಿರುವಿಕೆ, ಸರ್ವಫಲಗಳನ್ನೂ ಕೊಡುವವನಾಗಿರುವಿಕೆ, ಎಲ್ಲ ಕಾರ್ಯಗಳಿಗೂ ಕಾರಣನಾಗಿರುವಿಕೆ, ತಾನು ಮತ್ತು ತನ್ನ ಜ್ಞಾನ ಇವುಗಳನ್ನುಳಿದು ಮಿಕ್ಕೆಲ್ಲ ದ್ರವ್ಯಗಳನ್ನೂ ಶರೀರವನ್ನಾಗಿ ಹೊಂದಿರುವಿಕೆ ಇವೇ ಮೊದಲಾದವು ಈಶ್ವರನ ಲಕ್ಷಣಗಳು.

೨. ಈ ಈಶ್ವರನೇ ಸೂಕ್ಷ್ಮಾವಸ್ಥೆಯಲ್ಲಿರುವ ಚೇತನಾಚೇತನಗಳೊಡನೆ ಕೂಡಿರುವಾಗ ಜಗತ್ತಿಗೆ ಉಪಾದಾನಕಾರಣನಾಗುತ್ತಾನೆ[132] ಸಂಕಲ್ಪದಿಂದೊಡಗೂಡಿರುವ ರೂಪದಲ್ಲಿ ನಿಮಿತ್ತಕಾರಣನಾಗುತ್ತಾನೆ. ಕಾಲವೇ ಮೊದಲಾದವುಗಳಿಗೆ ಅಂತರ್ಯಾಮಿಯಾಗಿಯೂ ಅವನು ಇರುವುದರಿಂದ ಸಹಕಾರಿಕಾರಣನೂ ಆಗುತ್ತಾನೆ.

೩. ಕಾರ್ಯರೂಪೇಣ ವಿಕಾರಯೋಗ್ಯಂ ವಸ್ತು ಉಪಾದಾನಮ್ । ಕಾರ್ಯತಯಾ ಪರಿಣಾಮಯಿತೃ ನಿಮಿತ್ತಮ್ । ಕಾರ್ಯೋತ್ಪತ್ತ್ಯುಪಕರಣಂ ವಸ್ತು ಸಹಕಾರಿ । ಯದ್ವಾ ಉತ್ತರೋತ್ತರಾವಸ್ಥಾವಿಶಿಷ್ಟಸ್ವರೂಪಾಪೇಕ್ಷಯಾ ತದನುಗುಣನಿಯತಪೂರ್ವಭಾವ್ಯವಸ್ಥಾವಿಶಿಷ್ಟಂ ಉಪಾದಾನಮ್ । ಯಥಾ ಘಟತ್ವಾವಸ್ಥಾವಿಶಿಷ್ಟಮೃದ್ದ್ರವ್ಯಾಪೇಕ್ಷಯಾ ಪಿಂಡತ್ವಾವಸ್ಥಾವಿಶಿಷ್ಟಂ ತದೇವ ದ್ರವ್ಯಮ್ । ಪರಿಣಾಮೌನ್ಮುಖ್ಯವ್ಯತಿರೇಕೇಣ ಆಕಾರೇಣ ಅಪೇಕ್ಷಿತಂ ಕಾರಣಂ ನಿಮಿತ್ತಮ್ । ಅಸ್ಮಿನ್ಪಕ್ಷೇ ಸಹಕಾರಿಕಾರಣಸ್ಯ ನಿಮಿತ್ತೇ ಅಂತರ್ಭಾವಃ ।

೪. ಏವಂ ತ್ರಿವಿಧಕಾರಣಪಕ್ಷೇ ಕಾರಣದ್ವಯಪಕ್ಷೇ ಚ ಕಾರಣ

---

೩. ಯಾವ ಪದಾರ್ಥವು ಕಾರ್ಯದ ರೂಪದಲ್ಲಿ ಪರಿಣಾಮಹೊಂದಲು ಯೋಗ್ಯವಾಗಿರುವುದೋ ಅದೇ ಉಪಾದಾನಕಾರಣ ಎನ್ನಿಸುವುದು. ಕಾರ್ಯದ ರೂಪದಲ್ಲಿ ಪರಿಣಾಮವನ್ನುಂಟುಮಾಡುವುದು ನಿಮಿತ್ತ ಕಾರಣ. ಕಾರ್ಯೋತ್ಪತ್ತಿಗೆ ಸಲಕರಣವಾಗುವ ವಸ್ತು ಸಹಕಾರಿಕಾರಣ. ಇದನ್ನೇ ಬೇರೆ ರೀತಿಯಲ್ಲಿ ಹೀಗೆ ಹೇಳಬಹುದು. ಮುಂದೆ ಮುಂದೆ ಉಂಟಾಗತಕ್ಕ ಅವಸ್ಥೆಗಳಿಂದ ಕೂಡಿದ ಸ್ವರೂಪದ ದೃಷ್ಟಿಯಿಂದ ಅದಕ್ಕನುಗುಣವಾದುದೂ ಅದಕ್ಕೆ ಹಿಂದಿನ ಅವಸ್ಥೆಯಿಂದ ನಿಯಮೇನ ಕೂಡಿದುದೂ ಆದುದು ಉಪಾದಾನ ಕಾರಣ. ಹೇಗೆಂದರೆ ಘಟತ್ವವೆಂಬ ಅವಸ್ಥೆಯಿಂದ ವಿಶಿಷ್ಟವಾದ ಮಣ್ಣಿನ ಅಪೇಕ್ಷೆಯಿಂದ ಪಿಂಡತ್ವದ ಅವಸ್ಥೆಯಿಂದ ಕೂಡಿದ ಅದೇ ಮಣ್ಣು ಅದಕ್ಕೆ ಉಪಾದಾನ. ಪರಿಣಾಮವನ್ನು ಹೊಂದುವುದರಲ್ಲಿ ಔನ್ಮುಖ್ಯವನ್ನು ಹೊಂದಿರುವ ದ್ರವ್ಯಕ್ಕಿಂತ ಬೇರೆಯಾಗಿ ಅಪೇಕ್ಷಿತವಾದ ಕಾರಣ ನಿಮಿತ್ತಕಾರಣ. ಈ ಪಕ್ಷದಲ್ಲಿ ಸಹಕಾರಿ ಕಾರಣವೂ ನಿಮಿತ್ತಕಾರಣವೂ ಅಂತರ್ಭವಿಸಿವೆ.

೪. ಕಾರಣವನ್ನು ಹೀಗೆ ಮೂರು ಬಗೆಯಾಗಿ ವಿಭಾಗಿಸಿರುವ ಪಕ್ಷದಲ್ಲಿಯೂ, ಹಾಗೆಯೇ ಕಾರಣವು ಎರಡು ಬಗೆ ಎಂಬುವ ಪಕ್ಷದಲ್ಲಿಯೂ, ಆಯಾ ಕಾರಣಗಳಿಗೆ ಹೇಳಿರುವ ಲಕ್ಷಣಗಳನ್ನೊಳಗೊಂಡಿರುವ ಕಾರಣ ಅಖಿಲ ಜಗತ್ಕಾರಣತ್ವವು ಭಗವಂತನಾದ ಶ್ರೀಮನ್ನಾರಾಯಣನಿಗೇ ಸಂಭವಿಸುತ್ತದೆ.

ಲಕ್ಷಣಲಕ್ಷಿತತ್ವಾತ್ ಅಖಿಲಜಗತ್ಕಾರಣತ್ವಂ ಭಗವತೋ ನಾರಾಯಣಸ್ಯೈವ ಸಂಭವತಿ ।

ಶ. ನನು ಕಥಂ ನಾರಾಯಣೇ ಕಾರಣತ್ವಪರ್ಯವಸಾನಂ ಇತಿ ಚೇತ್ ಉಚ್ಯತೇ । ನ್ಯಾಯಸಹಿತವೇದಾಂತವಾಕ್ಯವಿಚಾರೇಣ ಏವಂ ಪರ್ಯವಸ್ಯತಿ । ತದ್ಯಥಾ–ಆದೌ ತಾವತ್ ಪ್ರಕೃತೇಃ ಜಗತ್ಕಾರಣತ್ವಂ ನೋಪ ಪದ್ಯತೇ । ಈಕ್ಷಿತೃತ್ವಾ ದ್ಯ ಭಾವಾತ್ । ಛಾಂದೋಗ್ಯೇ ತಾವತ್ ಸದಾಕಾಶ ಪ್ರಾಣಶಬ್ದ ವಾಚ್ಯಾನಾಂ ಜಗತ್ಕಾರಣತ್ವಂ ಪ್ರತೀಯತೇ । ವಾಜಸನೇಯಕೇ ಬ್ರಹ್ಮಶಬ್ದ ವಾಚ್ಯಸ್ಯ ಕಾರಣತ್ವಂ ಪ್ರತೀಯತೇ । ಸರ್ವಶಾಖಾ ಪ್ರತ್ಯಯ ನ್ಯಾಯೇನ ಕಾರಣವಾಕ್ಯಾನಾಂ ಏಕವಿಷಯತ್ವೇ ಪ್ರತಿಪಾದಯಿತವ್ಯೇ ಭಾಗ ಪಶುನ್ಯಾಯೇನ ಸಾಮಾನ್ಯವಾಚಕಾನಾಂ ಸದಾದಿಶಬ್ದಾನಾಂ ವಿಶೇಷೇ ಬ್ರಹ್ಮಣಿ ಪರ್ಯವಸಾನಂ ವಕ್ತವ್ಯಮ್ ।

---

ಶ. ಶ್ರೀಮನ್ನಾರಾಯಣನಲ್ಲಿ ಅಖಿಲಜಗತ್ಕಾರಣತ್ತ್ವವು ಹೇಗೆ ತಾನೇ ಪರ್ಯವಸಾನ ಹೊಂದೀತು ಎಂದು ಆಕ್ಷೇಪಿಸುವುದಾದರೆ ಹೀಗೆ ಉತ್ತರ ಹೇಳುತ್ತೇವೆ. ನ್ಯಾಯಶಾಸ್ತ್ರಾನುಸಾರವಾಗಿ ವೇದಾಂತವಾಕ್ಯ ಗಳನ್ನು ಪರೀಕ್ಷಿಸಿದಲ್ಲಿ (ನಾರಾಯಣನೇ ಜಗತ್ಕಾರಣನೆಂಬ) ಈ ನಿರ್ಣಯ ಫಲಿಸುವುದು. ಇದನ್ನು ಹೀಗೆ ವಿವರಿಸಬಹುದು. ಮೊದಲಾಗಿ ಪ್ರಕೃತಿಗೆ ಜಗತ್ಕಾರಣವು ಸಂಭವಿಸುವುದೇ ಇಲ್ಲ. ಸಂಕಲ್ಪಿಸುವುದೇ ಮೊದಲಾದವು ಅದಕ್ಕಿಲ್ಲವೇ ಇಲ್ಲ[133]. ಛಾಂದೋಗ್ಯೋಪನಿಷತ್ತಿನಲ್ಲಿಯಾದರೋ ಸತ್, ಆಕಾಶ, ಪ್ರಾಣ ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟಿರುವುದಕ್ಕೆ ಜಗತ್ಕಾರಣತ್ವವುಂಟೆಂದು ಗೊತ್ತಾಗುತ್ತದೆ. ವಾಜಸನೇಯದಲ್ಲಿ ಬ್ರಹ್ಮಶಬ್ದ ದಿಂದ ಹೇಳಲ್ಪಟ್ಟಿರುವುದಕ್ಕೆ ಕಾರಣತ್ವ ಕಂಡುಬರುತ್ತದೆ. 'ಸರ್ವಶಾಖೆಗಳೂ ಒಂದೇ ತತ್ತ್ವವನ್ನು ಹೇಳುವುವು' ಎಂಬ ಸರ್ವಶಾಖಾಪ್ರತ್ಯಯ ನ್ಯಾಯಕ್ಕನುಸಾರವಾಗಿ ಕಾರಣವಾಕ್ಯಗಳೆಲ್ಲಾ ಒಂದೇ ವಿಷಯವನ್ನು ಕುರಿತವೆಂದು ಪ್ರತಿಪಾದಿಸತಕ್ಕದ್ದಾಗಿದೆ. ಹಾಗೆಯೇ ಭಾಗಪಶುನ್ಯಾಯಕ್ಕನು ಸಾರವಾಗಿ[134] ಸಾಮಾನ್ಯವಾಚಕಗಳಾದ ಸತ್‌ಮೊದಲಾದ ಶಬ್ದಗಳಿಗೆ ವಿಶೇಷವಾಚಕವಾದ ಬ್ರಹ್ಮವಸ್ತುವಿನಲ್ಲಿ ಪರ್ಯವಸಾನವನ್ನು ಹೇಳಬೇಕು.

೬. ಏವಂ ಉಕ್ತನ್ಯಾಯೇನ ಬ್ರಹ್ಮಶಬ್ದವಾಚ್ಯಸ್ಯ ತೈತ್ತಿರೀಯೋಕ್ತ ಆತ್ಮಶಬ್ದವಾಚ್ಯೇ ಪರ್ಯವಸಾನಮ್ । ಆತ್ಮಶಬ್ದವಾಚ್ಯಃ ಕ ಇತ್ಯಾಕಾಂಕ್ಷಾಯಾಂ ಶ್ರುತಿಪ್ರಸಿದ್ಧ ಇಂದ್ರೋ ವಾ ತಥಾ ಪ್ರಸಿದ್ಧೋಽಗ್ನಿರ್ವಾ, ಉಪಾಸ್ಯತ್ವೇನ ಪ್ರಸಿದ್ಧಃ ಸೂರ್ಯೋ ವಾ, ಕಾರಣತ್ವೇನ ಉಕ್ತಃ ಸೋಮೋ ವಾ, ಅಭೀಷ್ಟ ಫಲಪ್ರದತ್ವೇನ ಉಕ್ತಃ ಕುಬೇರೋ ವಾ, ಯಮೋ ವಾ, ವರುಣೋ ವೇತಿ ವಿಶಯೇ, ಏತೇಷಾಂ ಕರ್ಮವಶ್ಯತ್ವ–ಪರಿಚ್ಛಿನ್ನೈಶ್ವರ್ಯವತ್ವ ಸಂಹಾರ್ಯತ್ವ ಶ್ರವಣಾತ್ ನ ಏತೇ ಜಗತ್ಕಾರಣಭೂತಾಃ, ಕಿಂ ತು ಶ್ವೇತಾಶ್ವತರೇ ಶಿವಸ್ಯ ಕಾರಣತ್ವಂ ಭಾಸತ ಇತಿ ಭಾತಿ | ಏವಂ ಅಥರ್ವಣಶಾಖಾಯಾಂ ಶಂಭುಶಬ್ದವಾಚ್ಯಸ್ಯ ಧ್ಯೇಯತ್ವಂ ಕಾರಣತ್ವಂ ಭಾಸತೇ । ತಥೈವ ಅಥರ್ವ

---

೬. ಮೇಲೆ ಹೇಳಿದ ನ್ಯಾಯದಂತೆ ಬ್ರಹ್ಮಶಬ್ದದಿಂದ ಯಾವುದು ವಾಚ್ಯವಾದುದೋ ಅದು ತೈತ್ತಿರೀಯದ ಆತ್ಮಶಬ್ದದಿಂದ ವಾಚ್ಯವಾದುದರಲ್ಲಿ ಅನ್ವಯಿಸುತ್ತದೆ. ಆತ್ಮಶಬ್ದವಾಚ್ಯವಾದುದು ಯಾವುದು ಎಂಬ ಪ್ರಶ್ನೆ - ಗ ಏಳುತ್ತದೆ. ಅದು ಶ್ರುತಿ ಪ್ರಸಿದ್ಧನಾದ ಇಂದ್ರನೇ ? ಅಷ್ಟೇ ಪ್ರಸಿದ್ಧನಾದ ಅಗ್ನಿಯೇ ? ಉಪಾಸನೆ ಮಾಡಲ್ಪಡಬೇಕಾದವನೆಂದು ಪ್ರಸಿದ್ಧನಾಗಿರುವ ಸೂರ್ಯನೇ ? ಕಾರಣನೆಂದು ಹೇಳಿರುವ ಸೋಮನೇ ? ಇಷ್ಟಾರ್ಥಪ್ರದನಾದ ಕುಬೇರನೇ ? ಯಮನೇ ? ಅಥವಾ ವರುಣನೇ ? ಹೀಗೆಲ್ಲಾ ಸಂದೇಹ ತೋರಬಹುದು. ಇವರೆಲ್ಲರೂ ಕರ್ಮಕ್ಕಧೀನರಾಗಿರುವುದರಿಂದಲೂ, ಪರಿಮಿತವಾದ ಐಶ್ವರ್ಯವನ್ನುಳ್ಳವರಾದುದರಿಂದಲೂ, ನಾಶಕ್ಕೊಳಪಡುವುದರಿಂದಲೂ ಜಗತ್ತಿಗೆ ಕಾರಣರಾದವರಲ್ಲ. ಆದರೆ ಶ್ವೇತಾಶ್ವತರದಲ್ಲಿ ಶಿವನಿಗೆ ಜಗತ್‌ಕಾರಣತ್ವ ಕಂಡುಬರುವಂತೆ ತೋರುತ್ತದೆ. ಹಾಗೆಯೇ ಅಥರ್ವಣ ಶಾಖೆಯಲ್ಲಿ ಶಂಭುಶಬ್ದದಿಂದ ವಾಚ್ಯನಾದವನಿಗೆ ಕಾರಣತ್ವವೂ, ಧ್ಯೇಯತ್ವವೂ ತೋರುತ್ತದೆ. ಹಾಗೆಯೇ ಅಥರ್ವಶಿರಸ್ಸಿನಲ್ಲಿ ರುದ್ರಶಬ್ದದಿಂದ ವಾಚ್ಯನಾದವನಿಗೆ ಸರ್ವಾತ್ಮಕತ್ವವು ಹೇಳಲ್ಪಟ್ಟಿದೆ. ತೈತ್ತಿರೀಯದಲ್ಲಿ ಹಿರಣ್ಯಗರ್ಭನಿಗೆ ಜಗತ್ಕಾರಣತ್ವ ಕಂಡುಬರುತ್ತದೆ. ಇಲ್ಲಯೂ ಸಾಮಾನ್ಯವಿಶೇಷ ನ್ಯಾಯದಿಂದ ಶಿವ, ಶಂಭು, ರುದ್ರ ಮುಂತಾದ ಸಾಮಾನ್ಯ ಶಬ್ದಗಳೆಲ್ಲಾ ಹಿರಣ್ಯಗರ್ಭನೆಂಬ ವಿಶೇಷ ಶಬ್ದದಲ್ಲಿ ಪರ್ಯವಸಾನ ಹೊಂದುವುದು

ಶಿರಸಿ ರುದ್ರಶಬ್ದವಾಚ್ಯಸ್ಯ ಸರ್ವಾತ್ಮಕತಾ ಉಚ್ಯತೇ । ತೈತ್ತಿರೀಯೇ ಹಿರಣ್ಯಗರ್ಭಸ್ಯ ಜಗತ್ಕಾರಣತ್ವಂ ಪ್ರತೀಯತೇ । ಅತ್ರಾಪಿ ಸಾಮಾನ್ಯವಿಶೇಷನ್ಯಾಯಾತ್ ಶಿವಶಂಭುರುದ್ರಾದಿಶಬ್ದಾನಾಂ ಹಿರಣ್ಯಗರ್ಭಶಬ್ದವಾಚ್ಯವಿಶೇಷೇ ಪರ್ಯವಸಾನಂ ಯುಜ್ಯತೇ । ಶಿವಶಬ್ದಸ್ಯ 'ಶಿವಮಸ್ತು ಸರ್ವಜಗತಾಂ' 'ಶಿವಂ ಕರ್ಮಾಸ್ತು', 'ಪಂಥಾನಃ ಸಂತು ತೇ ಶಿವಾಃ' ಇತ್ಯಾದಿಭಿಃ ಮಂಗಲವಾಚಕತ್ವಮ್ । ರುದ್ರಶಬ್ದಸ್ಯ ಅಗ್ನಿವಾಚಕತ್ವಮ್ । ಏವಂ ಮಹೇಶ್ವರಶಂಭ್ವಾದಿ ಸಾಮಾನ್ಯಶಬ್ದಾ ಅಪಿ ಅವಯವಶಕ್ತ್ಯಾ ಚತುರ್ಮುಖೇ ಪರ್ಯವಸ್ಯಂತಿ ।

೭. ಕಾರಣವಾಚಿಶಿವಾದಿಶಬ್ದಾನಾಂ ಮುಖ್ಯವೃತ್ತ್ಯಾ ರುದ್ರಪರತ್ವಂ ವಾ ಕಿಂ ನ ಸ್ಯಾತ್ ಇತಿ ನ ಶಂಕನೀಯಮ್ । ರುದ್ರಸ್ಯ ಚತುರ್ಮುಖಾದುತ್ಪತ್ತಿಶ್ರವಣಾತ್ ಅನಪಹತಪಾಪ್ಮತ್ವಶ್ರವಣಾಚ್ಚ ನ ರುದ್ರಸ್ಯ ಕಾರಣತ್ವಮ್ । ಅತೋ ಹಿರಣ್ಯಗರ್ಭಪ್ರಜಾಪ್ರತಿಸ್ವಯಂಭ್ವಾದಿ ಶಬ್ದ

---

ಯುಕ್ತವಾಗಿದೆ. 'ಲೋಕಗಳಿಗೆಲ್ಲಾ ಮಂಗಳವಾಗಲಿ', 'ಕರ್ಮ ಶುಭಕರವಾಗಲಿ', 'ನಿನ್ನ ಪ್ರಯಾಣ ಸುಖಕರವಾಗಲಿ', ಮೊದಲಾದವುಗಳಲ್ಲಿ ಹೇಗೋ ಹಾಗೆ ಶಿವಶಬ್ದ ಮಂಗಳ ವಾಚಕವಾಗಿದೆ. ರುದ್ರಶಬ್ದ ಅಗ್ನಿವಾಚಕವಾದುದು. ಹೀಗೆಯೇ ಮಹೇಶ್ವರ, ಶಂಭು ಮೊದಲಾದ ಸಾಮಾನ್ಯಶಬ್ದಗಳೂ ಸಹ ಅವಯವಶಕ್ತಿಗನುಸಾರವಾಗಿ ಚತುರ್ಮುಖನೆಂಬ ವಿಶೇಷಶಬ್ದದಲ್ಲಿ ಪರ್ಯವಸಾನಹೊಂದುತ್ತವೆ.

೭. ಜಗತ್ಕಾರಣವೆಂದು ಸೂಚಿಸುವ 'ಶಿವ' ಮುಂತಾದ ಶಬ್ದಗಳು ಮುಖ್ಯವೃತ್ತಿಯಿಂದ ರುದ್ರನನ್ನೇ ಕುರಿತವೆಂದು ಏಕೆ ಹೇಳಬಾರದು ? ಎಂದು ಸಂದೇಹಪಡಬೇಕಾಗಿಲ್ಲ. ಏಕೆಂದರೆ ರುದ್ರನು ಚತುರ್ಮುಖನಿಂದ ಹುಟ್ಟಿದವನೆಂದೂ ಅವನು ಪಾಪರಹಿತನಲ್ಲವೆಂದೂ (ಅಪಹತಪಾಪ್ಮನಲ್ಲ) ಶಾಸ್ತ್ರಗಳಿಂದ ತಿಳಿದುಬರುತ್ತದೆ. ಆದುದರಿಂದ ಶಿವ ಮುಂತಾದ ಶಬ್ದಗಳು ಹಿರಣ್ಯಗರ್ಭ, ಪ್ರಜಾಪತಿ, ಸ್ವಯಂಭು ಮುಂತಾದ ಶಬ್ದಗಳಿಂದ ಹೇಳಲ್ಪಡುವ ಚತುರ್ಮುಖನನ್ನೇ ತಿಳಿಸುತ್ತವೆ. ಹೀಗೆಯೇ ಮಹೋಪನಿಷತ್ತು, ನಾರಾಯಣೋಪ

ವಾಚ್ಯೇ ಚತುರ್ಮುಖೇ ಶಿವಾದಿಶಬ್ದಾಃ ಪರ್ಯವಸ್ಯಂತಿ । ಏವಮಪಿ ಮಹೋಪನಿಷನ್ನಾರಾಯಣೋಪನಿಷತ್ಸುಬಾಲೋಪನಿಷನ್ಮೈತ್ರಾಯಣೀಯ – ಪುರುಷಸೂಕ್ತ – ನಾರಾಯಣಾನುವಾಕಾಂತರ್ಯಾಮಿಬ್ರಾಹ್ಮಣಾದಿಷು ನಾರಾಯಣಸ್ಯೈವ ಪರಮಕಾರಣತ್ವ–ಸರ್ವಶಬ್ದವಾಚ್ಯತ್ವ–ಮೋಕ್ಷಪ್ರದತ್ವ ಜಗಚ್ಛರೀರತ್ವಾದೇಃ ಪ್ರತಿಪಾದನೇತ್ ಸ್ವಯಂಭೂ–ಹಿರಣ್ಯಗರ್ಭ–ಪ್ರಜಾಪ್ರತಿ ಶಬ್ದಾನಾಂ ನಾರಾಯಣೇ ಪರ್ಯವಸಾನಂ ಯುಕ್ತಂ, ಇತಿ ನಾರಾಯಣ ಏವ ಅಖಿಲ ಜಗತ್ಕಾರಣಂ ಸರ್ವವಿದ್ಯಾವೇದ್ಯಶ್ಚ ।

೮. ನನು ಅಂತರಾದಿತ್ಯವಿದ್ಯಾ ರುದ್ರಪರೇತಿ ಶಂಕಾ ನ ಕರ್ತವ್ಯಾ । ತಸ್ಯಾ ವಿಷ್ಣುಪರತ್ವಸ್ಯೈವ ಬಹುಪ್ರಮಾಣೇಷು ಸಿದ್ಧತ್ವಾತ್ । ಭರ್ಗಶಬ್ದಸ್ಯ ಸಕಾರಾಂತತ್ವಪ್ರತಿಪಾದನಾಚ್ಚ ।

೯. ತರ್ಹಿ ದಹರವಿದ್ಯಾಯಾಂ ಆಕಾಶಶಬ್ದವಾಚ್ಯನಾರಾಯಣಾಂತ

---

ನಿಷತ್ತು, ಸುಬಾಲೋಪನಿಷತ್ತು, ಮೈತ್ರಾಯಣೀಯ, ಪುರುಷಸೂಕ್ತ ನಾರಾಯಣಾನುವಾಕ, ಅಂತರ್ಯಾಮಿಬ್ರಾಹ್ಮಣ ಮುಂತಾದವುಗಳು ಶ್ರೀಮನ್ನಾರಾಯಣನೇ ಪರಮಕಾರಣನೆಂದೂ ಸರ್ವಶಬ್ದವಾಚ್ಯನೆಂದೂ ಮೋಕ್ಷಪ್ರದನೆಂದೂ ಜಗತ್ತನ್ನು ಶರೀರವನ್ನಾಗಿ ಉಳ್ಳವನೆಂದೂ ಪ್ರತಿಪಾದಿಸುತ್ತವೆ. ಆದ್ದರಿಂದ ಹಿರಣ್ಯಗರ್ಭ, ಸ್ವಯಂಭು, ಪ್ರಜಾಪತಿ ಮುಂತಾದ ಶಬ್ದಗಳು ಶ್ರೀಮನ್ನಾರಾಯಣನಲ್ಲಿ ಪರ್ಯವಸಾನವಾಗುವುದೇ ಯುಕ್ತವಾಗಿದೆ. ಆದ್ದರಿಂದ ಶ್ರೀಮನ್ನಾರಾಯಣನೇ ಅಖಿಲ ಜಗತ್ತಿಗೂ ಕಾರಣನಾಗಿದ್ದಾನೆ. ಹಾಗೂ ಎಲ್ಲ ಬಗೆಯ ಬ್ರಹ್ಮವಿದ್ಯೆಗಳಿಂದಲೂ ವೇದ್ಯನಾಗಿದ್ದಾನೆ.

೮. ಅಂತರಾದಿತ್ಯವಿದ್ಯೆಯು ರುದ್ರಪರವಾದುದೇ ತಾನೇ ಎಂಬ ಸಂದೇಹವೂ ಸಲ್ಲದು. ಅದು ವಿಷ್ಣುಪರವಾದುದೆಂದು ಅನೇಕ ಪ್ರಮಾಣಗಳಿಂದ ಸಿದ್ಧವಾಗಿದೆ. ಮೇಲೆ ಹೇಳಿದ ಈ ವಿದ್ಯೆಯಲ್ಲಿ ಬರುವ ಭರ್ಗ ಶಬ್ದ ಸಕಾರಾಂತವಾಗಿರುವುದೆಂದು ಪ್ರತಿಪಾದಿಸಿರುವುದೂ ಇದನ್ನೇ ಸಮರ್ಥಿಸುತ್ತದೆ.

೯. ದಹರವಿದ್ಯೆಯಲ್ಲಿ ಆಕಾಶಶಬ್ದವಾಚ್ಯನಾದ ನಾರಾಯಣನಿಗೆ

ರ್ಯಾಮಿತಯಾ ರುದ್ರಸ್ಯ ಪ್ರತಿಪಾದನಾತ್ ದಹರವಿದ್ಯಾ ರುದ್ರಪರಾ ಇತಿ ನ ಶಂಕನೀಯಮ್ | ನಾರಾಯಣಾಂತರ್ವರ್ತಿ ಗುಣಜಾತಸ್ಯೈವ ಉಪಾಸ್ಯತ್ವೇನ ತತ್ರಾಭಿಧಾನಾತ್ | ಏವಂ ಸರ್ವವಿದ್ಯಾಸ್ವಪಿ ಊಹ್ಯಮ್ | ಅತಃ ಸಮಸ್ತಕಲ್ಯಾಣಗುಣಾತ್ಮಕಂ ಪ್ರಕೃತಿಪುರುಷಾಭ್ಯಾಂ ಭಿನ್ನಂ ತಾಭ್ಯಾಂ ವಿಶಿಷ್ಟಂ ಪರಂ ಬ್ರಹ್ಮ ಜಗತ್ಕಾರಣಂ ನಾರಾಯಣ ಏವ |

೧೦. ನನು ಅದ್ವೈತ ಶ್ರುತ್ಯಾ ಬ್ರಹ್ಮೈಕಮೇವ ಸತ್ಯಂ ನಿರ್ಗುಣಂ ಚ | ತದನ್ಯತ್ ಜ್ಞಾತೃಜ್ಞೇಯಾದಿಕಂ ತಸ್ಮಿನ್ನೇವ ಪರಿಕಲ್ಪಿತಂ ಸರ್ವಂ ಮಿಥ್ಯಾ | ಬ್ರಹ್ಮ ಅವಿದ್ಯಯಾ ಸಂಸರತಿ | ತತ್ವಮಸೀತ್ಯಭೇದಜ್ಞಾನಂ ತನ್ನಿವರ್ತಕಮ್ | ತಸ್ಮಾನ್ನಿರ್ವಿಶೇಷಚಿನ್ಮಾತ್ರೇ ಬ್ರಹ್ಮಣಿ ವೇದಾಂತಾನಾಂ ತಾತ್ಪರ್ಯಮಿತಿ ಮತಾಂತರಸ್ಥೈಃ ಪ್ರತಿಪಾದನಾತ್, ಕಥಂ ನಾರಾಯಣೇ ತಾತ್ಪರ್ಯಂ ತಸ್ಯ ಸಮಸ್ಯಕಲ್ಯಾಣಗುಣಾಕರತ್ವಾದಿಕಥನಂ ಚ ಇತಿಚೇತ್

---

ರುದ್ರನು ಅಂತರ್ಯಾಮಿಯೆಂದು ಹೇಳಿರುವುದರಿಂದ ದಹರವಿದ್ಯೆಯು ರುದ್ರಪರವಾದುದೆಂದು ಸಂದೇಹಪಡಬೇಕಾಗಿಲ್ಲ. ಏಕೆಂದರೆ ಅಲ್ಲಿ ನಾರಾಯಣನೊಳಗಿರುವ ಕಲ್ಯಾಣಗುಣಸಮೂಹಗಳನ್ನು ಉಪಾಸ್ಯತ್ವೇನ ವಿಧಿಸಿದೆ. ಹೀಗೆಯೇ ಇತರ ಎಲ್ಲ ವಿದ್ಯೆಗಳಲ್ಲಿಯೂ ಧ್ಯಾನವಿಷಯವನ್ನು ಊಹಿಸಿಕೊಳ್ಳಬೇಕು. ಆದುದರಿಂದ ಸಮಸ್ತ ಕಲ್ಯಾಣಗುಣಗಳನ್ನು ಹೊಂದಿರುವನೂ ಪ್ರಕೃತಿಪುರುಷರಿಗಿಂತ ವಿಲಕ್ಷಣನಾದವನೂ, ಅವುಗಳೆರಡರಿಂದ ವಿಶಿಷ್ಟನಾದವನೂ ಪರಬ್ರಹ್ಮಸ್ವರೂಪಿಯೂ ಆದ ಶ್ರೀಮನ್ನಾರಾಯಣನೇ ಜಗತ್ಕಾರಣನಾಗಿದ್ದಾನೆ.

೧೦. ಅದ್ವೈತಶ್ರುತಿಗಳಿಗನುಸಾರವಾಗಿ ಬ್ರಹ್ಮವೊಂದೇ ಸತ್ಯ. ಅದು ನಿರ್ಗುಣ. ಅದಕ್ಕಿಂತ ಬೇರೆಯಾದ ಜ್ಞಾತೃ, ಜ್ಞೇಯ ಮುಂತಾದವೆಲ್ಲಾ ಅದರಲ್ಲಿಯೇ ಕಲ್ಪಿತವಾಗಿ ಸುಳ್ಳಾಗಿವೆ. ಬ್ರಹ್ಮವಸ್ತುವೇ ಅವಿದ್ಯೆಯ ಕಾರಣ ಸಂಸಾರದಲ್ಲಿ ಭ್ರಮಿಸುತ್ತದೆ. ಈ ಅಜ್ಞಾನವನ್ನು ಹೋಗಲಾಡಿಸುವುದು 'ನೀನು ಅದೇ ಆಗಿರುವಿ' ಎಂಬಂಥ ಅದ್ವೈತಜ್ಞಾನ. ಆದ್ದರಿಂದ ವೇದಾಂತವಾಕ್ಯಗಳಿಗೆಲ್ಲಾ ಅಶೇಷವಿಶೇಷಶೂನ್ಯವಾದ ಶುದ್ಧಚೈತನ್ಯವನ್ನು

ಉಚ್ಯತೇ । ಕಾರಣತ್ವಪ್ರತಿಪಾದಕಶ್ರುತಿಭಿಃ ನಾರಾಯಣಸ್ಯ ಕಾರಣತ್ವೇ ಸಿದ್ಧೇ ಭೇದಾಭೇದಶ್ರುತ್ಯೋಃ ಘಟಕಶ್ರುತ್ಯಾ ವಿಷಯಭೇದೇನ ವಿರೋಧೇ ಪರಿಹೃತೇ, ನಿರ್ಗುಣಪ್ರತಿಪಾದಕಶ್ರುತೀನಾಂ ಹೇಯಗುಣನಿಷೇಧಕತ್ವಾತ್, ಜ್ಞಾತೃಜ್ಞೇಯಾದಿಕಲ್ಪಕಾವಿದ್ಯಾಯಾ ಏವ ಅಪ್ರಾಮಾಣ್ಯಾತ್ ಬ್ರಹ್ಮಕಾರ್ಯಸ್ಯ ಸತ್ಯತ್ವಾತ್, ಅವಿದ್ಯಯಾ ಸಂಸಾರೇ ಜೀವಗತದೋಷಾಣಾಂ ಬ್ರಹ್ಮಣ್ಯಪಿ ಸಂಭವಾತ್, ತನ್ನಿವರ್ತಕಾಂತರಸ್ಯ ವಕ್ತುಮಶಕ್ಯತ್ವಾತ್ । ಅತಃ ಅದ್ವೈತವಾದಸ್ಯ ಅಸಂಭವಾತ್ ನ ನಿರ್ವಿಶೇಷಚಿನ್ಮಾತ್ರಬ್ರಹ್ಮಸಿದ್ಧಿಃ ।

---

ಪ್ರತಿಪಾದಿಸುವುದರಲ್ಲಿಯೇ ತಾತ್ಪರ್ಯ—. ಎಂಬುದಾಗಿ ಮತಾಂತರವನ್ನವಲಂಬಿಸಿರುವರು ಪ್ರತಿಪಾದಿಸುವಾಗ ಆಯಾ ವಾಕ್ಯಗಳಿಗೆ ನಾರಾಯಣನಲ್ಲಿ ತಾತ್ಪರ್ಯವನ್ನು ಹೇಳುವುದಾಗಲೀ ಅವನು ಸಮಸ್ತಕಲ್ಯಾಣಗುಣಗಳಿಗೆ ನೆಲೆಯಾಗಿದ್ದಾನೆಂಬುದನ್ನಾಗಲೀ ಹೇಗೆ ಹೇಳಬಹುದು ಎಂಬ ಆಕ್ಷೇಪ ತೋರಬಹುದು. ಈ ಆಕ್ಷೇಪಕ್ಕೆ ಸಮಾಧಾನ ಹೀಗಿದೆ. ಜಗತ್ಕಾರಣವನ್ನು ವಿವೇಚಿಸುವ ಶ್ರುತಿಗಳು ಶ್ರೀಮನ್ನಾರಾಯಣನೇ ಕಾರಣನೆಂದು ಸಿದ್ಧಮಾಡುವುದರಿಂದಲೂ, ಭೇದಶ್ರುತಿಗಳಿಗೂ ಅಭೇದಶ್ರುತಿಗಳಿಗೂ ವಿಷಯಗಳು ಬೇರೆ ಬೇರೆಯಾದ ಕಾರಣ ಅವುಗಳಿಗೆ ಪರಸ್ಪರ ವಿರೋಧವಿಲ್ಲವೆಂಬುದನ್ನು ಘಟಕ ಶ್ರುತಿಗಳು ಸಾಧಿಸುವುದರಿಂದಲೂ,[136] ನಿರ್ಗುಣತ್ವವನ್ನು ಪ್ರತಿಪಾದಿಸುವ ಶ್ರುತಿಗಳು ಹೇಯಗುಣವನ್ನು ನಿಷೇಧಿಸುವುದರಿಂದಲೂ,[137] ಜ್ಞಾತೃ, ಜ್ಞೇಯ ಮುಂತಾದವು ಕಲ್ಪಿತವಾದವೆಂದು ಸಾಧಿಸುವ ಅವಿದ್ಯೆಗೇ ಪ್ರಾಮಾಣ್ಯವಿಲ್ಲದ ಕಾರಣ ಬ್ರಹ್ಮವಸ್ತುವಿನಿಂದಾದ ಸೃಷ್ಟಿಯು ಸತ್ಯವಾಗಿರುವುದರಿಂದಲೂ, ಅವಿದ್ಯೆಯ ದೆಸೆಯಿಂದ ಸಂಸಾರದಲ್ಲಿ ಜೀವನಿಗೆ ಸಂಭವಿಸುವ ದೋಷಗಳು ಬ್ರಹ್ಮವಸ್ತುವಿಗೂ ಸಂಭವಿಸಿಬಿಡುವುದರಿಂದಲೂ, ಬ್ರಹ್ಮವಸ್ತುವಿಗೆ ಸಂಭವಿಸುವ ಆ ದೋಷಗಳನ್ನು ಪರಿಹರಿಸುವ ಮತ್ತೊಂದನ್ನು ಹೇಳುವುದಕ್ಕಾಗದಿರುವುದರಿಂದಲೂ ಅದ್ವೈತವಾದವು ಅಸಂಭವವೇ ಸರಿ. ಆದ್ದರಿಂದಲೇ ನಿರ್ವಿಶೇಷಚಿನ್ಮಾತ್ರಬ್ರಹ್ಮವೂ ಸಿದ್ಧಿಸುವುದಿಲ್ಲ. ಆದಕಾರಣ ಜಗತ್ಕಾರಣತ್ವ, ಮೋಕ್ಷಪ್ರದತ್ವ ಮುಂತಾದ ಗುಣಗಳ ಯೋಗವು ಶ್ರೀಮನ್ನಾರಾಯಣನಿಗೇ ಇರುವ ಕಾರಣ ಬ್ರಹ್ಮವಸ್ತು ಸವಿಶೇಷವೇ ಆದುದಾಗಿದೆ.

ಅತೋ ನಾರಾಯಣಸ್ಯೈವ ಜಗತ್ಕಾರಣತ್ವಮೋಕ್ಷಪ್ರದತ್ವಾದಿಗುಣಯೋಗಃ ಸಂಭವತೀತಿ ಸವಿಶೇಷಮೇವ ಬ್ರಹ್ಮ ।

೧೧. ಸೂಕ್ಷ್ಮಚಿದಚಿದ್ವಿಶಿಷ್ಟಂ ಬ್ರಹ್ಮ ಕಾರಣಂ ಸ್ಥೂಲಚಿದಚಿದ್ವಿಶಿಷ್ಟಂ ಬ್ರಹ್ಮ ಕಾರ್ಯಂ ಇತಿ ಕಾರಣಾದನನ್ಯತ್ ಕಾರ್ಯಮಿತಿ ವಿಶಿಷ್ಟಾದ್ವೈತ ವೇದಾಂತಿನಾಂ ಸಂಪ್ರದಾಯಃ ।

೧೨. ಏವಂ ಈಶ್ವರಾಂಗೀಕಾರಾತ್ ನಿರೀಶ್ವರಸಾಂಖ್ಯಮೀಮಾಂಸಕಾದಿ ಮತನಿರಾಸಃ । ತಸ್ಯೈವ ಉಪಾದಾನತ್ವಸ್ವೀಕಾರಾತ್ ಯೋಗಪಶುಪತ ನೈಯ್ಯಾಯಿಕಾನಾಂ ಮತ ನಿರಾಸಃ । ತೈಃ ನಿಮಿತ್ತಮಾತ್ರೇಶ್ವರಾಂಗೀಕಾರಾತ್ । ಈಶ್ವರಸ್ಯ ಕಾರ್ಯಂಪ್ರತಿ ಉಪಾದಾನತ್ವನಿಮಿತ್ತತ್ವವತ್–ಕರ್ತೃತ್ವ ಪ್ರೇರಕತ್ವ–ನಿಯಂಕೃತ್ವ–ಪ್ರಕಾಶಯಿತೃತ್ವ ಸಹಕಾರಿತ್ವ–ಉದಾಸೀನತ್ವಾದಿಕಂ ಅಪಿ ಉಪಪದ್ಯತೇ ।

---

೧೧. ವಿಶಿಷ್ಟಾದ್ವೈತ ವೇದಾಂತಿಗಳ ಸಂಪ್ರದಾಯಕ್ಕನುಸಾರವಾಗಿ ಸೂಕ್ಷ್ಮಾವಸ್ಥೆಯಲ್ಲಿರುವ ಚೇತನಾಚೇತನಗಳಿಂದೊಡಗೂಡಿದ ಬ್ರಹ್ಮವೇ ಕಾರಣ. ಸ್ಥೂಲಾವಸ್ಥೆಯಲ್ಲಿರುವ ಚೇತನಾಚೇತನಗಳಿಂದೊಡಗೂಡಿದ ಬ್ರಹ್ಮವೇ ಕಾರ್ಯ. ಆದುದರಿಂದಲೇ ಕಾರಣಕ್ಕಿಂತ ಕಾರ್ಯವು ಬೇರೆಯಾದುದಲ್ಲ.

೧೨. ಹೀಗೆ ಈ ಸಿದ್ಧಾಂತ ಈಶ್ವರನನ್ನು ಅಂಗೀಕರಿಸಿ ನಿರೀಶ್ವರ ಸಾಂಖ್ಯರು ಮೀಮಾಂಸಕರು ಮೊದಲಾದವರ ಮತವನ್ನು ನಿರಾಕರಿಸಿದೆ. ಹಾಗೆಯೇ ಈಶ್ವರನಿಗೇ ಉಪಾದಾನಕಾರಣತ್ವವನ್ನು ಅಂಗೀಕರಿಸಿರುವ ಕಾರಣ ಯೋಗ, ಪಾಶುಪತ ಮತ್ತು ನೈಯ್ಯಾಯಿಕರ ಮತವನ್ನು ಖಂಡಿಸುತ್ತದೆ. ಇವರೆಲ್ಲ ಈಶ್ವರನಿಗೆ ನಿಮಿತ್ತ ಕಾರಣತ್ವವನ್ನು ಮಾತ್ರ ಒಪ್ಪಿರುವುದು ಈ ನಿರಾಕರಣೆಗೆ ಕಾರಣ. ಈಶ್ವರನು ಸೃಷ್ಟಿಕಾರ್ಯಕ್ಕೆ ಉಪಾದಾನಕಾರಣನೂ ನಿಮಿತ್ತಕಾರಣನೂ ತಾನೇ ಆಗಿರುವಂತೆಯೇ ಕರ್ತೃವೂ ಪ್ರೇರಕನೂ, ನಿಯಾಮಕನೂ, ಪ್ರಕಾಶಕನೂ, ಸಹಕಾರಿಯೂ, ಉದಾಸೀನನೂ ತಾನೇ ಆಗಿದ್ದಾನೆಂಬುದು ಉಪಪನ್ನವಾಗುತ್ತದೆ.

೧೩. ಬಾಲ್ಯಯೌವ್ವನಾವಸ್ಥಾದಯೋ ದೋಷಾ ಯಥಾ ಶರೀರ ಗತಾಃ ನ ತು ಶರೀರಿಣಿ ಜೀವೇ ಏವಂ ಚಿದಚಿಚ್ಛರೀರಿಣಃ ಪರಮಾತ್ಮನೋಽಪೀತಿ ನ ನಿರ್ವಿಕಾರಶ್ರುತಿವಿರೋಧಃ । ನಿಯಮೇನ ಆಧೇಯತ್ವವಿಧೇಯತ್ವಶೇಷತ್ವಾದೇಃ ಶರೀರಲಕ್ಷಣಸ್ಯ ಜಗತಿ ವಿದ್ಯಮಾನತ್ವಾತ್ ಜಗಚ್ಛರೀರೀ ಈಶ್ವರಃ ತದ್ಗತದೋಷೈರಸಂಸ್ಪೃಷ್ಟಶ್ಚ ।

೧೪. ಸ ಚ ಈಶ್ವರೋ ವಿಭುಸ್ವರೂಪಃ । ವಿಭುತ್ವಂ ನಾಮ ವ್ಯಾಪಕತ್ವಂ । ತಚ್ಚ ತ್ರಿಧಾ ಸ್ವರೂಪತೋ ಧರ್ಮಭೂತಜ್ಞಾನತೋ ವಿಗ್ರಹತಶ್ಚ । ಸ ಚ ಅನಂತ ಇತ್ಯುಚ್ಯತೇ । ಅನಂತೋ ನಾಮ ತ್ರಿವಿಧಪರಿಚ್ಛೇದ ರಹಿತಃ । ತ್ರಿವಿಧಃ ಪರಿಚ್ಛೇದಸ್ತು ದೇಶತಃ ಕಾಲತೋ ವಸ್ತುತಃ ।

---

೧೩. ಬಾಲ್ಯಾವಸ್ಥೆ, ಯೌವ್ವನಾವಸ್ಥೆ ಮುಂತಾದ ಅವಸ್ಥೆಗಳಿಗೆ ಸಂಬಂಧಿಸಿದ ದೋಷಗಳು ಶರೀರಕ್ಕೆ ಮಾತ್ರ ಸಂಬಂಧಿಸುತ್ತವೆಯೇ ವಿನಾ ಶರೀರಿಯಾದ ಜೀವನಿಗೆ ಸಂಬಂಧಿಸುವುದಿಲ್ಲ. ಹಾಗೆಯೇ ಚೇತನಾಚೇತನ ಗಳನ್ನು ಶರೀರವನ್ನಾಗಿ ಉಳ್ಳ ಪರಮಾತ್ಮನಿಗೂ ಸಹ. ಆದ್ದರಿಂದಲೇ ಬ್ರಹ್ಮವಸ್ತು ವಿಕಾರರಹಿತವೆಂದು ಹೇಳುವ ನಿರ್ವಿಕಾರ ಶ್ರುತಿಗಳಿಗೆ ಈ ಬಗೆಯ ಶರೀರತ್ವವು ವಿರುದ್ಧವಾಗಿಲ್ಲ[138]. ಲೋಕದಲ್ಲಿ ಶರೀರವೆಂಬುದಕ್ಕೆ ನಿಯಮೇನ ಆಧೇಯತ್ವ, ವಿಧೇಯತ್ವ ಮತ್ತು ಶೇಷತ್ವಗಳು ಲಕ್ಷಣಗಳಾಗಿರುವುದು ಕಂಡುಬರುವುದರಿಂದ ಜಗತ್ತನ್ನೇ ಶರೀರವನ್ನಾಗಿ ಉಳ್ಳ ಈಶ್ವರನೂ ಸಹ ಆ ಶರೀರದೋಷಗಳಿಂದ ಅಸಂಸ್ಪೃಷ್ಟನಾಗಿದ್ದಾನೆ.

೧೪. ಈಶ್ವರನು ವಿಭುಸ್ವರೂಪಿ. ವಿಭುತ್ವವೆಂದರೆ ವ್ಯಾಪಕತ್ವ. ಈ ವಿಭುತ್ವ ಮೂರು ಬಗೆಯಾಗಿದೆ—ಸ್ವರೂಪತಃ ವಿಭುವಾಗಿರುವುದು, ಧರ್ಮಭೂತಜ್ಞಾನದ ಮೂಲಕ ವಿಭುವಾಗಿರುವುದು ಮತ್ತು ಶರೀರದ ಮೂಲಕ ವಿಭುವಾಗಿರುವುದು ಎಂದು. ಈಶ್ವರನು ಅನಂತನು ಎಂದೂ ಹೇಳಿದೆ. ದೇಶ, ಕಾಲ ಮತ್ತು ವಸ್ತು ಇವುಗಳಿಗೆ ಸಂಬಂಧಿಸಿದಂತೆ ಮೂರುಬಗೆಯ ಪರಿಚ್ಛೇದ ಗಳೂ ಇಲ್ಲದವನು ಅನಂತನು.

೧೫. ಸತ್ಯತ್ವ–ಜ್ಞಾನತ್ವ–ಆನಂದತ್ವ–ಅಮಲತ್ವಾದಯಃ ಈಶ್ವರಸ್ಯ ಸ್ವರೂಪ ನಿರೂಪಕ ಧರ್ಮಾಃ । ಜ್ಞಾನಶಕ್ತ್ಯಾದಯೋ ನಿರೂಪಿತಸ್ವರೂಪ ಧರ್ಮಾಃ । ಸರ್ವಜ್ಞತ್ವಸರ್ವಶಕ್ತಿತ್ವಾದಯಃ ಸೃಷ್ಟ್ಯುಪಯುಕ್ತಾ ಧರ್ಮಾಃ । ವಾತ್ಸಲ್ಯಸೌಶೀಲ್ಯಸೌಲಭ್ಯಾದಯಃ ಆಶ್ರಯಣೋಪಯುಕ್ತಾ ಧರ್ಮಾಃ । ಕಾರುಣ್ಯಾದಯೋ ರಕ್ಷಣೋಪಯುಕ್ತಾಧರ್ಮಾಃ । ಏತೇಷಾಂ ಸ್ವರೂಪಂ ಬುದ್ಧಿಪರಿಚ್ಛೇದೇ ನಿರೂಪಿತಮಿತಿ ಇಹ ನ ಪ್ರಪಂಚ್ಯತೇ ।

೧೬. ಅಯಮೀಶ್ವರಃ ಅಂಡಸೃಷ್ಟ್ಯನಂತರಂ ಚತುರ್ಮುಖ ದಕ್ಷ ಕಾಲಾದಿಷು ಅಂತರ್ಯಾಮಿತಯಾ ಸ್ಥಿತ್ವಾ ಸೃಷ್ಟಿಂ ಕರೋತಿ । ವಿಷ್ಣವತಾರ ರೂಪೇಣ ಮನುಕಾಲಾದ್ಯಂತರ್ಯಾಮಿರೂಪೇಣ ಚ ಸ್ಥಿತ್ವಾ ರಕ್ಷಕೋ ಭವತಿ । ಅತಃ ಸೃಷ್ಟಿ ಸ್ಥಿತಿ ಸಂಹಾರ ಕರ್ತಾ ಚ ಭವತಿ ।

---

೧೫. ಸತ್ಯತ್ವ, ಜ್ಞಾನತ್ವ, ಆನಂದತ್ವ, ಅಮಲತ್ವ ಮುಂತಾದವು ಈಶ್ವರನ **ಸ್ವರೂಪನಿರೂಪಕ** ಧರ್ಮಗಳು. ಜ್ಞಾನ, ಶಕ್ತಿ ಮುಂತಾದವು **ನಿರೂಪಿತಸ್ವರೂಪವಿಶೇಷಣಗಳು.** ಸರ್ವಜ್ಞತ್ವ, ಸರ್ವಶಕ್ತಿತ್ವ ಮುಂತಾದವು ಸೃಷ್ಟಿ ಮುಂತಾದವುಗಳಿಗೆ ಬೇಕಾದ ಗುಣಗಳು. ವಾತ್ಸಲ್ಯ, ಸೌಶೀಲ್ಯ, ಸೌಲಭ್ಯ ಮುಂತಾದವು ಆಶ್ರಿತರನ್ನು ಕಾಪಾಡಲು ಉಪಯುಕ್ತವಾದ ಗುಣಗಳು. ಇವುಗಳ ಸ್ವರೂಪವನ್ನು ಬುದ್ಧಿಪರಿಚ್ಛೇದದಲ್ಲಿ ನಿರೂಪಿಸ ಲಾಗುವುದು.

೧೬. ಈ ಈಶ್ವರನು ಅಂಡಸೃಷ್ಟಿಯನ್ನು ಮಾಡಿದ ನಂತರ ಚತುರ್ಮುಖ ದಕ್ಷ, ಕಾಲ ಮುಂತಾದವರಲ್ಲಿ ಅಂತರ್ಯಾಮಿಯಾಗಿ ನಿಂತು ಮುಂದಿನ ಸೃಷ್ಟಿ ಯನ್ನು ನಡೆಸುತ್ತಾನೆ. ವಿಷ್ಣುವಿನ ಅವತಾರರೂಪದಲ್ಲಿಯೂ ಮನು, ಕಾಲ ಮುಂತಾದವರಲ್ಲಿ ಅಂತರ್ಯಾಮಿರೂಪದಲ್ಲಿಯೂ ನಿಂತು ಸಂರಕ್ಷಕ ನಾಗುತ್ತಾನೆ. ರುದ್ರ, ಕಾಲ, ಅಂತಕ ಮುಂತಾದವರಲ್ಲಿ ಅಂತರ್ಯಾಮಿ ಯಾಗಿ ನಿಂತು ಸಂಹಾರ ಕಾರ್ಯವನ್ನೂ ಮಾಡುತ್ತಾನೆ. ಆದುದರಿಂದಲೇ ಅವನು ಸೃಷ್ಟಿಸ್ಥಿತಿಸಂಹಾರಕರ್ತನಾಗುತ್ತಾನೆ.

೧೭. ಏವಂಪ್ರಕಾರಃ ಈಶ್ವರಃ ಪರ–ವ್ಯೂಹ–ವಿಭವ–ಅಂತರ್ಯಾಮಿ–ಅರ್ಚಾವತಾರ ರೂಪೇಣ ಪಂಚಪ್ರಕಾರಃ |

೧೮. ತತ್ರ ಪರೋ ನಾಮ ತ್ರಿಪಾದ್ವಿಭೂತೌ ಕುಮುದ–ಕುಮುದಾಕ್ಷ – ಪುಂಡರೀಕ–ವಾಮನ–ಶಂಕುಕರ್ಣ – ಸರ್ವನೇತ್ರ–ಸುಮುಖ – ಸುಪ್ರತಿಷ್ಠಿತಾದಿಭಿಃ ದಿವ್ಯಾಯುಧಭೂಷಣಪರಿಜನಪರಿಚ್ಛದಾನ್ವಿತೈಃ ದಿವ್ಯನಗರಪಾಲಕೈಃ ಪರಿರಕ್ಷಿತೇ ಶ್ರೀಮದ್ವೈಕುಂಠಾಖ್ಯೇ ಪುರೇ ಚಂಡ–ಪ್ರಚಂಡ–ಭದ್ರ–ಸುಭದ್ರ-ಜಯ–ವಿಜಯ – ಧಾತೃ – ವಿಧಾತೃಪ್ರಭೃತಿಭಿಃ ದ್ವಾರಪಾಲಕೈಃ ಉಪೇತೇ ಶ್ರೀಮದ್ದಿವ್ಯಾಲಯೇ ಶ್ರೀಮಹಾಮಣಿಮಂಡಪೇ ಧರ್ಮಾದ್ಯಷ್ಟಪಾದವಿರಚಿತಸಿಂಹಾಸನೇ ಶೇಷಪರ್ಯಂಕೇ ದಿವ್ಯಮಂಗಲವಿಗ್ರಹ ವಿಶಿಷ್ಟಃ ಚತುರ್ಭುಜಃ ಶ್ರೀಭೂನೀಲಾಸಹಿತಃಶಂಖಚಕ್ರಾದಿದಿವ್ಯಾಯುಧೋಪೇತಃ ಶ್ರೀಮತ್ಕಿರೀಟಾದಿದಿವ್ಯಭೂಷಣಭೂಷಿತಃ, ಅನಂತಗರುಡವಿಷ್ವಕ್ಸೇನಾದಿಭಿಃ

---

೧೭. ಈ ಬಗೆಯಾದ ಈಶ್ವರನು ಪರ, ವ್ಯೂಹ, ವಿಭವ, ಅಂತರ್ಯಾಮಿ ಮತ್ತು ಅರ್ಚಾ ಎಂಬ ಐದು ವ್ಯೂಹಗಳಲ್ಲಿದ್ದಾನೆ.

೧೮. ಪರಬ್ರಹ್ಮ, ಪರವಾಸುದೇವ ಮುಂತಾದ ಹೆಸರುಗಳಿಂದ ವಾಚ್ಯನಾದವನೂ, ಜ್ಞಾನ, ಶಕ್ತಿ ಮುಂತಾದ ಅನಂತಕಲ್ಯಾಣಗುಣಗಳಿಂದ ಕೂಡಿದವನೂ, ಅನಂತ, ಗರುಡ, ವಿಷ್ವಕ್ಸೇನ, ಮುಂತಾದ ನಿತ್ಯರುಗಳಿಂದಲೂ, ಸಾಮಗಾನಮಾಡುತ್ತಿರುವ ಇತರ ಮುಕ್ತಾತ್ಮರುಗಳಿಂದಲೂ ಅನುಭವಿಸಲ್ಪಡುತ್ತಿರುವವನೂ, ದಿವ್ಯಮಂಗಲ ವಿಗ್ರಹದಿಂದ ಕೂಡಿದವನೂ, ಚತುರ್ಭುಜನಾದವನೂ, ಶ್ರೀದೇವಿ ಭೂದೇವಿ ನೀಳಾದೇವಿಯರಿಂದ ಕೂಡಿದವನೂ, ಶಂಖ, ಚಕ್ರ ಮುಂತಾದ ದಿವ್ಯಾಯಧಗಳಿಂದ ಭೂಷಿತನಾದವನೂ, ಶ್ರೀಮಂತವಾದ ಕಿರೀಟವೇ ಮುಂತಾದ ದಿವ್ಯಭೂಷಣಗಳಿಂದಲಂಕೃತನೂ, ದಿವ್ಯವಾದ ಆಯುಧಗಳೇನು, ಭೂಷಣಗಳೇನು, ಪರಿಜನರೇನು, ಪರಿಕರಣಗಳೇನು ಇವುಗಳಿಂದ ಕೂಡಿರುವ ಕುಮುದ, ಕುಮುದಾಕ್ಷ, ಪುಂಡರೀಕ, ವಾಮನ, ಶಂಕುಕರ್ಣ, ಸರ್ವನೇತ್ರ, ಸುಮುಖ, ಸುಪ್ರತಿಷ್ಠಿತ ಮುಂತಾದ ನಗರಪಾಲಕರಿಂದ ರಕ್ಷಿಸಲ್ಪಡುತ್ತಿರುವ ಶ್ರೀ ವೈಕುಂಠವೆಂಬ ನಗರದಲ್ಲಿ ಚಂಡ, ಪ್ರಚಂಡ, ಭದ್ರ,

ನಿತ್ಯೈಃ ಸಾಮಗಾನಪರ್ಯೈಃ ಅನ್ಯೈಃ ಮುಕ್ತೈಶ್ಚ ಅನುಭೂಯಮಾನಃ ಜ್ಞಾನ ಶಕ್ತ್ಯಾದ್ಯನಂತಕಲ್ಯಾಣಗುಣವಿಶಿಷ್ಟಃ ಪರಬ್ರಹ್ಮಪರವಾಸುದೇವಾದಿ ಶಬ್ದ ವಾಚ್ಯೋ ನಾರಾಯಣಃ ।

೧೯. ವ್ಯೂಹೋ ನಾಮ ಪರ ಏವ ಉಪಾಸನಾರ್ಥಂ ಜಗತ್ಸೃಷ್ಟ್ಯಾದ್ಯರ್ಥಂ ಚ ವಾಸುದೇವ–ಸಂಕರ್ಷಣ–ಪ್ರದ್ಯುಮ್ನ–ಅನಿರುದ್ಧ ಭೇದೇನ ಚತುರ್ಧಾ ಅವಸ್ಥಿತಃ । ತತ್ರ ಷಡ್ಗುಣಪೂರ್ಣಃ ಶ್ರೀ ವಾಸುದೇವಃ । ಜ್ಞಾನ ಬಲಾಭ್ಯಾಂ ಸಂಕರ್ಷಣಃ । ಐಶ್ವರ್ಯವೀರ್ಯಾಭ್ಯಾಂ ಪ್ರದ್ಯುಮ್ನಃ ।. ಶಕ್ತಿ ತೇಜೋಭ್ಯಾಂ ಅನಿರುದ್ಧ ಇತಿ ಗುಣ ವಿಭಾಗಃ ।

೨೦. ಏತೇಷು ಚತುರ್ಷು ಪ್ರತ್ಯೇಕಂ ತ್ರಯಸ್ತ್ರಯೋ ಅವತೀರ್ಣಾಃ

---

ಸುಭದ್ರ, ಜಯ, ವಿಜಯ, ಧಾತೃ, ವಿಧಾತೃ ಮುಂತಾದ ದ್ವಾರಪಾಲಕರಿಂದ ಸೇವಿಸಲ್ಪಡುತ್ತಿರುವ ಶ್ರೀಮದ್ದಿವ್ಯಾಲಯದಲ್ಲಿರುವ ಮಹಾಮಣಿಮಂಟಪದಲ್ಲಿ ಧರ್ಮವೇ ಮೊದಲಾದ ಎಂಟು ಪಾದಗಳಿಂದ ರಚಿತವಾದ ಸಿಂಹಾಸನದ ಮೇಲೆ ಇರುವ ಆದಿಶೇಷನ ಪರ್ಯಂಕದ ಮೇಲೆ ವಿರಾಜಿಸಿರುವವನೂ ಆದ ತ್ರಿಪಾದ್ವಿಭೂತಿಯಲ್ಲಿರುವ ಶ್ರೀಮನ್ನಾರಾಯಣನು ಪರಸ್ವರೂಪಿಯು.

೧೯. ಈ ಪರರೂಪಿಯೇ ತನ್ನನ್ನು ಉಪಾಸನೆ ಮಾಡಲನುಕೂಲಿಸುವುದಕ್ಕಾಗಿಯೂ, ಜಗತ್ಸೃಷ್ಟಿಯೇ ಮೊದಲಾದವುಗಳನ್ನು ಮಾಡುವುದಕ್ಕಾಗಿಯೂ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಎಂಬ ಭೇದದಿಂದ ನಾಲ್ಕು ರೂಪವಾಗಿರುವುದು ವ್ಯೂಹವೆನಿಸುವುದು[139]. ಇವರಲ್ಲಿ ಶ್ರೀ ವಾಸುದೇವನು ಷಡ್ಗುಣಪೂರ್ಣನು. ಸಂಕರ್ಷಣನು ಜ್ಞಾನ ಮತ್ತು ಬಲಗಳಿಂದ ಕೂಡಿದವನು. ಪ್ರದ್ಯುಮ್ನನು ಐಶ್ವರ್ಯ ಮತ್ತು ವೀರ್ಯಗಳನ್ನುಳ್ಳವನು. ಶಕ್ತಿ ಮತ್ತು ತೇಜಸ್ಸುಗಳನ್ನುಳ್ಳವನು ಅನಿರುದ್ಧನು. ಹೀಗೆ ಗುಣಗಳ ವಿಭಾಗವೆಂದರಿಯಬೇಕು

೨೦. ಈ ನಾಲ್ಕು ವ್ಯೂಹಗಳಲ್ಲಿ ಒಂದೊಂದೂ ಮೂರು ಮೂರು ವ್ಯೂಹಾಂತರಗಳಾಗಿ ಕವಲೊಡೆಯುತ್ತದೆ. ಕೇಶವ ಮೊದಲಾದ ಈ ಹನ್ನೆರಡು

ಕೇಶವಾದಯೋ ವ್ಯೂಹಾಂತರಾಣಿ ದ್ವಾದಶಮಾಸಾನಾಂ ದ್ವಾದಶಾದಿತ್ಯಾನಾಂ ಚ ಅಧಿದೈವತಾನಿ। ಊರ್ಧ್ವಪುಂಡ್ರೇಷು ತೇಷಾಮೇವ ಸ್ಥಾನಂ ವಿಧೀಯತೇ।

೨೧. ತತ್ರ ಕನಕಪ್ರಭಃ ಕೇಶವಶ್ಚತುಶ್ಚಕ್ರಧರಃ। ಶ್ಯಾಮೋ ನಾರಾಯಣಶ್ಚತುಃ ಶ್ಯಂಖಧರಃ। ಮಣಿಪ್ರಭಾಭೋ ಮಾಧವಶ್ಚತುರ್ಗದಾಧರಃ। ಚಂದ್ರಾಭೋ ಗೋವಿಂದಶ್ಚತುಃಶಾರ್ಙ್ಗಧರಃ। ಪದ್ಮಕಿಂಜಲ್ಕಸನ್ನಿಭೋ ವಿಷ್ಣುಶ್ಚತುರ್ಹಲಧರಃ। ಅಬ್ಜಾಭೋ ಮಧುಸೂದನಶ್ಚತುರ್ಮುಸಲಧರಃ। ಅಗ್ನಿವರ್ಣಃ ತ್ರಿವಿಕ್ರಮಶ್ಚತುಃಖಡ್ಗಧರಃ। ಬಾಲಸೂರ್ಯಾಭೋ ವಾಮನಶ್ಚತುರ್ವಜ್ರಧರಃ। ಪುಂಡರೀಕಾಭಃ ಶ್ರೀಧರಶ್ಚತುಷ್ಪಟ್ಟೀಶಧರಃ। ತಡಿತ್ಪ್ರಭೋ

---

ವ್ಯೂಹಾಂತರಗಳು ಹನ್ನೆರಡು ತಿಂಗಳುಗಳಿಗೂ ಹನ್ನೆರಡು ಆದಿತ್ಯರುಗಳಿಗೂ ಅಧಿದೈವತಗಳಾಗಿವೆ [14] ದ್ವಾದಶೋರ್ಧ್ವಪುಂಡ್ರಗಳಲ್ಲಿ ಅವರ ಸ್ಥಾನವನ್ನು ಸಂಧಾನ ಮಾಡಬೇಕೆಂದು ವಿಧಿಸಿದೆ.

೨೧. ಈ ವ್ಯೂಹಾಂತರಗಳಲ್ಲಿ ಕೇಶವನು ಕನಕಪ್ರಭೆಯುಳ್ಳವನು; ನಾಲ್ಕು ಚಕ್ರಗಳನ್ನು ಧರಿಸಿರುವವನು ನಾರಾಯಣನು ಶ್ಯಾಮಲವರ್ಣನೂ ನಾಲ್ಕು ಶಂಖಗಳನ್ನು ಧರಿಸಿದವನೂ ಆಗಿದ್ದಾನೆ. ಮಾಧವನು ವಜ್ರದಂತೆ ಪ್ರಕಾಶಿಸುವವನಾಗಿ ನಾಲ್ಕು ಗದೆಗಳನ್ನು ಧರಿಸಿದ್ದಾನೆ. ಚಂದ್ರನಂತೆ ಪ್ರಕಾಶಿಸುವ ಗೋವಿಂದನು ನಾಲ್ಕು ಶಾರ್ಙ್ಗಗಳನ್ನು ಧರಿಸಿದ್ದಾನೆ. ಪದ್ಮಕಿಂಜಲ್ಕದ ಕಾಂತಿಯುಳ್ಳ ವಿಷ್ಣು ನಾಲ್ಕು ನೇಗಿಲುಗಳನ್ನು ಹಿಡಿದಿದ್ದಾನೆ. ಪದ್ಮವರ್ಣನಾದ ಮಧುಸೂದನನು ನಾಲ್ಕು ಒನಕೆಗಳನ್ನು ಧರಿಸಿದ್ದಾನೆ. ಅಗ್ನಿವರ್ಣನಾದ ತ್ರಿವಿಕ್ರಮನು ನಾಲ್ಕು ಖಡ್ಗಗಳನ್ನು ಧರಿಸಿದ್ದಾನೆ. ವಾಮನನು ಬಾಲಸೂರ್ಯನ ಕಾಂತಿಯುಳ್ಳವನಾಗಿ ವಜ್ರಾಯುಧಚತುಷ್ಟಯದಿಂದ ಶೋಭಿಸಿದ್ದಾನೆ. ಬಿಳಿದಾವರೆಯ ಕಾಂತಿಯುಳ್ಳ ಶ್ರೀಧರ ನಾಲ್ಕು ಈಟಿಗಳನ್ನು ಧರಿಸಿದ್ದಾನೆ. ಮಿಂಚಿನ ಕಾಂತಿಯುಳ್ಳ ಹೃಷೀಕೇಶನು ನಾಲ್ಕು ಮುದ್ಗರಗಳನ್ನು ಧರಿಸಿದ್ದಾನೆ. ಸೂರ್ಯಪ್ರಭೆಯುಳ್ಳ ಪದ್ಮನಾಭ ಪಂಚಾಯುಧಧಾರಿಯಾಗಿದ್ದಾನೆ. ಇಂದ್ರಗೋಪಕೀಟದಂತೆ ಕೆಂಬಣ್ಣವುಳ್ಳ ದಾಮೋದರನು ನಾಲ್ಕು ಪಾಶಗಳನ್ನು ಹಿಡಿದಿದ್ದಾನೆ.

ಹೃಷೀಕೇಶಶ್ಚತುರ್ಮುದ್ಗರಧರಃ । ಸೂರ್ಯಾಭಃ ಪದ್ಮನಾಭಃ ಪಂಚಾಯುಧಧರಃ । ಇಂದ್ರಗೋಪನಿಭೋ ದಾಮೋದರಶ್ಚತುಷ್ಪಾಶಧರಃ ।

೨೨. ವಿಭವೋ ನಾಮ ತತ್ತತ್ಸಜಾತೀಯರೂಪೇಣ ಆವಿರ್ಭಾವಃ । ಸ ದಶಧಾ–ತೇ ಚ ಮತ್ಸ್ಯಾದಯೋ ಅವತಾರವಿಶೇಷಾಃ ।

೨೩. ತತ್ರ ವೇದಾಪಹಾರಿದೈತ್ಯನಿರಸನದ್ವಾರಾ ಬ್ರಹ್ಮಣೇ ಪ್ರಮಾಣಪ್ರದತ್ವಾರ್ಥಂ ಅವತೀರ್ಣೋ ಮತ್ಸ್ಯಾವತಾರಃ । ದೇವಾನಾಂ ಅಜರಾಮೃತಿಹೇತ್ವಮೃತೋತ್ಪಾದನೇ ಮಂದರಾಧಾರತ್ವೇನ ಅವತೀರ್ಣಃ ಕೂರ್ಮಾವತಾರಃ । ಸಂಸಾರಸಾಗರೋನ್ಮಗ್ನ ಜನೋದ್ಧರ್ತುಕಾಮಃ ಸ್ವಮಹಿಷೀಭೂಮ್ಯುದ್ಧರಣಾರ್ಥಂ ಅವತೀರ್ಣೋ ವರಾಹಾವತಾರಃ । ಆಶ್ರಿತ

---

೨೨. ತಾನು ಎಲ್ಲಿ ಅವತರಿಸುವನೋ ಆಯಾ ಜಾತಿಯ ರೂಪದಿಂದಲೇ ಹುಟ್ಟುವುದು ವಿಭವಾವತಾರ. ಇದು ಹತ್ತುಬಗೆ. ಮತ್ಸ್ಯ, ಕೂರ್ಮ ಮುಂತಾದವು ಈ ಅವತಾರ ವಿಶೇಷಗಳು.[141]

೨೩. ವೇದಗಳನ್ನಪಹರಿಸಿದ ದೈತ್ಯರನ್ನು ನಾಶಪಡಿಸುವುದರ ಮೂಲಕ ಚತುರ್ಮುಖಬ್ರಹ್ಮನಿಗೆ ಆ ಪ್ರಮಾಣಗಳನ್ನು ಪ್ರದಾನಮಾಡುವುದಕ್ಕಾಗಿ ಮತ್ಸ್ಯಾವತಾರವಾಯಿತು. ದೇವತೆಗಳಿಗೆ ಮುಪ್ಪು ಸಾವುಗಳು ಇಲ್ಲದಿರುವುದಕ್ಕಾಗಿ ಅಮೃತಮಥನ ಮಾಡಿಸಲು ಮಂದರಪರ್ವತಕ್ಕಾಧಾರವಾಗಿ ಕೂರ್ಮರೂಪಿಯು ಅವತರಿಸಿದನು. ಸಂಸಾರಸಾಗರದಲ್ಲಿ ಮುಳುಗಿಹೋಗುತ್ತಿರುವ ಜನರನ್ನುದ್ಧಾರಮಾಡಲಿಚ್ಛಿಸುವ ದೇವನು ತನ್ನ ಮಹಿಷಿಯಾದ ಭೂದೇವಿಯನ್ನು ರಕ್ಷಿಸಲು ವರಾಹನಾಗಿ ಅವತರಿಸಿದನು. ಆಶ್ರಿತನನ್ನು ಸಂರಕ್ಷಿಸುವುದಕ್ಕಾಗಿ, ಮಹಾಸುರನಾದ ಹಿರಣ್ಯಕಶಿಪುವನ್ನು ವಧಿಸುವುದಕ್ಕಾಗಿ ಸ್ತಂಭದಲ್ಲಿ ಶ್ರೀ ನರಸಿಂಹನ ಅವತಾರವಾಯಿತು. ತ್ರಿವಿಕ್ರಮನಾಗಿ ವರ್ಧಿಸಿ ತನ್ನ ಪಾದಕಮಲದಿಂದ ಉದ್ಭವಿಸಿದ ಗಂಗಾಜಲದಿಂದ ಜಗತ್ತಿನ ಪಾಪವನ್ನು ಹೋಗಲಾಡಿಸಿ ಅದನ್ನು ರಕ್ಷಿಸುವುದಕ್ಕಾಗಿ ವಾಮನನ ಅವತಾರವಾಯಿತು. ಪರಶುರಾಮನು ದುಷ್ಟಕ್ಷತ್ರಿಯರನ್ನು ನಿರಸನಮಾಡಲು ಅವತರಿಸಿದನು.

ಸಂರಕ್ಷಣಾರ್ಥಂ ಮಹಾಸುರಂ ಹಂತುಂ ಸ್ತಂಭೇ ಅವತೀರ್ಣೋ ನೃಸಿಂಹಾವತಾರಃ । ತ್ರಿವಿಕ್ರಮೋ ಭೂತ್ವಾ ಸ್ವಪಾದಾರವಿಂದೋದ್ಭವೇನ ಜಲೇನ ಜಗತ್ಪಾಪಹರಣೇನ ತದ್ರಕ್ಷಣಾರ್ಥಂ ಅವತೀರ್ಣೋ ವಾಮನಾವತಾರಃ । ದುಷ್ಟಕ್ಷತ್ರಿಯನಿರಸನಾರ್ಥಂ ಅವತೀರ್ಣಃ ಪರಶುರಾಮಾವತಾರಃ । ಶರಣಾಗತರಕ್ಷಣಧರ್ಮಸ್ಥಾಪನಾರ್ಥಂ ಅವತೀರ್ಣಃ ಶ್ರೀರಾಮಾವತಾರಃ । ಪ್ರಲಂಬಾದಿನಿರಸನಾರ್ಥಂ ಅವತೀರ್ಣೋ ಬಲರಾಮಾವತಾರಃ । ಮೋಕ್ಷೋಪಾಯದರ್ಶನಾರ್ಥಂ ಅವತೀರ್ಣಃ ಶ್ರೀ ಕೃಷ್ಣಾವತಾರಃ । ಅಧರ್ಮಿಷ್ಠಾನ್ನಿರಸ್ಯ ಪೂರ್ಣಧರ್ಮೋತ್ಪಾದನಾರ್ಥಂ ಕಲಿನಿರ್ಮೋಚನಾರ್ಥಂ ಕಲ್ಕ್ಯವತಾರಃ ।

೨೪. ಏವಂ ಏಕೈಕಾವತಾರೇಷು ಅನಂತಪ್ರಕಾರಾಃ ಸಂತಿ । ಷಟ್ತ್ರಿಂಶದ್ಭೇದಭಿನ್ನಾಃ ಪದ್ಮನಾಭಾದಯೋಽಪಿ । ಪುನಃ ದಧಿಭಕ್ತಹಯಗ್ರೀವನರನಾರಾಯಣಾದಯೋಽಪಿ । ಏವಂ ಮುಖ್ಯಗೌಣಪೂರ್ಣಾಂಶಾವೇಶಾದ್ಯವತಾರಾಃ ಬಹುಪ್ರಕಾರಾಃ । ತೇಷು ಉಪಾಸ್ಯಾನುಪಾಸ್ಯವಿಭಾಗೋ ದ್ರಷ್ಟವ್ಯಃ ।

---

ಶರಣಾಗತರನ್ನು ಸಂರಕ್ಷಿಸುವ ಪರಮಧರ್ಮವನ್ನು ಸ್ಥಾಪಿಸುವುದಕ್ಕಾಗಿ ಶ್ರೀರಾಮನು ಅವತರಿಸಿದನು. ಪ್ರಲಂಬಾದಿಗಳನ್ನು ನಾಶಪಡಿಸುವುದಕ್ಕಾಗಿ ಶ್ರೀ ಬಲರಾಮನು ಅವತರಿಸಿದನು. ಜಗತ್ತಿಗೆ ಮೋಕ್ಷೋಪಾಯವನ್ನು ತೋರಿಕೊಡುವುದಕ್ಕಾಗಿ ಶ್ರೀಕೃಷ್ಣನು ಅವತರಿಸಿದನು. ಅಧರ್ಮಿಷ್ಠರನ್ನು ನಾಶಪಡಿಸಿ ಪೂರ್ಣವಾದ ಧರ್ಮವನ್ನು ಸಂಸ್ಥಾಪಿಸಲೂ ಪ್ರಪಂಚವನ್ನು ಕಲಿಯಿಂದ ಮುಕ್ತಿಗೊಳಿಸಲೂ ಆಗುವುದು ಕಲ್ಕ್ಯವತಾರ.

೨೪. ಇಂಥ ಒಂದೊಂದು ಅವತಾರದಲ್ಲಿಯೂ ಅನಂತಪ್ರಕಾರಗಳಿವೆ. ಪದ್ಮನಾಭ ಮುಂತಾದ ಮೂವತ್ತಾರು ಪ್ರಕಾರಗಳೂ ವಿಭವಾವತಾರಗಳೇ [142] ಹಾಗೆಯೇ ದಧಿಭಕ್ತ, ಹಯಗ್ರೀವ, ನರ, ನಾರಾಯಣ ಮುಂತಾದವೂ ಸಹ. ಹೀಗೆಯೇ ಮುಖ್ಯಾವತಾರ, ಗೌಣಾವತಾರ, ಪೂರ್ಣಾವತಾರ, ಅಂಶಾವತಾರ ಮೊದಲಾದವು ಅನೇಕ ಪ್ರಕಾರಗಳಾಗಿವೆ. ಇವುಗಳಲ್ಲಿ ಯಾವುದು ಉಪಾಸ್ಯ ಯಾವುದು ಅನುಪಾಸ್ಯ ಎಂಬುದನ್ನು ಕಂಡುಕೊಳ್ಳಬೇಕು.

೨೫. ಅವತಾರಾಣಾಂ ಇಚ್ಛೈವ ಹೇತುಃ, ನ ತು ಕರ್ಮ| ಪ್ರಯೋಜನಂ ತು ದುಷ್ಕೃತಿವಿನಾಶಪೂರ್ವಕಂ ಸಾಧುಪರಿತ್ರಾಣಮೇವ |

೨೬. ಅಂತರ್ಯಾಮಿತ್ವಂ ನಾಮ ಸ್ವರ್ಗನರಕಾದ್ಯನುಭವದಶಾಯಾಮಪಿ ಜೀವಾತ್ಮನಃ ಸುಹೃತ್ತ್ವೇನ ಯೋಗಿಭಿಃ ದ್ರಷ್ಟವ್ಯತಯಾ ಹೃದಯಪ್ರದೇಶಾವಸ್ಥಿತಂ ರೂಪಂ | ಜೀವೇನ ಸಾಕಂ ವಿದ್ಯಮಾನೋಽಪಿ ತದ್ಗತದೋಷೈಃ ಅಸಂಸ್ಪೃಷ್ಟೋ ವರ್ತತೇ |

೨೭. ಅರ್ಚಾವತಾರೋ ನಾಮ ದೇಶಕಾಲವಿಪ್ರಕರ್ಷರಹಿತ ಆಶ್ರಿತಾಭಿಮತದ್ರವ್ಯಾದಿಕಂ ಶರೀರತಯಾ ಸ್ವೀಕೃತ್ಯ ತಸ್ಮಿನ್ ಅಪ್ರಾಕೃತಶರೀರವಿಶಿಷ್ಟಃ ಸನ್ ಅರ್ಚಕಪರಾಧೀನಸ್ನಾನಭೋಜನಆಸನಶಯನಸ್ಥಿತಿಃ ಸರ್ವಸಹಿಷ್ಣುಃ ಪರಿಪೂರ್ಣೋ ಗೃಹಗ್ರಾಮನಗರಪ್ರಶಸ್ತದೇಶಶೈಲಾದಿಷು ವರ್ತಮಾನೋ ಮೂರ್ತಿವಿಶೇಷಃ |

---

೨೫. ಈ ಅವತಾರಗಳಿಗೆಲ್ಲ ಕಾರಣ ಭಗವತ್ಸಂಕಲ್ಪವೇ ವಿನಾ ಕರ್ಮವಲ್ಲ. ಇವುಗಳ ಪ್ರಯೋಜನವಾದರೂ ದುಷ್ಟಜನರ ವಿನಾಶದ ಮೂಲಕ ಸಾಧುಜನರ ಸಂರಕ್ಷಣೆಯೇ ಆಗಿದೆ.

೨೬. ಸ್ವರ್ಗ, ನರಕ ಮೊದಲಾದವುಗಳ ಅನುಭವಾವಸ್ಥೆಯಲ್ಲಿಯೂ ಜೀವಾತ್ಮನಿಗೆ ಪರಮಸುಹೃತ್ತಾಗಿರುತ್ತಾ ಜೀವನ ಹೃದಯಪ್ರದೇಶದಲ್ಲಿ ನೆಲಸಿದ್ದು ಯೋಗಿಗಳಿಗೆ ಗೋಚರನಾಗಿರುವವನು ಅಂತರ್ಯಾಮಿಸ್ವರೂಪಿಯಾಗಿದ್ದಾನೆ.

೨೭. ದೇಶಕಾಲಗಳ ಅಂತರವಿಲ್ಲದಿರುತ್ತಾ ಆಶ್ರಿತರಿಗೆ ಅಭಿಮತವಾದ ದ್ರವ್ಯಾದಿಗಳನ್ನೇ ಶರೀರವನ್ನಾಗಿ ಹೊಂದಿ ಆ ದ್ರವ್ಯದಲ್ಲಿಯೇ ಅಪ್ರಾಕೃತ ಶರೀರವಿಶಿಷ್ಟನಾಗಿರುತ್ತಾ ಅರ್ಚಕನಿಗೆ ಅಧೀನನಾಗಿ ಸ್ನಾನ, ಭೋಜನ, ಶಯನ ಮುಂತಾದವುಗಳನ್ನು ನಡೆಸಿಕೊಳ್ಳುವವನೂ ಸರ್ವಸಹಿಷ್ಣುವಾದವನೂ, ಪರಿಪೂರ್ಣ ಸ್ವರೂಪನೂ, ಗೃಹವೇನು, ಗ್ರಾಮವೇನು, ನಗರವೇನು, ಪ್ರಶಸ್ತವಾದ ದೇಶಗಳೇನು, ಪರ್ವತಗಳೇನು ಇವುಗಳಲ್ಲಿ ನೆಲಸಿರುವವನೂ ಆದ ಮೂರ್ತಿವಿಶೇಷವು ಅರ್ಚಾವತಾರ.

೨೮. ಸ ಚ ಸ್ವಯಂವ್ಯಕ್ತ – ದೈವ–ಸೈದ್ಧ–ಮಾನುಷಭೇದಾತ್ ಚತುರ್ವಿಧಃ ।

೨೯. ಏವಂ ಉಕ್ತಾಸು ಪಂಚಾವಸ್ಥಾಸ್ವಪಿ ಶ್ರೀವಿಶಿಷ್ಟ ಏವ ಭಗವಾನ್ ವರ್ತತ ಇತಿ ಶ್ರುತ್ಯಾ ಪ್ರಮಾಣಸಿದ್ಧೋಽರ್ಥಃ । ಏತೇನ ಏಕಾಯನೋಕ್ತ ನಿಃಶ್ರೀಕವಾದೋ ನಿರಸ್ತಃ । ಏವಂ ಈಶ್ವರೋ ನಿರೂಪಿತಃ ।

ಇತಿ ಶ್ರೀ ವಾಧೂಲಕುಲತಿಲಕ ಶ್ರೀಮನ್ಮಹಾಚಾರ್ಯಸ್ಯ ಪ್ರಥಮದಾಸೇನ ಶ್ರೀನಿವಾಸದಾಸೇನ ವಿರಚಿತಾಯಾಂ ಯತೀಂದ್ರಮತದೀಪಿಕಾಯಾಂ ಈಶ್ವರ ನಿರೂಪಣಂ ನಾಮ ನವಮೋಽವತಾರಃ

---

೨೮. ಈ ಅರ್ಚಾವತಾರ ಸ್ವಯಂವ್ಯಕ್ತವಾದುದು, ದೈವ (ದಿವ್ಯ ಪುರುಷರಿಂದ ಪ್ರತಿಷ್ಠಾಪಿತವಾದುದು,) ಸೈದ್ಧ (ಸಿದ್ಧಪುರುಷರಿಂದ ಪ್ರತಿಷ್ಠಾಪಿತ ವಾದುದು) ಮತ್ತು ಮಾನುಷ ಎಂದು ನಾಲ್ಕು ಬಗೆಯಾಗಿದೆ.

೨೯. ಮೇಲೆ ಹೇಳಿದ ಐದು ವ್ಯೂಹಗಳಲ್ಲಿಯೂ ಭಗವಂತನು ಶ್ರೀದೇವಿಯಿಂದೊಡಗೂಡಿಯೇ ಇರುವನೆಂಬುದು ಶ್ರುತಿಗಳಿಂದಲೂ ಇತರ ಪ್ರಮಾಣಗಳಿಂದಲೂ ಸಿದ್ಧವಾಗಿದೆ. ಇದರಿಂದ ಏಕಾಯನನ ನಿಃಶ್ರೀಕವಾದ (ಶ್ರೀರಹಿತನಾದ ನಾರಾಯಣನೊಬ್ಬನೇ ಇರುವನೆಂಬ ವಾದ) ನಿರಾಕರಿಸಲಾಗಿದೆ. ಈಶ್ವರ ಸ್ವರೂಪ ನಿರೂಪಣೆ ಇಂತಿದೆ.

ಇಂತು ವಾಧೂಲಕುಲತಿಲಕನೂ ಮಹಾಚಾರ್ಯರ ಪ್ರಥಮದಾಸನೂ ಆದ ಶ್ರೀನಿವಾಸದಾಸನಿಂದ ವಿರಚಿತವಾದ ಯತೀಂದ್ರಮತದೀಪಿಕೆಯಲ್ಲಿ ಈಶ್ವರ ನಿರೂಪಣೆ ಎಂಬ ಒಂಭತ್ತನೆಯ ಅವತಾರ ಮುಗಿದುದು.

## ದಶಮೋಽವತಾರಃ

# ಅದ್ರವ್ಯಮ್

೧. ಏವಂ ದ್ರವ್ಯನಿರೂಪಣಾನಂತರಂ ಕ್ರಮಪ್ರಾಪ್ತಂ ಅದ್ರವ್ಯಂ ನಿರೂಪ್ಯತೇ । ಸಂಯೋಗರಹಿತಂ ಅದ್ರವ್ಯಂ । ತತ್ ಅದ್ರವ್ಯಂ ಚ ಸತ್ವರಜಸ್ತಮಾಂಸಿ ಶಬ್ದ ಸ್ಪರ್ಶರೂಪರಸಗಂಧಾಃ ಸಂಯೋಗಃ ಶಕ್ತಿರಿತಿ ದಶಪ್ರಕಾರಮೇವ ।

೨. ತತ್ರ ಪ್ರಕಾಶ–ಸುಖಲಾಘವಾದಿಸಿದಾನಂ ಅತೀಂದ್ರಿಯಂ ಶಕ್ತ್ಯಾದ್ಯತಿರಿಕ್ತಂ ಅದ್ರವ್ಯಂ ಸತ್ವಂ । ತತ್ದ್ವಿವಿಧಂ–ಶುದ್ಧ ಸತ್ವಂ ಮಿಶ್ರಸತ್ವಂ ಚೇತಿ । ರಜಸ್ತಮಶ್ಶೂನ್ಯದ್ರವ್ಯವರ್ತಿ ಸತ್ವಂ ಶುದ್ಧಸತ್ವಂ । ತನ್ನಿತ್ಯವಿಭೂತೌ ಉಪ

---

## ಹತ್ತನೆಯ ಅವತಾರ

# ಅದ್ರವ್ಯ

೧. ದ್ರವ್ಯಗಳನ್ನು ನಿರೂಪಿಸಿಯಾದ ಮೇಲೆ ಈಗ ಕ್ರಮಪ್ರಾಪ್ತವಾಗಿ ಬಂದ ಅದ್ರವ್ಯವನ್ನು ನಿರೂಪಿಸಲಾಗುತ್ತದೆ. ಸಂಯೋಗವನ್ನು ಯಾವುದು ಹೊಂದಲಾರದೋ ಅದು ಅದ್ರವ್ಯ. ಅದ್ರವ್ಯವು ಹತ್ತು ಬಗೆಯಾಗಿದೆ. ಸತ್ತ್ವ, ರಜಸ್ಸು, ತಮಸ್ಸು, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಸಂಯೋಗ ಮತ್ತು ಶಕ್ತಿ ಎಂಬುವು ಅದ್ರವ್ಯಗಳು,

೨. ಪ್ರಕಾಶಗೊಳಿಸುವುದು, ಸುಖ, ಲಾಘವ ಮೊದಲಾದವುಗಳಿಗೆ ಕಾರಣವಾದುದೂ, ಇಂದ್ರಿಯಗಳಿಗೆ ಅಗೋಚರವಾದುದೂ ಶಕ್ತಿ ಮೊದಲಾದವುಗಳಿಗಿಂತ ಬೇರೆಯಾದುದೂ ಆದ ಅದ್ರವ್ಯ ಸತ್ತ್ವ. ಇದು ಶುದ್ಧ ಸತ್ತ್ವ ಮತ್ತು ಮಿಶ್ರ ಸತ್ತ್ವ ಎಂದು ಎರಡು ಬಗೆ. ರಜಸ್ಸು ತಮಸ್ಸುಗಳಿಲ್ಲದ ದ್ರವ್ಯದಲ್ಲಿರುವ ಸತ್ತ್ವ ಶುದ್ಧ ಸತ್ತ್ವ. ಅದು ನಿತ್ಯವಿಭೂತಿಯಲ್ಲಿದೆ. ಆ ನಿತ್ಯವಿಭೂತಿಯನ್ನು ಪ್ರವರ್ತನಗೊಳಿಸುವ ಈಶ್ವರನಲ್ಲಿದೆಯೆಂದು

ಚಾರಾತ್ ತತ್ಪ್ರವರ್ತಕೇಶ್ವರೇ ಚ | ರಜಸ್ತಮಃ ಸಹವರ್ತಿ ಸತ್ವಂ ಮಿಶ್ರಸತ್ವಂ | ತತ್ ತ್ರಿಗುಣೇ ತತ್ಸಂಬಂಧಿನಿ ಜೀವೇ ಚ ಉಪಚಾರಾತ್ ಇತಿ ಜ್ಞೇಯಂ |

೩. ಲೋಭಪ್ರವೃತ್ತ್ಯಾದಿನಿದಾನಂ ಅತೀಂದ್ರಿಯಂ ಶಕ್ತ್ಯಾದ್ಯತಿರಿಕ್ತಂ ಅದ್ರವ್ಯಂ ರಜಃ |

೪. ಪ್ರಮಾದಮೋಹಾದಿನಿಮಿತ್ತಂ ಅತೀಂದ್ರಿಯಂ ಶಕ್ತ್ಯಾದ್ಯತಿರಿಕ್ತಂ ಅದ್ರವ್ಯಂ ತಮಃ |

೫. ತ್ರೀಣ್ಯಪಿ ಏತಾನಿ ಯಾವತ್ಪ್ರಕೃತಿವ್ಯಾಪ್ತಾನಿ, ಪ್ರಕೃತಿವಶ್ಯ ಪುರುಷಸಂಬದ್ಧಾನಿ, ಅನಿತ್ಯಾನಿ, ನಿತ್ಯಸಂತಾನಾನಿ, ಪ್ರಲಯದಶಾಯಾಂ ಸಮಾನಿ, ಸೃಷ್ಟ್ಯಾದೌ ವಿಷಮಾಣಿ, ಸೃಷ್ಟಿಸ್ಥಿತಿಸಂಹಾರೋಪಯುಕ್ತಾನಿ!

---

ಲಾಕ್ಷಣಿಕವಾಗಿ ಹೇಳಿದೆ. ರಜಸ್ಸುತಮಸ್ಸುಗಳೊಡನೆ ಇರುವ ಸತ್ತ್ವ ಮಿಶ್ರಸತ್ತ್ವ. ಇದು ತ್ರಿಗುಣದಲ್ಲಿಯೂ ಅದರೊಡನೆ ಸಂಬಂಧಿಸಿರುವ ಜೀವನಲ್ಲಿ ಲಾಕ್ಷಣಿಕವಾಗಿಯೂ ಇದೆಯೆಂದು ತಿಳಿಯಬೇಕು.

೩. ಲೋಭ, ಕಾರ್ಯಪ್ರವೃತ್ತಿ ಮೊದಲಾದವುಗಳಿಗೆ ಕಾರಣ ವಾದುದೂ, ಅತೀಂದ್ರಿಯವಾದುದೂ, ಶಕ್ತಿಮೊದಲಾದವುಗಳಿಗಿಂತ ಬೇರೆ ಯಾದುದೂ ಆದ ಅದ್ರವ್ಯ ರಜಸ್ಸು.

೪. ಪ್ರಮಾದ, ಮೋಹಮೊದಲಾದವುಗಳಿಗೆ ಕಾರಣವಾದುದೂ ಅತೀಂದ್ರಿಯವಾದುದೂ, ಶಕ್ತಿ ಮೊದಲಾದವುಗಳಿಗಿಂತ ಬೇರೆಯಾದುದೂ ಆದ ಅದ್ರವ್ಯ ತಮಸ್ಸು.

೫. ಈ ಮೂರೂ ಪ್ರಕೃತಿಯನ್ನೆಲ್ಲಾ ವ್ಯಾಪಿಸಿವೆ; ಪ್ರಕೃತಿಗೆ ಅಧೀನನಾಗಿರುವ ಪುರುಷನೊಡನೆ ಸಂಬಂಧವನ್ನು ಹೊಂದಿವೆ; ಅನಿತ್ಯ ಗಳಾಗಿವೆ ; ಸತತವಾಗಿ ಮುಂದುವರಿಯುವುವಾಗಿವೆ ; ಪ್ರಳಯಕಾಲದಲ್ಲಿ ಸಮಪ್ರಮಾಣದಲ್ಲಿರುವುವು ; ಸೃಷ್ಟಿಕಾಲದಲ್ಲಿ ವಿಷಮಪ್ರಮಾಣದಲ್ಲಿರುವುವು ; ಸೃಷ್ಟಿ ಸ್ಥಿತಿ ಮತ್ತು ಸಂಹಾರಗಳಿಗೆ ಉಪಯುಕ್ತವಾಗಿರುವುವು ; ಈಶ್ವರನ

ಈಶ್ವರಸಂಕಲ್ಪಾದಿಸಹಕಾರಿಭೇದಾತ್ ಪರಸ್ಪರಾಭಿಭವೋದ್ಭವಕರಾಣಿ ಇತ್ಯೇತಾನಿ ಸಾಧಾರಣಾನಿ ।

೬. ಸತ್ವಗುಣಸ್ತು ಸಮ್ಯಕ್‌ಜ್ಞಾನಸುಖಾದಿ ಹೇತುಃ ಮೋಕ್ಷಪ್ರದಶ್ಚ । ರಜೋಗುಣಸ್ತು ರಾಗಾದ್ಯಾತ್ಮಕಃ ಕರ್ಮಸಂಗದುಃಖಾದಿಹೇತುಃ ಸ್ವರ್ಗಾದ್ಯಾಮುಷ್ಮಿಕ ಪ್ರದಃ । ತಮೋಗುಣಸ್ತು ಅಜ್ಞಾನರೂಪಃ ಆಲಸ್ಯಾದಿಹೇತುಃ ನರಕಪ್ರದಶ್ಚ । ಅತಃ ಸತ್ವಾದಯೋ ಗುಣಾಃ ನ ದ್ರವ್ಯರೂಪಾಃ ।

೭. ಅಸ್ಮದಾದಿಶ್ರೋತ್ರಗ್ರಾಹ್ಯಃ ಪಂಚಭೂತವರ್ತೀ ಶಬ್ದಃ । ಸಚ ದ್ವಿವಿಧಃ—ವರ್ಣಾತ್ಮಕಃ ಅವರ್ಣಾತ್ಮಕಶ್ಚೇತಿ । ಅಕಚಟತಪಯಾದಿ ಪಂಚಾಶದಕ್ಷರಾತ್ಮಕೋ ವರ್ಣಾತ್ಮಕಃ । ಸಃ ದೇವಮನುಷ್ಯಾದೀನಾಂ ತಾಲ್ವಾದಿವ್ಯಂಗ್ಯಃ ।

---

ಸಂಕಲ್ಪವೇ ಮೊದಲಾದ ಸಹಕಾರಿಕಾರಣಗಳ ವ್ಯತ್ಯಾಸದ ಕಾರಣ ಇವುಗಳಲ್ಲಿ ಒಂದು ಮತ್ತೆರಡನ್ನು ಅಭಿಭವಿಸುವುದಾಗಿ ಆಗುತ್ತದೆ.

೬. ಸತ್ತ್ವಗುಣವಾದರೋ ಸಮೀಚೀನವಾದ ಜ್ಞಾನ, ಸುಖ ಮೊದಲಾದವುಗಳಿಗೆ ಕಾರಣವಾಗಿದೆ. ಇದು ಮೋಕ್ಷವನ್ನುಂಟುಮಾಡುವುದಾಗಿದೆ. ರಜೋಗುಣವಾದರೋ ರಾಗಮಯವಾದುದು. ಕರ್ಮದಲ್ಲಿ ಆಸಕ್ತಿಗೂ ದುಃಖ ಮೊದಲಾದವುಗಳಿಗೂ ಇದು ಕಾರಣವಾದುದು ; ಸ್ವರ್ಗವೇ ಮೊದಲಾದ ಆಮುಷ್ಮಿಕ ಫಲವನ್ನಿದು ಉಂಟುಮಾಡುತ್ತದೆ. ತಮೋಗುಣವಾದರೋ ಅಜ್ಞಾನರೂಪವಾಗಿ ಆಲಸ್ಯ ಮೊದಲಾದವುಗಳಿಗೆ ಕಾರಣವಾಗಿದೆ. ಇದು ನರಕಕ್ಕೆ ಒಯ್ಯುವುದಾಗಿದೆ. ಆದುದರಿಂದಲೇ ಸತ್ತ್ವ ಮೊದಲಾದ ಗುಣಗಳು ದ್ರವ್ಯಸ್ವರೂಪವನ್ನು ಹೊಂದಿಲ್ಲ.

೭. ಶಬ್ದವು ನಮ್ಮ ಶ್ರವಣೇಂದ್ರಿಯದಿಂದ ಗ್ರಹಿಸಲ್ಪಡುತ್ತದೆ. ಪಂಚಭೂತಗಳಲ್ಲಿರುತ್ತದೆ ಇದು. ವರ್ಣಾತ್ಮಕವಾದುದು, ಅವರ್ಣಾತ್ಮಕವಾದುದು ಎಂದು ಇದು ಎರಡು ಬಗೆಯಾಗಿದೆ. ಅ, ಕ, ಚ, ಟ, ತ, ಪ, ಯ ಮೊದಲಾದ ಐವತ್ತು ಅಕ್ಷರಗಳನ್ನೊಳಗೊಂಡಿರುವುದು ವರ್ಣಾತ್ಮಕವಾದ ಶಬ್ದ. ದೇವತೆಗಳು ಮನುಷ್ಯರು ಮೊದಲಾದವರುಗಳು ತಮ್ಮ ಅಂಗಳ (ತಾಲು)

ಭೇರ್ಯಾದಿಜನ್ಯಃ ಅವರ್ಣಾತ್ಮಕಃ । ಏವಂಭೂತಃ ಶಬ್ದಃ ಶ್ರೋತ್ರೇಂದ್ರಿಯೇಣ ಗೃಹ್ಯತೇ । ಶ್ರೋತ್ರೇಂದ್ರಿಯಗಮನಾದ್ವಾ ವ್ಯಂಜಕವಾಯ್ವಾಗಮನಾತ್ ವಾ ಶಬ್ದಗ್ರಹಃ ।

೮. ನನು ಶ್ರುತ್ಯಾ ಶಬ್ದಸ್ಯ ದ್ರವ್ಯತ್ವಂ ಪ್ರತೀಯತೇ । ಅದ್ರವ್ಯತ್ವಂ ಕಥಂ ಇತಿಚೇತ್ ನ । ಅಕಾರಾದೇಃ ಪ್ರಣವೋತ್ಪಾದಕತ್ವಂ ವಾಚ್ಯದ್ವಾರಾ ಸಂಭವತೀತಿ ಪರಿಹಾರಾತ್ ಅದ್ರವ್ಯತ್ವಂ ಉಪಪದ್ಯತೇ । ಇತಿಶಬ್ದಃ ।

೯. ಅಸ್ಮದಾದಿಸ್ಪರ್ಶನೇಂದ್ರಿಯಗ್ರಾಹ್ಯವಿಜಾತೀಯವ್ಯಾವೃತ್ತಂ ಅದ್ರವ್ಯಂ ಸ್ಪರ್ಶಃ । ಸ ಚ ತ್ರಿವಿಧಃ–ಶೀತೋಷ್ಣ–ಅನುಭಯಾತ್ಮಕಭೇದಾತ್ । ಅಪ್ಸು ಶೀತಸ್ಪರ್ಶಃ । ತೇಜಸಿ ಉಷ್ಣಸ್ಪರ್ಶಃ । ಕ್ಷಿತಿಪವನಯೋಃ ಅನುಷ್ಣಾ

---

ಮೊದಲಾದವುಗಳಿಂದ ಈ ಶಬ್ದವನ್ನು ಅಭಿವ್ಯಕ್ತಗೊಳಿಸುತ್ತಾರೆ ಭೇರೀ ಮೊದಲಾದವುಗಳಿಂದ ಹುಟ್ಟುವ ಶಬ್ದ ಅವರ್ಣಾತ್ಮಕವಾದುದು. ಈ ಬಗೆಯ ಶಬ್ದ ಶ್ರೋತ್ರೇಂದ್ರಿಯದಿಂದ ಗ್ರಹಿಸಲ್ಪಡುತ್ತದೆ. ಶ್ರೋತೇಂದ್ರಿಯದ ಪ್ರಸರಣದಿಂದಾಗಲೀ, ಶಬ್ದವನ್ನು ಅಭಿವ್ಯಕ್ತಗೊಳಿಸುವ ವಾಯು ಶ್ರೋತ್ರೇಂದ್ರಿಯದ ಒಳಗೆ ಪ್ರವೇಶಿಸುವುದರಿಂದಾಗಲೀ ಶಬ್ದಗ್ರಹಣವಾಗುವುದು.

೮, ಶ್ರುತಿಗಳು ಶಬ್ದದ ದ್ರವ್ಯತ್ವವನ್ನು ಪ್ರತಿಪಾದಿಸುವುವಷ್ಟೆ? ಹೀಗಿರಲು ಇದಕ್ಕೆ ಅದ್ರವ್ಯತ್ವವನ್ನು ಹೇಗೆ ಸಾಧಿಸುವುದು ಎಂದು ಆಕ್ಷೇಪಿಸಿದರೆ ಹಾಗಲ್ಲವೆಂದು ಹೇಳುತ್ತೇವೆ. 'ಅ' ಮೊದಲಾದ ಶಬ್ದಗಳಿಂದ ಪ್ರಣವದ ಉತ್ಪತ್ತಿಯು ವಾಚ್ಯಾರ್ಥದ ಮೂಲಕ ಸಂಭವಿಸುತ್ತದೆ. ಹೀಗೆ ಆಕ್ಷೇಪವನ್ನು ಪರಿಹರಿಸಲು ಸಾಧ್ಯವಾಗುವುದರಿಂದ ಶಬ್ದವು ಅದ್ರವ್ಯವೆಂಬುದು ಯುಕ್ತವಾಗುತ್ತದೆ. ಇಷ್ಟು ಶಬ್ದದ ನಿರೂಪಣೆ.

೯. ಸ್ಪರ್ಶವೆಂಬ ಅದ್ರವ್ಯ ನಮ್ಮ ತ್ವಗಿಂದ್ರಿಯದಿಂದ ಗ್ರಾಹ್ಯವಾಗುತ್ತದೆ. ಇದು ವಿಜಾತೀಯವಾದ ಇತರ ಅದ್ರವ್ಯಗಳಿಗಿಂತ ಬೇರೆಯಾಗಿದೆ. ಶೀತ, ಉಷ್ಣ, ಎರಡೂ ಅಲ್ಲದುದು ಎಂದು ಇದು ಮೂರು ವಿಧ. ಶೀತಸ್ಪರ್ಶ ಜಲದಲ್ಲಿದೆ. ಬೆಂಕಿಯಲ್ಲಿ ಉಷ್ಣಸ್ಪರ್ಶವಿದೆ. ಭೂಮಿ ಮತ್ತು ಗಾಳಿಯಲ್ಲಿ

ಶೀತಸ್ಪರ್ಶಃ । ಸ ಚ ಪುನರ್ದ್ವಿವಿಧಃ । ಪಾಕಜಃ ಅಪಾಕಜಶ್ಚೇತಿ । ಪೃಥಿವ್ಯಾಂ ಪೂರ್ವಃ ಇತರೇಷು ತ್ರಿಷು ಇತರಃ । ತತ್ರ ಅಮೃತ–ಗರಲ–ತೂಲೋಪಲ ಗೋಬ್ರಾಹ್ಮಣಚಂಡಾಲಾದಿಸ್ಪರ್ಶವಿಶೇಷಾಃ ಪಾಕಜಭೇದಾಃ । ಇತಿಸ್ಪರ್ಶಃ ।

೧೦. ಅಸ್ಮದಾದಿಚಕ್ಷುರಿಂದ್ರಿಯೈಕಗ್ರಾಹ್ಯವಿಜಾತೀಯವ್ಯಾವೃತ್ತಂ ಅದ್ರವ್ಯಂ ರೂಪಂ । ತಚ್ಚತುರ್ಧಾ–ಶ್ವೇತರಕ್ತಪೀತಕೃಷ್ಣಭೇದಾತ್ । ತತ್ರ ಸಲಿಲಕಲಧೌತ ಶಂಖಶುಕ್ತಿ–ಶಶಾಂಕಾದೀನಾಂ ರೂಪವಿಶೇಷಾಃ ಶ್ವೇತಭೇದಾಃ । ಹುತವಹ–ಜಪಾ–ದಾಡಿಮ–ಬಂಧುಜೀವ–ವಿದ್ರುಮ–ಪದ್ಮರಾಗಾದೀನಾಂ ತು ರೂಪವಿಶೇಷಾ ರಕ್ತಭೇದಾಃ । ಕಾಂಚನ–ಹರಿತಾಲ–ಹರಿದ್ರಾದೀನಂ ಪೀತಭೇದಾಃ । ಮರಕತ–ಮಧುಕರ–ಜಲಧರ–ತಿಮಿರ–ತಮಾಲ–ದೂರ್ವಾದೀನಾಂ

---

ಉಷ್ಣವೂ ಶೀತವೂ ಅಲ್ಲದ ಸ್ಪರ್ಶವಿದೆ. ಅದು ಮತ್ತೆ ಪಾಕಜ ಮತ್ತು ಅಪಾಕಜ ಎಂದು ಎರಡು ಬಗೆ [143]. ಭೂಮಿಯಲ್ಲಿ ಪಾಕಜಸ್ಪರ್ಶವಿದೆ. ಇನ್ನುಳಿದ ಮೂರರಲ್ಲಿ (ಜಲ, ಅಗ್ನಿ, ವಾಯು) ಅಪಾಕಜಸ್ಪರ್ಶವಿದೆ. ಇವುಗಳಲ್ಲಿ ಅಮೃತ, ವಿಷ, ಹತ್ತಿ, ಕಲ್ಲು, ಹಸು, ಬ್ರಾಹ್ಮಣ, ಚಂಡಾಲ ಮೊದಲಾದ ಸ್ಪರ್ಶವಿಶೇಷಗಳು ಪಾಕಜಸ್ಪರ್ಶದ ಭೇದಗಳು. ಹೀಗೆ ಸ್ಪರ್ಶವನ್ನು ವಿವರಿಸಿದೆ.

೧೦. ರೂಪವೆಂಬ ಅದ್ರವ್ಯ ನಮ್ಮ ನೇತ್ರೇಂದ್ರಿಯದಿಂದ ಮಾತ್ರ ಗ್ರಹಿಸಲ್ಪಡುತ್ತದೆ. ಇತರ ವಿಜಾತೀಯವಾದ ಅದ್ರವ್ಯಗಳಿಗಿಂತ ಇದು ಬೇರೆಯಾದುದು. ಇದು ಬಿಳಿದು, ಕೆಂಪು, ಹಳದಿ, ಕಪ್ಪು ಎಂದು ನಾಲ್ಕು ಬಗೆಯಾಗಿರುವುದು. ಜಲ, ಬೆಳ್ಳಿ, ಶಂಖ, ಶುಕ್ತಿ, ಚಂದ್ರ ಮೊದಲಾದವುಗಳ ರೂಪವಿಶೇಷಗಳು ಶ್ವೇತರೂಪದ ಭೇದಗಳು. ಬೆಂಕಿ, ದಾಸವಾಳ, ದಾಡಿಮ, ಬಂಧುಜೀವ, ಹವಳ, ಪದ್ಮರಾಗ ಮೊದಲಾದವುಗಳ ರೂಪವಿಶೇಷಗಳು ಕೆಂಬಣ್ಣದ ರೂಪಭೇದಗಳು. ಚಿನ್ನ, ಹಳದಿವರ್ಣದ ಪಾರಿವಾಳ, ಅರಿಶಿನ ಮೊದಲಾದವು ಹಳದಿಯ ರೂಪಭೇದಗಳು. ಮರಕತ, ದುಂಬಿ, ಕಾರ್ಮೋಡ, ರಾತ್ರಿ, ತಮಾಲ, ದೂರ್ವಾ ಮೊದಲಾದವುಗಳ ರೂಪಗಳು ಕೃಷ್ಣವರ್ಣದ ರೂಪಭೇದಗಳು. ಶ್ರುತಿಗನುಸಾರವಾಗಿ

ಕೃಷ್ಣಭೇದಾಃ | ಪೀತಮಪಿ ರಕ್ತಾವಾಂತರಭೇದಂ ಕೇಚಿದಿಚ್ಛಂತಿ, ಶ್ರುತ್ಯನುಸಾರಾತ್ | ಪ್ರಕಾರಾಂತರೇಣ ರೂಪಂ ದ್ವಿವಿಧಂ–ಭಾಸ್ವರಾಭಾಸ್ವರಭೇದಾತ್ | ತೇಜೋಗತಂ ಭಾಸ್ವರಂ| ಕ್ಷಿತಿಸಲಿಲಗತಂ ಅಭಾಸ್ವರಂ | ಏವಂ ಚತ್ವಾರ್ಯೇವ ರೂಪಾಣಿ | ತೇನ ಚಿತ್ರಂನಾಮ ಪಂಚಮಂ ರೂಪಮಿತಿ ಮತನಿರಾಸಃ | ಅತ ಏವ ಚಿತ್ರಗಂಧಸ್ಪರ್ಶರಸಾನಾಮಪಿ ನಿರಾಸಃ | ಇತಿ ರೂಪಂ |

೧೧. ಅಸ್ಮದಾದಿಜಿಹ್ವೈಕಗ್ರಾಹ್ಯವಿಜಾತೀಯೇತರೋ ರಸಃ | ಸ ಷೋಢಾ ಮಧುರ-ಆಮ್ಲ-ಲವಣ-ಕಟುಕ-ಕಷಾಯ - ತಿಕ್ತಭೇದಾತ್ | ತತ್ರ ಇಕ್ಷುಕ್ಷೀರಗುಡಾದಿರಸಾ ಮಧುರಭೇದಾಃ | ಚೂತ–ಚಿಂಚ–ಆಮಲಕಾದಿರಸಾ ಆಮ್ಲಾಃ | ಸೈಂಧವೋಷರವಿಕಾರಾ ಲವಣಭೇದಾಃ | ಕಿಂಪಾಕನಿಂಬಾದಿರಸಾಃ

---

ಹಳದಿಯೂ ಕೆಂಪಿನ ಬೇರೆ ರೂಪವೆಂದು ಕೆಲವರು ಹೇಳುತ್ತಾರೆ. ಇನ್ನೊಂದು ರೀತಿಯಲ್ಲಿ ವಿಭಾಗಿಸಿದರೆ ರೂಪವು ಭಾಸ್ವರ, ಅಭಾಸ್ವರ ಎಂದು ಎರಡು ಬಗೆ. ತೇಜೋಯುತವಾದುದರಲ್ಲಿರುವುದು ಭಾಸ್ವರ. ಭೂಮಿ, ಜಲ ಮೊದಲಾದವಲ್ಲಿರುವುದು ಅಭಾಸ್ವರ. ಹೀಗೆ ರೂಪವು ನಾಲ್ಕೇ ಬಗೆಯಾಗಿರುವುದು. ಚಿತ್ರರೂಪವೆಂಬ ಐದನೆಯ ರೂಪವೊಂದಿರುವುದೆಂಬ ಮತವನ್ನು ಇದರಿಂದ ನಿರಾಕರಿಸಿದೆ. ಇದರಿಂದಲೇ ಚಿತ್ರಗಂಧ, ಚಿತ್ರಸ್ಪರ್ಶ, ಚಿತ್ರರಸ ಎಂಬ ಮತವನ್ನೂ ನಿರಸನಮಾಡಿದೆ. ಇದು ರೂಪದ ನಿರೂಪಣೆ.

೧೧. ರಸವು ನಮ್ಮ ಜಿಹ್ವೇಂದ್ರಿಯದಿಂದ ಮಾತ್ರ ಗ್ರಹಿಸಲ್ಪಡುವುದಾಗಿದೆ. ವಿಜಾತೀಯವಾದ ಇತರ ಅದ್ರವ್ಯಗಳಿಗಿಂತ ಇದು ಬೇರೆಯಾಗಿದೆ. ಇದು ಮಧುರ, ಹುಳಿ, ಉಪ್ಪು, ಕಹಿ, ಕಷಾಯ, ತಿಕ್ತ ಎಂದು ಆರು ಬಗೆಯಾಗಿದೆ. ಕಬ್ಬು, ಹಾಲು, ಬೆಲ್ಲ ಮೊದಲಾದ ರಸಗಳು ಮಧುರರಸದ ಭೇದಗಳು. ಮಾವು, ಹುಣಸೆ, ನೆಲ್ಲಿಕಾಯಿ ಮೊದಲಾದವು ಆಮ್ಲ ರಸಗಳು ಉಪ್ಪು ಮತ್ತಿತರ ಚೌಳಿನ ವಿಕಾರಗಳು ಲವಣ ಭೇದಗಳು. ಕಿಂಪಾಕ ಮತ್ತು ಬೇವು ಮೊದಲಾದವುಗಳ ರಸಗಳು ಕಟುವಾದ ರಸಭೇದಗಳು. ಹರೀತಕ, ವಿಭೀತಕ, ಮಾವಿನ ಚಿಗುರು ಮೊದಲಾದವುಗಳು ಕಷಾಯ ರಸದ

ಕಟುಭೇದಾಃ । ಹರೀತಕೀ-ವಿಭೀತಕ-ಚೂತಾಂಕುರಾದಿರಸಾಃ ಕಷಾಯಭೇದಾಃ । ಶುಂಠೀ–ಮರೀಚೀ–ಸರ್ಷಪಾದಿರಸಾಃ ತಿಕ್ತಭೇದಾಃ । ಇತಿ ರಸಃ ।

೧೨. ಅಸ್ಮದಾದಿಘ್ರಾಣಗ್ರಾಹ್ಯವಿಜಾತೀಯೇತರಃ ಅದ್ರವ್ಯವಿಶೇಷೋ ಗಂಧಃ । ಸ ದ್ವಿವಿಧಃ–ಸುರಭಿಃ ಅಸುರಭಿಶ್ಚೇತಿ । ಪಾಟೀರ–ಮೃಗಮದ–ಘುಸೃಣ–ಚಂಪಕಾದಿಗಂಧಾಃ ಸುರಭಿಭೇದಾಃ । ಅಯಂ ಚ ಗಂಧಃ ಪೃಥಿವ್ಯೇಕವರ್ತೀ ಪಾಕಭೇದಾತ್ ಭಿನ್ನಃ । ಪವನಸಲಿಲಾದಿಷು ಗಂಧೋಪಲಬ್ಧಿಃ ಪಾರ್ಥಿವಸಂಸರ್ಗಾತ್ ಅಯೋ ದಹತೀತಿವತ್ ಔಪಚಾರಿಕೀ ।

೧೩. ಪಂಚೀಕರಣಪ್ರಕ್ರಿಯಯಾ ಸರ್ವಭೂತೇಷು ಸರ್ವಗುಣಾನಾಂ ವಿದ್ಯಮಾನತ್ವೇಽಪಿ ಪ್ರಾಧಾನ್ಯಾಭಿಪ್ರಾಯೇಣ ಉಕ್ತಮಿತಿ ನ ವಿರೋಧಃ ।

---

ಭೇದಗಳು. ಶುಂಠಿ, ಮೆಣಸು, ಸಾಸುವೆ ಮೊದಲಾದವು ತಿಕ್ತರಸದ ಭೇದಗಳು. ಇದಿಷ್ಟು ರಸದ ನಿರೂಪಣೆ.

೧೨. ನಮ್ಮ ಘ್ರಾಣೇಂದ್ರಿಯದಿಂದ ಮಾತ್ರ ಗ್ರಹಿಸಲ್ಪಡುವುದೂ, ವಿಜಾತೀಯವಾದ ಇತರ ಅದ್ರವ್ಯಗಳಿಂದ ಬೇರೆಯಾದುದೂ ಆದ ಅದ್ರವ್ಯ ವಿಶೇಷವೇ ಗಂಧ. ಸುಗಂಧ ಮತ್ತು ಸುಗಂಧವಲ್ಲದ್ದು ಎಂದು ಇದು ಎರಡು ಬಗೆ. ಶ್ರೀಗಂಧ, ಕಸ್ತೂರಿ, ಕೇಸರಿ, ಚಂಪಕ ಮೊದಲಾದ ಗಂಧಗಳು ಸುಗಂಧಭೇದಗಳು. ಈ ಗಂಧ ಪೃಥಿವಿಯಲ್ಲಿ ಮಾತ್ರ ಇರುತ್ತದೆ. ಪಾಕ ಭೇದದ ಕಾರಣ ಅನೇಕ ವಿಧವಾಗಿ ಪರಿಣಮಿಸುತ್ತದೆ. ಗಾಳಿ, ನೀರು ಮೊದಲಾದವಲ್ಲಿ ಪೃಥಿವಿಯ ಸಂಸರ್ಗದ ಕಾರಣ ಗಂಧವು ಕಂಡುಬರುತ್ತದೆ. ಕಬ್ಬಿಣ ಸುಡುತ್ತದೆ ಎಂಬಂತೆ ಅವುಗಳ ಗಂಧವತ್ತ್ವ ಔಪಚಾರಿಕವಾದುದು.

೧೩. ಪಂಚೀಕರಣ ಪ್ರಕ್ರಿಯೆಗನುಸಾರವಾಗಿ ಇವೆಲ್ಲಾ ಗುಣಗಳೂ ಎಲ್ಲಾ ಭೂತಗಳಲ್ಲಿಯೂ ಇರುವುವಾದರೂ ಒಂದು ವಿಶೇಷಗುಣ ಒಂದು ವಿಶೇಷವಾದ ಭೂತದಲ್ಲಿದೆಯೆಂದು ನಿರೂಪಿಸಿರುವುದಕ್ಕೆ ಆ ಗುಣ ಅಲ್ಲಿ ಪ್ರಧಾನವಾಗಿ ಇರುವುದೇ ಕಾರಣವಾಗಿದೆ. ಆದುದರಿಂದ ಯಾವ ವಿರೋಧವೂ ಇಲ್ಲ. ಇತರ ಗುಣಗಳ ಉತ್ಪತ್ತಿ ಪಾಕದ ಕಾರಣ ಆಗುತ್ತದೆ. ತಮ್ಮ ಆಶ್ರಯದ ನಾಶ

ಪಾಕಾತ್ ಗುಣಾಂತರೋತ್ಪತ್ತಿಃ । ಸ್ವಾಶ್ರಯನಾಶಾಭಾವಾದೇವ ಉಪಪತ್ತೇಃ ಪೀಲುಪಾಕವಾದಿಮತ ನಿರಾಸಃ । ಇತಿಗಂಧಃ ।

೧೪. ಸಂಯುಕ್ತಪ್ರತ್ಯಯನಿಮಿತ್ತಂ ಸಂಯೋಗಃ । ಸ ಚ ಸಾಮಾನ್ಯ ಗುಣಃ ಷಡ್‌ದ್ರವ್ಯವೃತ್ತಿಃ । ಅಸ್ಯ ಚ ಸ್ವಾಭಾವಸಾದೇಶ್ಯಂ ಉಪಲಭ್ಯ ಮಾನಂ ಅಂಶಭೇದಪ್ರಯುಕ್ತತಯಾ ನ ವಿರೋಧಾವಹಮ್ । ಸ ಕಾರ್ಯಾ ಕಾರ್ಯಭೇದಾತ್ ದ್ವಿವಿಧಃ । ಪೂರ್ವಃ ಪರಿಮಿತಾನಾಂ ಉಭಯ ಪ್ರೇರಣಾತ್ । ಯಥಾ ಮೇಷಯೋಃ ಮಲ್ಲಯೋಃ ವಾ । ಕ್ವಚಿತ್ ಅನ್ಯತರಪ್ರೇರಣಾತ್ । ಯಥಾ ಸ್ಥಾಣುಶ್ಯೇನಯೋಃ ಸಂಯೋಗಃ । ಕೇಚಿತ್ ಸಂಯೋಗಜಸಂಯೋಗಮಪಿ ವದಂತಿ । ಹಸ್ತಪುಸ್ತಕಸಂಯೋಗಾತ್

---

ವಾಗದ ಕಾರಣ ಇದು ಉಪಪನ್ನವಾಗುವುದು. ಇದರಿಂದ ಪೀಲುಪಾಕವಾದಿಗಳ ಮತವನ್ನು[144] ತಳ್ಳಿಹಾಕಿದೆ. ಇದಿಷ್ಟೂ ಗಂಧದ ನಿರೂಪಣೆ.

೧೪. (ದ್ರವ್ಯಗಳು) ಸಂಯುಕ್ತವಾಗಿರುವ ಜ್ಞಾನಕ್ಕೆ ಕಾರಣವಾದುದು ಸಂಯೋಗ. ಇದು ಸಾಮಾನ್ಯವಾದ ಗುಣ. ಆರು ದ್ರವ್ಯಗಳಲ್ಲಿಯೂ ಇದು ಕಂಡು ಬರುತ್ತದೆ[145]. ಒಂದೇ ಆಶ್ರಯದಲ್ಲಿ ಉಪಲಬ್ಧವಾಗುವ ಇದರ ಅಭಾವ ಮತ್ತು ಸದ್ಭಾವಗಳು (ಅದೇ ಆಶ್ರಯದಲ್ಲಿ) ಬೇರೆ ಬೇರೆ ಅಂಶಗಳಿಗೆ ಅನ್ವಯಿ ಸುವುದರಿಂದ ವಿರೋಧವಾದುದಲ್ಲ. ಈ ಸಂಯೋಗ ಎರಡುವಿಧ-ಕಾರ್ಯ ವಾಗಿರುವುದು, ಕಾರ್ಯವಾಗದೆ ಇರುವುದು ಎಂದು. ಮೊದಲನೆಯದು ಪರಿ ಮಿತವಾದ ವಸ್ತುಗಳಲ್ಲಿ ಮಾತ್ರ ಆಗುತ್ತದೆ ; ಅವೆರಡುವಸ್ತುಗಳ ಪ್ರೇರಕ ಶಕ್ತಿ ಯಿಂದಾಗುತ್ತದೆ. ಎರಡು ಟಗರುಗಳ ಅಥವಾ ಇಬ್ಬರು ಮಲ್ಲರುಗಳ ಸಂಯೋಗದಂತೆ ಇದು. ಕೆಲವು ಸಂದರ್ಭಗಳಲ್ಲಿ ಅವುಗಳೆರಡರಲ್ಲಿ ಯಾವು ದಾದರೊಂದರ ಪ್ರೇರಣೆಯಿಂದಲೂ ಇದು ಸಂಭವಿಸುತ್ತದೆ. ಇದಕ್ಕೆ ಗಿಡು ಗನಿಗೂ ಕಂಬಕ್ಕೂ ಆಗುವ ಸಂಯೋಗ ನಿದರ್ಶನ ಕೆಲವರು ಒಂದು ಸಂಯೋಗದಿಂದ ಮತ್ತೊಂದು ಸಂಯೋಗವಾಗುವುದನ್ನೂ ಹೇಳುವರು ಕೈ ಮತ್ತು ಪುಸ್ತಕಗಳ ಸಂಯೋಗದಿಂದ ಶರೀರಕ್ಕೂ ಪುಸ್ತಕಕ್ಕೂ ಸಂಯೋಗ ವಾಗುವುದೆನ್ನಲಾಗಿದೆ. ಇದು ಸರಿಯಲ್ಲ. ಹಸ್ತಸಂಯೋಗದಿಂದಲೇ ಶರೀರ

ಕಾಯಪುಸ್ತಕಸಂಯೋಗ ಇತಿ। ತನ್ನ। ಹಸ್ತಸಂಯೋಗಾದೇವ ಕಾಯ ಸಂಯೋಗಸ್ಯ ಜಾತತ್ವಾತ್। ಏತೇನ ವಿಭಾಗಜವಿಭಾಗೋ ನಿರಾಕೃತಃ। ವಿಭಾಗೋಽಪಿ ಸಂಯೋಗಾಭಾವ ಏವ, ನಪೃಥಗ್ಗುಣಃ।

೧೫. ಅಕಾರ್ಯಸಂಯೋಗಸ್ತು ವಿಭುದ್ರವ್ಯಯೋಃ। ಅಜದ್ರವ್ಯ ಸಂಯೋಗಃ ಶ್ರುತ್ಯಾ ಅಂಗೀಕ್ರಿಯತೇ। ಅನುಮಾನಾದಪಿ ಅಜಸಂಯೋಗ ಸಿದ್ಧಿಃ। ಯಥಾ 'ವಿಭುದ್ರವ್ಯಂ ವಿಭುದ್ರವ್ಯಸಂಯೋಗವತ್, ದ್ರವ್ಯತ್ವಾತ್ ಘಟವತ್'। 'ವಿಭುದ್ರವ್ಯಂ ಈಶ್ವರಸಂಯುಕ್ತಂ, ದ್ರವ್ಯತ್ವಾತ್ ಘಟವತ್'। 'ಈಶ್ವರಃ ಕಾಲಾದಿಸಂಯುಕ್ತಃ, ದ್ರವ್ಯತ್ವಾತ್, ಘಟವತ್' ಇತ್ಯಾದಿಭಿಃ ವಿಭುಸಂಯೋಗ ಸಿದ್ಧಿಃ।

---

ಸಂಯೋಗವೂ ಉಂಟಾಗಿ ಹೋಗಿದೆ[146]. ಇದರಿಂದಲೇ ಒಂದು ವಿಭಾಗದಿಂದ ಮತ್ತೊಂದು ವಿಭಾಗವುಂಟಾಗುವುದೆಂಬುದನ್ನೂ ನಿರಾಕರಮಾಡಿದೆ. ಸಂಯೋಗ ವಿಲ್ಲದಿರುವಿಕೆಯೇ ವಿಭಾಗ ; ಅದು ಬೇರೆ ಮತ್ತೊಂದು ಗುಣವಲ್ಲ.

೧೫. ಎರಡು ವಿಭುದ್ರವ್ಯಗಳ ಸಂಯೋಗ ಕಾರ್ಯವಲ್ಲದ ಸಂಯೋಗ. ನಿತ್ಯದ್ರವ್ಯಗಳ (ಉತ್ಪತ್ತಿಇಲ್ಲದ ದ್ರವ್ಯಗಳ) ಸಂಯೋಗವು ಶ್ರುತಿಯಿಂದ ಒಪ್ಪಲ್ಪಟ್ಟಿದೆ[147]. ನಿತ್ಯದ್ರವ್ಯಗಳ ಸಂಯೋಗವನ್ನು ಅನುಮಾನದಿಂದಲೂ ಸಮರ್ಥಿಸಲಾಗಿದೆ.

(i) ಘಟದಂತೆಯೇ ದ್ರವ್ಯವಾದ ಕಾರಣ ವಿಭುದ್ರವ್ಯ ಮತ್ತೊಂದು ವಿಭು ದ್ರವ್ಯದೊಡನೆ ಸಂಯೋಗವನ್ನು ಹೊಂದಿರುತ್ತದೆ.

(ii) ಘಟದಂತಯೇ ಅದೂ ದ್ರವ್ಯವಾಗಿರುವ ಕಾರಣ ವಿಭುದ್ರವ್ಯ ಈಶ್ವರನೊಡನೆ ಸಂಯುಕ್ತವಾಗಿದೆ.

(iii) ಘಟದಂತೆಯೇ ತಾನೂ ದ್ರವ್ಯವಾಗಿರುವ ಕಾರಣ ಈಶ್ವರನು ಕಾಲ ಮೊದಲಾದವುಗಳೊಡನೆ ಸಂಯುಕ್ತನಾಗಿದ್ದಾನೆ.

ಇಂಥ ಅನುಮಾನಗಳಿಂದ ವಿಭುದ್ರವ್ಯಗಳ ಸಂಯೋಗವು ಸ್ಥಾಪಿಸಲ್ಪಟ್ಟಿದೆ.

೧೬. ಅಥ ಶಕ್ತಿಃ । ಸರ್ವಕಾರಣಾನಾಂ ಕಾರಣತ್ವನಿರ್ವಾಹಕಃ ಕಶ್ಚಿತ್ ಅದ್ರವ್ಯವಿಶೇಷಃ ಶಕ್ತಿಃ । ತರ್ಕಾಗಮಾಭ್ಯಾಂ ತತ್ಸಿದ್ಧೇಃ । ಪ್ರತಿಬಂಧಕ ಮಣಿಮಂತ್ರಾದಿಸನ್ನಿಧೌ ಸ್ವರೂಪಸಹಕಾರಿವೈಕಲ್ಯಾಭಾವೇಽಪಿ ಯದುಪ ರೋಧಾತ್ ದಹನೋ ನ ದಹತಿ ಸಾ ಹ್ಯತೀಂದ್ರಿಯಾ ಶಕ್ತಿಃ । ಅಯಸ್ಕಾಂತಾ ದಿಷು ತತ್ಪ್ರಸಿದ್ಧಿಃ । ಸಾ ಶಕ್ತಿಃ ಷಡ್‌ದ್ರವ್ಯವೃತ್ತಿಃ । ಭಗವನ್ನಿಷ್ಠತ್ವಂ ಪುರಾಣ ರತ್ನಾದಿಷು ಪ್ರಸಿದ್ಧಮ್ । ಏವಂ ಸರ್ವತ್ರಾಪಿ ಇತಿ ಶಕ್ತಿರ್ನಾಮ ಧರ್ಮ ವಿಶೇಷಃ ಸಿದ್ಧಃ ।

೧೭. ನನು ಚತುರ್ವಿಂಶತಿ ಪ್ರಕಾರಾ ಗುಣಾ ಇತ್ಯುಕ್ತತ್ವಾತ್ ಕಥಂ ದಶೈವೇತಿ ನಿರ್ದಿಶ್ಯತೇ ಇತಿಚೇತ್ ಉಚ್ಯತೇ । ಜೀವಾತ್ಮವಿಶೇಷಗುಣಾನಾಂ

---

೧೬. ಇನ್ನು ಶಕ್ತಿಯ ವಿಚಾರವನ್ನು ವಿವರಿಸಲಾಗುವುದು. ಸಮಸ್ತ ಕಾರಣಗಳಲ್ಲಿಯೂ ಆ ಕಾರಣತ್ವವನ್ನು ನಿರ್ವಹಿಸಿಕೊಡುವ ಯಾವುದೋ ಒಂದು ಅದ್ರವ್ಯ ವಿಶೇಷವೇ ಶಕ್ತಿ. ಅನುಮಾನ ಮತ್ತು ಶಾಸ್ತ್ರದಿಂದ ಇದು ಸಿದ್ಧವಾಗುತ್ತದೆ. ಪ್ರತಿಬಂಧಕವಾದ ಮಣಿ, ಮಂತ್ರ ಮೊದಲಾದವುಗಳ ಸಾನ್ನಿಧ್ಯದಲ್ಲಿ ಬೆಂಕಿಯು ತನ್ನ ಸ್ವರೂಪದಲ್ಲಾಗಲೀ ಸಹಕಾರಿಗಳಲ್ಲಾಗಲೀ ಯಾವ ವೈಕಲ್ಯವುಂಟಾಗದಿದ್ದರೂ ಸಹ, ಯಾವುದರ ಅಡಚಣೆಯಿಂದ ಸುಡುವು ದಿಲ್ಲವೋ ಅದು ಅತೀಂದ್ರಿಯವಾದ ಶಕ್ತಿ. ಸೂಜಿಗಲ್ಲು ಮೊದಲಾದವಲ್ಲಿ ಇಂಥ ಶಕ್ತಿ ಕಂಡುಬರುತ್ತದೆ. ಈ ಶಕ್ತಿಯು ಆರು ದ್ರವ್ಯಗಳಲ್ಲಿಯೂ ಇದೆ. ಭಗ ವಂತನಲ್ಲಿ ಇದು ಇರುವುದೆಂಬುದು ವಿಷ್ಣುಪುರಾಣದಲ್ಲಿ ಪ್ರಸಿದ್ಧವಾಗಿದೆ. ಹೀಗೆಯೇ ಶಕ್ತಿಯೆಂಬ ಈ ಧರ್ಮವಿಶೇಷ ಎಲ್ಲೆಲ್ಲಿಯೂ ಇದೆ ಎಂಬುದು ಸಿದ್ಧ ವಾಗುತ್ತದೆ.

೧೭. ಗುಣಗಳು ಇಪ್ಪತ್ತನಾಲ್ಕು ಎಂದು ಇತರರು ನಿರೂಪಿಸಿರು ವಾಗ[148] ಅವು ಹತ್ತೇ ಗುಣಗಳು ಎಂದು ಹೇಗೆ ಹೇಳುವುದು ಎಂದು ಕೇಳಿದರೆ ಹೀಗೆ ಉತ್ತರ ಹೇಳುತ್ತೇವೆ. ಜೀವನಿಗೆ ವಿಶೇಷ ಗುಣಗಳಾದ ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ ಎಂಬ ಈ ಆರು ಗುಣಗಳೂ ಜ್ಞಾನದ ವಿವಿಧ ರೂಪಗಳಾಗಿರುವ ಕಾರಣ ಇವುಗಳನ್ನು ಜ್ಞಾನದಲ್ಲಿಯೇ ಅಂತರ್ಭಾವ

ಬುದ್ಧಿ–ಸುಖ–ದುಃಖ–ಇಚ್ಛಾ–ದ್ವೇಷಪ್ರಯತ್ನಾನಾಂ ಷಣ್ಣಾಂ ಜ್ಞಾನವಿತ ತಿರೂಪತ್ವೇನ ಜ್ಞಾನಾಂತರ್ಭಾವಸ್ಯ ಉಕ್ತತ್ವಾತ್। ಧರ್ಮಾಧರ್ಮಯೋರಪಿ ಈಶ್ವರಪ್ರೀತಿರೂಪತ್ವೇನ ಈಶ್ವರಜ್ಞಾನೇ ಅಂತರ್ಭಾವಾತ್। ಭಾವನಾಖ ಸಂಸ್ಕಾರಸ್ಯ ಜ್ಞಾನವಿಶೇಷರೂಪತ್ವಾತ್। ವೇಗೋತ್ಪಾದಕಹೇತೋರೇವ್ಯ ವೇಗಾಖ್ಯಸಂಸ್ಕಾರೋಪಪತ್ತೇಃ। ಸಂಯೋಗಮಾದಾಯ ಸ್ಥಿತಿಸ್ಥಾಪಕಸ್ಯಾಪಿ ಸಂಭವಾತ್। ಶಬ್ದಸ್ಪರ್ಶರೂಪ–ರಸಗಂಧಾನಾಂ ಪಂಚಾನಾಂ ಪ್ರತ್ಯಕ್ಷಸಿದ್ಧ ತ್ವೇನ ಅಂಗೀಕಾರಾತ್। ವಿಭಾಗ–ಪೃಥಕ್ತ್ವಯೋರಪಿ ಸಂಯೋಗಾಭಾವ ಮಾದಾಯ ಉಪಪತ್ತೇಃ। ಪರತ್ವಾಪರತ್ವಯೋಃ ದೇಶಕಾಲಸಂಯೋಗವಿಶೇಷ ಮಾದಾಯ ಉಪಪತ್ತೇಃ। ಸಂಖ್ಯಾಪರಿಮಾಣ-ದ್ರವತ್ವ-ಸ್ನೇಹಾನಾಂ ತತ್ತ್ರದ್ದ್ರವ ಸ್ವರೂಪಮಾದಾಯ ಉಪಪತ್ತೇಃ। ಗುರುತ್ವಸ್ಯ ಶಕ್ತ್ಯಂತರ್ಭಾವಸ್ಯ ವಕ್ತುಂ ಉಚಿತತ್ವಾಚ್ಚ ದಶೈವೇತಿ ಸೂಕ್ತಮ್।

---

ಮಾಡಿ ಹೇಳಿದೆ. ಧರ್ಮ ಮತ್ತು ಅಧರ್ಮಗಳು ಈಶ್ವರನ ಪ್ರೀತಿ ಅಥವಾ ಅಪ್ರೀತಿಯ ರೂಪಗಳಾಗಿರುವ ಕಾರಣ ಈಶ್ವರನ ಜ್ಞಾನದಲ್ಲಿ ಸೇರಿ ಹೋಗುತ್ತವೆ. ಭಾವನೆ ಎಂಬ ಹೆಸರುಳ್ಳ ಸಂಸ್ಕಾರವೂ ಜ್ಞಾನ ವಿಶೇಷದ ರೂಪವಾಗಿರುವ ಕಾರಣ ಜ್ಞಾನದಲ್ಲಿಯೇ ಸೇರುತ್ತದೆ. ವೇಗವನ್ನುತ್ಪತ್ತಿಮಾಡುವ ಕಾರಣವೇ ವೇಗವೆಂಬ ಸಂಸ್ಕಾರವಾಗುವುದು. ಸ್ಥಿತಿಸ್ಥಾಪಕವೆಂಬುದನ್ನು ಸಂಯೋಗದ ಕಾರಣ ತಿಳಿಯಲು ಸಾಧ್ಯವಾಗುತ್ತದೆ. ಶಬ್ದಸ್ಪರ್ಶ ರೂಪ ರಸ ಗಂಧಗಳು ಐದೂ ಪ್ರತ್ಯಕ್ಷ ಸಿದ್ಧವಾಗಿರುವ ಕಾರಣ ಅಂಗೀಕರಿಸಲಾಗಿವೆ. ವಿಭಾಗ ಮತ್ತು ಪೃಥಕ್ತ್ವಗಳೆರಡನ್ನೂ ಸಂಯೋಗದ ಅಭಾವದ ಮೂಲಕ ವಿವರಿಸಲು ಸಾಧ್ಯವಾಗುತ್ತದೆ. ಸಾಮೀಪ್ಯ ಮತ್ತು ದೂರಗಳನ್ನು ದೇಶ ಕಾಲಗಳ ಸಂಯೋಗ ವಿಶೇಷದ ಮೂಲಕ ವಿವರಿಸಬಹುದು. ಸಂಖ್ಯಾ, ಪರಿಮಾಣ, ದ್ರವತ್ವ, ಸ್ನೇಹಗಳನ್ನು ಅವು ಯಾವ ಯಾವ ದ್ರವ್ಯಗಳಲ್ಲಿವೆಯೋ ಅವುಗಳ ಸ್ವರೂಪದಿಂದಲೇ ನಿರೂಪಿಸಬಹುದು. ಗುರುತ್ವವನ್ನು ಶಕ್ತಿಯಲ್ಲಿ ಸೇರಿಸುವುದು ಉಚಿತ. ಆದುದರಿಂದ ಗುಣಗಳು ಹತ್ತೇ ಎಂದು ಹೇಳಿರುವುದು ಸರಿಯಾಗಿದೆ.

೧೮. ಸತ್ವರಜಸ್ತಮಾಂಸಿ ಪ್ರಕೃತಿಗುಣಾಃ ತತ್ಸಂಬಂಧಿಜೀವಗುಣಾಶ್ಚ । 'ಸತ್ವರೂಪಂ ಜ್ಞಾನಂ', 'ಸಾತ್ವಿಕಃ ಕಾಲಃ' ಇತ್ಯಾದಿ ಪ್ರತೀತಿಃ ಉಪಾಧಿವಶಾತ್ ಔಪಚಾರಿಕೀ । ಶಬ್ದಾದಯಃ ಪಂಚ ಪ್ರಕೃತಿಕಾರ್ಯ ಪಂಚಮಹಾಭೂತಗುಣತ್ವೇನ ಪ್ರಸಿದ್ಧಾಃ । ಶುದ್ಧಸತ್ವಂ ತು ತ್ರಿಪಾದ್ವಿಭೂತ್ಯಾಂ ತತ್ಪ್ರವರ್ತಕೇಶ್ವರೇಚ । ಸಂಯೋಗಶಕ್ತಿರೂಪೌ ಗುಣೌ ಷಡ್‌ದ್ರವ್ಯಸಾಧಾರಣೌ ಇತಿ ವಿವೇಕಃ । ಇತಿ ಅದ್ರವಂ ನಿರೂಪಿತಮ್ ।

೧೯. ಏವಂ ದ್ರಮಿಡಭಾಷ್ಯ–ನ್ಯಾಯತತ್ವ–ಸಿದ್ಧಿತ್ರಯ–ಶ್ರೀಭಾಷ್ಯದೀಪ–ಸಾರ–ವೇದಾರ್ಥಸಂಗ್ರಹ–ಭಾಷ್ಯವಿವರಣ – ಸಂಗತಿಮಾಲಾ – ಷಡರ್ಥಸಂಕ್ಷೇಪ–ಶ್ರುತಪ್ರಕಾಶಿಕಾ – ತತ್ವರತ್ನಾಕರ – ಪ್ರಜ್ಞಾಪರಿತ್ರಾಣ – ಪ್ರಮೇಯಸಂಗ್ರಹ–ನ್ಯಾಯಕುಲಿಶ–ನ್ಯಾಯಸುದರ್ಶನ–ಮಾನಯಾತಥಾತ್ಮ್ಯನಿರ್ಣಯ

---

೧೮. ಸತ್ತ್ವ, ರಜಸ್ಸು ಮತ್ತು ತಮಸ್ಸುಗಳು ಪ್ರಕೃತಿಯ ಹಾಗೂ ಅದರ ಸಂಬಂಧವನ್ನು ಹೊಂದಿರುವ ಜೀವನ ಗುಣಗಳಾಗಿವೆ. 'ಸತ್ವರೂಪವಾದ ಜ್ಞಾನ', 'ಸಾತ್ವಿಕವಾದ ಕಾಲ' ಮೊದಲಾದ ಪ್ರಯೋಗಗಳು ಉಪಾಧಿಗಳ ಕಾರಣ ಬಂದಿರುವ ಔಪಚಾರಿಕ ಪ್ರಯೋಗಗಳಾಗಿವೆ. ಶಬ್ದ ಸ್ಪರ್ಶರೂಪ ರಸಗಂಧಗಳು ಐದೂ ಪ್ರಕೃತಿಯ ಕಾರ್ಯಗಳಾದ ಪಂಚಮಹಾಭೂತಗಳ ಗುಣಗಳೆಂದು ಪ್ರಸಿದ್ಧವಾಗಿವೆ. ಶುದ್ಧಸತ್ತ್ವವು ತ್ರಿಪಾದ್ವಿಭೂತಿಯಲ್ಲಿಯೂ ಅದನ್ನು ಪ್ರವರ್ತಿಸುವ ಈಶ್ವರನಲ್ಲಿಯೂ ಇದೆ. ಸಂಯೋಗ ಮತ್ತು ಶಕ್ತಿ ಇವು ಆರು ದ್ರವ್ಯಗಳಲ್ಲಿಯೂ ಸಮಾನವಾಗಿವೆ. ಇದಿಷ್ಟು ಅದ್ರವ್ಯದ ಸಿರೂಪಣೆಯಾಯಿತು.

೧೯. ದ್ರಮಿಡಭಾಷ್ಯ, ನ್ಯಾಯತತ್ತ್ವ, ಸಿದ್ಧಿತ್ರಯ, ಶ್ರೀಭಾಷ್ಯ, ದೀಪ, ಸಾರ, ವೇದಾರ್ಥಸಂಗ್ರಹ, ಭಾಷ್ಯವಿವರಣ, ಸಂಗತಿಮಾಲಾ, ಷಡರ್ಥಸಂಕ್ಷೇಪ, ಶ್ರುತಪ್ರಕಾಶಿಕಾ, ತತ್ತ್ವರತ್ನಾಕರ, ಪ್ರಜ್ಞಾಪರಿತ್ರಾಣ, ಪ್ರಮೇಯಸಂಗ್ರಹ, ನ್ಯಾಯಕುಲಿಶ, ನ್ಯಾಯಸುದರ್ಶನ, ಮಾನಯಾಥಾತ್ಮ್ಯನಿರ್ಣಯ, ನ್ಯಾಯಸಾರ, ತತ್ತ್ವದೀಪ, ತತ್ತ್ವನಿರ್ಣಯ, ತತ್ತ್ವಮುಕ್ತಾಕಲಾಪ, ಸರ್ವಾರ್ಥಸಿದ್ಧಿ, ನ್ಯಾಯಪರಿಶುದ್ಧಿ, ನ್ಯಾಯ

ನ್ಯಾಯಸಾರ – ತತ್ತ್ವದೀಪ – ತತ್ತ್ವನಿರ್ಣಯ–ತತ್ತ್ವಮುಕ್ತಾಕಲಾಪ–ಸರ್ವಾರ್ಥ ಸಿದ್ಧಿ–ನ್ಯಾಯಪರಿಶುದ್ಧಿ—ನ್ಯಾಯಸಿದ್ಧಾಂಜನ—ಪರಮತಭಂಗ—ತ್ತತ್ತ್ವತ್ರಯ ಚುಲುಕ – ತತ್ತ್ವತ್ರಯನಿರೂಪಣ – ತತ್ತ್ವತ್ರಯ – ಚಂಡಮಾರುತ – ವೇದಾಂತ ವಿಜಯ – ಪಾರಾಶರ್ಯವಿಜಯಾದಿ ಪೂರ್ವಾಚಾರ್ಯಪ್ರಬಂಧಾನುಸಾರೇಣ ಜ್ಞಾತವ್ಯಾರ್ಥಾನ್ ಸಂಗೃಹ್ಯ ಬಾಲಬೋಧಾರ್ಥಂ ಯತೀಂದ್ರಮತ ದೀಪಿಕಾಖ್ಯ–ಶಾರೀರಕ ಪರಿಭಾಷಾಯಾಂ ಅಸ್ಯಾಂ ಏತೇ ಅರ್ಥಾಃ ಪ್ರತಿ ಪಾದಿತಾಃ ।

೨೦. ಅಧ್ಯಾತ್ಮಶಾಸ್ತ್ರಾಣಾಂ ತತ್ತ್ವಹಿತಪುರುಷಾರ್ಥಪ್ರತಿಪಾದಕತ್ವಾತ್ ತತ್ಸಾರೇ ಅಸ್ಮಿನ್ನಪಿ ಪ್ರಕೃತಿಜೀವೇಶ್ವರಪರಿಚ್ಛೇದೈಃ ತತ್ತ್ವಸ್ಯ ನಿರೂಪಿ ತತ್ವಾತ್, ಬುದ್ಧಿಪರಿಚ್ಛೇದೇ ಉಪಾಯಸ್ಯ ನಿರೂಪಣಾತ್, ನಿತ್ಯವಿಭೂತಿ ಪರಿಚ್ಛೇದೇ ಈಶ್ವರಪರಿಚ್ಛೇದೇ ಚ ಪುರುಷಾರ್ಥಸ್ಯ ನಿರೂಪಣಾಚ್ಚ ತತ್ತ್ವಹಿತ ಪುರುಷಾರ್ಥಾ ನಿರೂಪಿತಾ ಇತಿ ನಿರವದ್ಯಮ್ ।

---

ಸಿದ್ಧಾಂಜನ, ಪರಮತಭಂಗ, ತತ್ತ್ವತ್ರಯಚುಲುಕ, ತತ್ತ್ವತ್ರಯ ನಿ ರೂ ಪ ಣ, ತತ್ತ್ವತ್ರಯ, ಚಂಡಮಾರುತ, ವೇದಾಂತವಿಜಯ, ಪಾರಾಶರ್ಯವಿಜಯ ಮೊದಲಾದ ಪೂರ್ವಾಚಾರ್ಯರುಗಳ ಪ್ರಬಂಧ ಗಳಿಗನುಸಾರವಾಗಿ[149] ತಿಳಿಯಬೇಕಾದ ಅರ್ಥಗಳನ್ನೆಲ್ಲಾ ಸಂಗ್ರಹಿಸಿ ವೇದಾಂತಾಭ್ಯಾಸವನ್ನಾರಂಭಿಸುವವರ ಉಪಯೋಗಕ್ಕಾಗಿ ಯತೀಂದ್ರಮತ ದೀಪಿಕೆ ಎಂಬ ಹೆಸರುಳ್ಳ ಈ ಶಾರೀರಕ ಪರಿಭಾಷೆಯಲ್ಲಿ ಮೇಲೆ ಇದುವರೆಗೆ ನಿರೂಪಿಸಿರುವಂತೆ ಪ್ರತಿಪಾದಿಸಲಾಗಿದೆ.

೨೦. ಅಧ್ಯಾತ್ಮಶಾಸ್ತ್ರಗಳು ತತ್ತ್ವ–ಹಿತ–ಪುರುಷಾರ್ಥಗಳನ್ನು ಪ್ರತಿ ಪಾದಿಸುತ್ತವೆಯಾದಕಾರಣ ಅದರ ಸಾರವಾದ ಈ ಕೃತಿಯಲ್ಲಿಯೂ ಪ್ರಕೃತಿ, ಜೀವ ಮತ್ತು ಈಶ್ವರ ಪರಿಚ್ಛೇದಗಳಲ್ಲಿ ತತ್ತ್ವನಿರೂಪಣೆಯೂ, ಬುದ್ಧಿ ಪರಿಚ್ಛೇದದಲ್ಲಿ ಉಪಾಯ ನಿರೂಪಣೆಯೂ, ನಿತ್ಯ ವಿಭೂತಿ ಮತ್ತು ಈಶ್ವರ ಪರಿಚ್ಛೇದಗಳಲ್ಲಿ ಪುರುಷಾರ್ಥದ ನಿರೂಪಣೆಯೂ ಮಾಡಲಾಗಿದೆ. ಹೀಗೆ ತತ್ತ್ವಹಿತ ಪುರುಷಾರ್ಥಗಳ ನಿರೂಪಣೆಯನ್ನು ಮಾಡಿರುವ ಕ್ರಮ ದೋಷ ದೂರವಾಗಿದೆ.

೨೧. ಏಕಂ ತತ್ತ್ವಂ ಇತಿ ಪ್ರತಿಪಾದಯಂತಿ ಸೂರಯಃ। ಆತ್ಮಾ ಅನಾತ್ಮಾ' ಇತಿ ವಿಭಜ್ಯ ದ್ವೇಧಾ ನಿರೂಪಯಂತಿ ಋಷಯಃ। ಶ್ರುತ್ಯನುಸಾರಾತ್ ಭೋಕ್ತೃಭೋಗ್ಯ ನಿಯಂತೃರೂಪಂ ತತ್ತ್ವತ್ರಯಂ ಇತಿ ಪ್ರತಿಪಾದಯಂತಿ ಆಚಾರ್ಯಾಃ। ಹೇಯಂ ತಸ್ಯ ನಿವರ್ತಕಂ ಉಪಾದೇಯಂ ತಸ್ಯೋಪಾಯಂ ಇತಿ ಚತುರ್ಧಾ ವಿಭಜ್ಯ ಅನುಸಂದಧತೇ ಕೇಚಿದಾಚಾರ್ಯಾಃ। ಪ್ರಾಪ್ಯಂ, ಪ್ರಾಪ್ತಾ, ಉಪಾಯಃ, ಫಲಂ, ವಿರೋಧಿ ಇತಿ ಪಂಚಧಾ ನಿರೂಪಯಂತಿ ಅಪರದೇಶಿಕಾಃ। ಅರ್ಥಪಂಚಕಮೇವ ಸಂಬಂಧೇನ ಸಾಕಂ ಷೋಢಾ ಪರಿಗಣಯ್ಯ ವರ್ಣಯಂತಿ ಅನ್ಯೇ ಗುರವಃ। ಏತೇಷಾಂ ತತ್ತ್ವದ್ವಿಭಾಜಕಧರ್ಮಮಾದಾಯ ಅನುಸಂಧಾನಂ ಉಪಪದ್ಯತೇ।

೨೨. ವಸ್ತುತಸ್ತು ವೇದಾಂತಾನಾಂ ಚಿದಚಿದ್ವಿಶಿಷ್ಟಾದ್ವೈತಂ ಏಕಮೇವ ಬ್ರಹ್ಮ ಇತಿ ತಾತ್ಪರ್ಯಮ್। ಅತ ಏವ ಚಿದಚಿದ್ವಿಶಿಷ್ಟಂ ಬ್ರಹ್ಮ

---

೨೧. ತತ್ತ್ವವು ಒಂದೇ ಎಂದು ಸೂರಿಗಳು (ವಿದ್ವಾಂಸರು) ಪ್ರತಿಪಾದಿಸುತ್ತಾರೆ. ಋಷಿಗಳು ತತ್ತ್ವವನ್ನು ಆತ್ಮಾ, ಅನಾತ್ಮಾ ಎಂದು ವಿಭಾಗಮಾಡಿ ನಿರೂಪಿಸುತ್ತಾರೆ. ಆಚಾರ್ಯರುಗಳು ಶ್ರುತಿಗನುಸಾರವಾಗಿ ಭೋಕ್ತಾ, ಭೋಗ್ಯ, ನಿಯಂತಾ ಎಂದು ಮೂರು ಬಗೆಯಾಗಿ ತತ್ತ್ವಸ್ವರೂಪವನ್ನು ವರ್ಣಿಸುತ್ತಾರೆ. ಕೆಲವರು ಆಚಾರ್ಯರು ನಾಲ್ಕು ಬಗೆಯಾಗಿ ತತ್ತ್ವವಿಭಾಗಮಾಡುತ್ತಾ ಪರಿಹಾರಮಾಡಬೇಕಾದುದು, ಅದರ ನಿವರ್ತಕ, ಉಪಾದೇಯ ಮತ್ತು ಅದರ ಉಪಾಯ ಎಂದು ಅನುಸಂಧಾನಮಾಡುತ್ತಾರೆ. ಇನ್ನಿತರ ಆಚಾರ್ಯರು ಪ್ರಾಪ್ಯ, ಪ್ರಾಪ್ತಾ, ಉಪಾಯ, ಫಲ ಮತ್ತು ವಿರೋಧಿ ಎಂದು ಐದು ಬಗೆಯಾಗಿ ನಿರೂಪಿಸುತ್ತಾರೆ. ಇನ್ನು ಕೆಲವರು ಗುರುಗಳು ಈ ಅರ್ಥಪಂಚಕಗಳೊಡನೆ (ಪ್ರಪಂಚಕ್ಕೂ ಈಶ್ವರನಿಗೂ ಇರುವ) ಸಂಬಂಧವನ್ನೂ ಸೇರಿಸಿ ಆರು ಬಗೆಯಾಗಿ ತತ್ತ್ವವಿವರಣೆಮಾಡುತ್ತಾರೆ. ಇವರೆಲ್ಲರ ಅನುಸಂಧಾನಗಳೂ ಹೀಗೆ ವಿಭಾಗ ಮಾಡಲು ಆಧಾರವಾಗಿರುವ ಬೇರೆ ಬೇರೆ ಉದ್ದೇಶಗಳಿಗನುಸಾರವಾಗಿ ಉಪಪನ್ನವಾಗಿವೆ.

೨೨. ವಸ್ತುತಃ ಚಿದಚಿದ್ವಿಶಿಷ್ಟವೂ ಏಕಮೇವಾದ್ವಿತೀಯವೂ ಆದ

ಏಕಮೇವೇತಿ ಮತಪ್ಪ ಭಗವಾನ್ ಬಾದರಾಯಣಃ 'ಅಥಾತೋ ಬ್ರಹ್ಮ ಜಿಜ್ಞಾಸಾ' ಇತಿ ಉಪಕ್ರಮ್ಯ ತದೇವ ಸಪ್ರಕಾರಂ ನಿರೂಪಿತವಾನ್ । ಅತಃ ಚಿದಚಿದ್ವಿಶಿಷ್ಟಃ ಬ್ರಹ್ಮಶಬ್ದವಾಚ್ಯಃ ವಿಷ್ಣ್ವಾಖ್ಯಃ ಪರವಾಸುದೇವೋ ನಾರಾಯಣ ಏವೈಕಂ ತತ್ತ್ವಂ ಇತಿ ವಿಶಿಷ್ಟಾದ್ವೈತವಾದಿನಾಂ ದರ್ಶನಂ ಇತಿ ಸಿದ್ಧಮ್ ।

ಇತಿ ಶ್ರೀ ವಾಧೂಲಕುಲತಿಲಕ ಶ್ರೀಮನ್ಮಹಾಚಾರ್ಯಸ್ಯ ಪ್ರಥಮದಾಸೇನ
ಶ್ರೀಮದ್ವೇಂಕಟಗಿರಿನಾಥಪದಕಮಲಸೇವಾಪರಾಯಣ ಸ್ವಾಮಿಪುಷ್ಕರಿಣೀ
ಗೋವಿಂದಾಚಾರ್ಯಸೂನುನಾ ಶ್ರೀನಿವಾಸದಾಸೇನ ವಿರಚಿತಾ
ಯತೀಂದ್ರಮತದೀಪಿಕಾಖ್ಯಾ ಶಾರೀರಕಪರಿಭಾಷಾ ಸಮಾಪ್ತಾ

---

ಬ್ರಹ್ಮವೊಂದೇ ತತ್ತ್ವವೆಂಬುದು ವೇದಾಂತಗಳ ತಾತ್ಪರ್ಯ. ಆದರಿಂದಲೇ ಚಿದ ಚಿದ್ವಿಶಿಷ್ಟವಾದ ಬ್ರಹ್ಮವೊಂದೇ ತತ್ತ್ವವೆಂದು ತಿಳಿದು ಬಾದರಾಯಣರು 'ಅಥಾತೋಬ್ರಹ್ಮಜಿಜ್ಞಾಸಾ' ಎಂದು ಆರಂಭಿಸಿ ಅದನ್ನೇ ಎಲ್ಲ ಪ್ರಕಾರಗಳಿಂದಲೂ ನಿರೂಪಿಸಿದ್ದಾರೆ. ಆದ್ದರಿಂದ ಚಿದಚಿದ್ವಿಶಿಷ್ಟನೂ, ಬ್ರಹ್ಮಶಬ್ದ ವಾಚ್ಯನೂ, ವಿಷ್ಣುನಾಮದಿಂದ ಪ್ರಸಿದ್ಧನೂ, ಆದ ಪರವಾಸುದೇವ ಶ್ರೀಮನ್ನಾರಾಯಣನೊಬ್ಬನೇ ತತ್ತ್ವವೆಂಬುದು ವಿಶಿಷ್ಟಾದ್ವೈತವಾದಿಗಳ ದರ್ಶನವೆಂಬುದು ಸಿದ್ಧವಾದ ಅಂಶವಾಗಿದೆ[150].

ಇಂತು ವಾಧೂಲಕುಲತಿಲಕನೂ ಮಹಾಚಾರ್ಯರ ಪ್ರಥಮದಾಸನೂ
ಶ್ರೀಮದ್ವೇಂಕಟನಾಥನ ಪದಕಮಲ ಸೇವಾಪರಾಯಣರಾದ ಸ್ವಾಮಿ
ಪುಷ್ಕರಿಣೀ ಗೋವಿಂದಾಚಾರ್ಯರ ಪುತ್ರನೂ ಆದ ಶ್ರೀನಿವಾಸ
ದಾಸನಿಂದ ವಿರಚಿತವಾದ ಯತೀಂದ್ರಮತದೀಪಿಕೆ ಎಂಬ
ಶಾರೀರಕ ಪರಿಭಾಷೆ ಮುಗಿದುದು.

# ವಿವರಣೆಗಳು

೧. ಮಹಾಗುರು ಎಂಬುವರು ಮಹಾಚಾರ್ಯರು ಅಥವಾ ದೊಡ್ಡಯಾಚಾರ್ಯರು. ಇವರು ಈ ಗ್ರಂಥ ಕರ್ತೃಗಳಾದ ಶ್ರೀನಿವಾಸರ ಗುರುಗಳು.

೨. ಈ ಸಿದ್ಧಾಂತದಲ್ಲಿ ಶ್ರೀಮನ್ನಾರಾಯಣನೇ ಪರತತ್ವ. ಶ್ರೀ ಎಂದರೆ ಲಕ್ಷ್ಮೀದೇವಿ. ಲಕ್ಷ್ಮೀದೇವಿಯೂ ನಾರಾಯಣನೂ ಕೂಡಿ ಒಂದೇ ತತ್ವ. ಪ್ರಪಂಚದ ಸೃಷ್ಟಿ, ಸಂರಕ್ಷಣೆ ಮತ್ತು ಮೋಕ್ಷಪ್ರದಾನಗಳನ್ನು ಇವರು ಕೂಡಿಯೇ ನಿರ್ವಹಿಸುತ್ತಾರೆ. ಸೂರ್ಯನೂ ಮತ್ತು ಪ್ರಭೆಯೂ ಹೇಗೆ ಒಂದನ್ನು ಬಿಟ್ಟು ಒಂದಿರಲಾರವೋ ಹಾಗೆಯೇ ಈ ದಿವ್ಯ ದಂಪತಿಗಳೂ ಸಹ ಒಬ್ಬರನ್ನು ಬಿಟ್ಟು ಒಬ್ಬರಿರಲಾರರು.

೩. ಶ್ರೀ ಬಾದರಾಯಣ ವ್ಯಾಸರು ವೇದಾಂತ ಸೂತ್ರಗಳನ್ನು ರಚಿಸಿದವರು.

೪. ಬೋಧಾಯನರು ವೃತ್ತಿಕಾರರು. ಪೂರ್ವೋತ್ತರಮೀಮಾಂಸಾ ಶಾಸ್ತ್ರಗಳಿಗೆ ವಿಸ್ತಾರವಾದ ವೃತ್ತಿಯನ್ನು ಬರೆದವರಿವರು.

೫. ಇವರಿಗೆ ಟಂಕಾಚಾರ್ಯರೆಂದೂ ಹೆಸರು. ಇವರು ಛಾಂದೋಗ್ಯ ಉಪನಿಷತ್ತಿಗೆ 'ವಾಕ್ಯ' ಗ್ರಂಥ ಬರೆದವರು. ಇವರನ್ನು ವಾಕ್ಯಕಾರರೆನ್ನುವರು.

೬. ಟಂಕಾಚಾರ್ಯರ ವಾಕ್ಯ ಗ್ರಂಥಕ್ಕೆ ಭಾಷ್ಯ ಬರೆದವರಿವರು.

೭. ಈ ಗ್ರಂಥ ಶಾರೀರಕ ಶಾಸ್ತ್ರದ ತತ್ವಗಳನ್ನು ವಿವೇಚಿಸುವುದರಿಂದ ಶಾರೀರಕ ಪರಿಭಾಷೆ ಎನಿಸಿದೆ. ಶಾರೀರಕ ಶಾಸ್ತ್ರವೆಂದರೆ ವೇದಾಂತ ಶಾಸ್ತ್ರ. ಈ ಸಿದ್ಧಾಂತದಲ್ಲಿ ಪ್ರಧಾನವಾಗಿ ಪ್ರತಿಪಾದಿಸಿರುವ ಅಂಶ ಶರೀರ–ಶರೀರಿಭಾವ. ಭಗವಂತನು ಚೇತನಾ ಚೇತನಗಳಿಗೆ ಶರೀರಿಯಾಗಿ ಅವುಗಳನ್ನು ಧಾರಣ ಮಾಡಿ, ನಿಯಮಿಸಿ, ಅವುಗಳಿಂದ ಪ್ರಯೋಜನವನ್ನು ಹೊಂದುವನೆಂದು

ಸಾರುವುದು ಈ ಸಿದ್ಧಾಂತ. 'ಶಾರೀರಃ ಪರಮಾತ್ಮಾ; ತತ್ಪ್ರತಿಪಾದಕಂ ಶಾಸ್ತ್ರಂ ಶಾರೀರಕಂ' ಎಂಬಂತೆ ವೇದಾಂತ ಶಾಸ್ತ್ರಕ್ಕೆ ಶಾರೀರಕ ಶಾಸ್ತ್ರವೆಂಬ ಪ್ರಸಿದ್ಧಿ ಇದೆ.

೮. ದಾರ್ಶನಿಕರು ಅಂಗೀಕರಿಸಿರುವ ಪ್ರಮಾಣಗಳ ಸಂಖ್ಯೆಯಲ್ಲಿ ಭೇದವಿದೆ. ಚಾರ್ವಾಕರಿಗೆ ಪ್ರತ್ಯಕ್ಷವೊಂದೇ ಪ್ರಮಾಣ. ಬೌದ್ಧರು ಮತ್ತು ವೈಶೇಷಿಕರು ಪ್ರತ್ಯಕ್ಷ ಅನುಮಾನಗಳನ್ನೂ, ಸಾಂಖ್ಯರು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದವನ್ನೂ, ನಯ್ಯಾಯಿಕರು ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದವನ್ನೂ, ಪ್ರಾಭಾಕರರು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ಧ ಮತ್ತು ಅರ್ಥಾಪತ್ತಿಯನ್ನೂ, ಭಾಟ್ಟರು ಮತ್ತು ಅದ್ವೈತಿಗಳು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ ಮತ್ತು ಅನುಪಲಬ್ಧಿಗಳನ್ನೂ ಅಂಗೀಕರಿಸಿದ್ದಾರೆ. ಇವುಗಳೊಡನೆ ಸಂಭವ ಮತ್ತು ಐತಿಹ್ಯಗಳೆಂಬ ಪ್ರಮಾಣಗಳೆರಡನ್ನು ಪೌರಾಣಿಕರು ಒಪ್ಪುತ್ತಾರೆ. ಸಿದ್ಧಾಂತದಲ್ಲಿ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದಗಳೆಂಬ ಮೂರು ಪ್ರಮಾಣಗಳನ್ನು ಅಂಗೀಕರಿಸಲಾಗಿದೆ.

೯. ಪ್ರಕೃತಿ, ಮಹತ್ತು, ಅಹಂಕಾರ, ಹನ್ನೊಂದು ಇಂದ್ರಿಯಗಳು (ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು), ಪಂಚ ತನ್ಮಾತ್ರೆಗಳು ಮತ್ತು ಪಂಚಭೂತಗಳು ಸೇರಿ ಇಪ್ಪತ್ತನಾಲ್ಕು ತತ್ವಗಳಾಗುತ್ತವೆ.

೧೦. ವರ್ತಮಾನ, ಭೂತ ಮತ್ತು ಭವಿಷ್ಯತ್ ಕಾಲಗಳು.

೧೧. ಬುಭುಕ್ಷು ಸಾಂಸಾರಿಕ ಸುಖಗಳನ್ನು ಅರಸುವವನು. ಮುಮುಕ್ಷು ಸಂಸಾರದ ಬಂಧನವನ್ನು ಕಳೆದುಕೊಂಡು ಮೋಕ್ಷವನ್ನು ಬಯಸುವವನು.

೧೨. ಒಂದು ಪದಾರ್ಥವಿರುವಂತೆ ತಿಳಿಸುವ ಜ್ಞಾನ ಪ್ರಮೆ. ಹಾಗೆಯೇ ಅದು ವ್ಯವಹಾರಕ್ಕೂ ಅನುಗುಣವಾಗಿರುವ ಜ್ಞಾನವಾಗಬೇಕು. ಜೀವನದ ಧ್ಯೇಯಗಳನ್ನು ಸಾಧಿಸಲು ಕೆಟ್ಟುದನ್ನು ಬಿಡಲೂ, ಒಳ್ಳೆಯದನ್ನು ಸ್ವೀಕರಿಸಲೂ ಅದು ಸಹಾಯಕವಾಗಬೇಕು. ಶಾಬ್ದ ವ್ಯವಹಾರಕ್ಕೂ ಅದು ಹೊಂದಿಕೊಳ್ಳುವಂತಿರಬೇಕು.

೧೩. ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯನ್ನು ಗ್ರಹಿಸುವುದು ಇದಕ್ಕೆ ನಿದರ್ಶನ.

೧೪. ಅದ್ವೈತಿಗಳು ಹೇಳುವಂತೆ ಸಂಸರ್ಗರಹಿತವಾದ ನಿರ್ವಿಕಲ್ಪಕ ಪ್ರತ್ಯಕ್ಷವನ್ನು ಈ ಸಿದ್ಧಾಂತದಲ್ಲಿ ಅಂಗೀಕರಿಸುವುದಿಲ್ಲ. ಇವರ ದೃಷ್ಟಿಯಲ್ಲಿ ನಿರ್ವಿಕಲ್ಪಕವೂ ಸವಿಕಲ್ಪಕವೇ. ಸವಿಕಲ್ಪಕ ಪ್ರತ್ಯಕ್ಷದಲ್ಲಿ ಹಿಂದಿನ ಅನುಭವದ ಸ್ಮರಣೆ ಇರುತ್ತದೆ. ಜಾತ್ಯಾದ್ಯನೇಕ ಪದಾರ್ಥವಿಶಿಷ್ಟವಾದುದರ ಅನುಸಂಧಾನ ಸವಿಕಲ್ಪಕ ಪ್ರತ್ಯಕ್ಷದಲ್ಲಿರುತ್ತದೆ. ಕೆಲವು ವಿಶೇಷಣಗಳಿಂದ ವಿಯುಕ್ತವಾದುದರ ಗ್ರಹಣ ನಿರ್ವಿಕಲ್ಪಕ ಪ್ರತ್ಯಕ್ಷದಲ್ಲಿ ಆಗುವುದು. ಒಂದು ಜಾತಿಯ ಪದಾರ್ಥ ವನ್ನು ಮೊದಲ ಬಾರಿಗೆ ನೋಡುವುದು ನಿರ್ವಿಕಲ್ಪಕ ಪ್ರತ್ಯಕ್ಷ. 'ಇದಂ ಇತ್ಥಂ' ಎಂದೇ ಎಲ್ಲಾ ಪ್ರತೀತಿಯೂ ಉಂಟಾಗುವುದು. ಮುಂದೆ ಅದೇ ಜಾತಿಯ ಪದಾರ್ಥಗಳನ್ನು ನೋಡಿದಾಗ ಹಿಂದೆ ತಿಳಿದ ವಿಶೇಷಣಗಳ ಅನುವೃತ್ತಿಯೊಡನೆ ಅದರ ಗ್ರಹಣವಾಗುವುದು. ಆದುದರಿಂದ ಅದು ಸವಿಕಲ್ಪಕವೆನಿಸುವುದು.

೧೫. ಚಕ್ಷುರಿಂದ್ರಿಯಕ್ಕೆ ಪದಾರ್ಥವೊಂದರ ಸಂಯೋಗವಾಗುತ್ತದೆ. ಆ ಪದಾರ್ಥದ ಬಣ್ಣ ಮೊದಲಾದುವೂ ಸಹ ಕಣ್ಣಿನಿಂದ ಗ್ರಹಿಸಲ್ಪಡುತ್ತವೆ. ಇಲ್ಲಿ ಕಣ್ಣಿಗೂ ಆ ಬಣ್ಣಕ್ಕೂ ಸಂಬಂಧ ಹೇಗೆ ಎಂಬುವುದಕ್ಕೆ ಈ ಸಿದ್ಧಾಂತ ದಲ್ಲಿ 'ಆಶ್ರಯಣ' ಸಂಬಂಧವೆಂದು ತಿಳಿಸಲಾಗಿದೆ. ಬಣ್ಣ ಮೊದಲಾದುವು ಗಳೊಡನೆ ಸಂಬಂಧವುಳ್ಳ ಪದಾರ್ಥಗಳ ಗ್ರಹಣ ಆಗುವುದಕ್ಕೆ 'ಸಂಯುಕ್ತಾ ಶ್ರಯಣ ಸಂಬಂಧ' ಎನ್ನಲಾಗಿದೆ. ಗುಣ–ಗುಣಿಗಳಿಗೆ ಜಾತಿ–ವ್ಯಕ್ತಿಗಳಿಗೆ ಇರುವ ಸಂಬಂಧ ಸಮವಾಯವೆಂದು ನಯ್ಯಾಯಿಕರು ಹೇಳುತ್ತಾರೆ. ಈ ಸಮವಾಯ ಸಂಬಂಧದಿಂದ ಪ್ರತ್ಯಕ್ಷ ಜ್ಞಾನವುಂಟಾಗುವುದೆಂಬುದು ಅವರ ಮತ. ಇದು ಈ ಸಿದ್ಧಾಂತಕ್ಕೆ ಒಪ್ಪಿಗೆಯಿಲ್ಲ.

೧೬. ನಯ್ಯಾಯಿಕರ ಅಭಿಪ್ರಾಯದಲ್ಲಿ ಸ್ಮೃತಿ ಸಂಸ್ಕಾರಜನ್ಯ ವಾದುದು. ಪೂರ್ವಾನುಭವದಿಂದ ಉಂಟಾದ ಸಂಸ್ಕಾರವನ್ನೇ ಸ್ಮೃತಿ (ಸ್ಮರಣೆ) ಅವಲಂಬಿಸಿದೆ. ಆದಕಾರಣ ಇದು ಸ್ವತಂತ್ರವಾದ ಪ್ರಮಾಣವಲ್ಲ.

೧೭. ಸ್ಮೃತಿ ಮತ್ತು ಪ್ರತ್ಯಕ್ಷಗಳ ಅಂಶಗಳು ಸೇರಿ ಪ್ರತ್ಯಭಿಜ್ಞೆ ಆಗುವು ದೆಂಬುದು ಭಾಟ್ಟರ ಮತ್ತು ಅದ್ವೈತಿಗಳ ಅಭಿಪ್ರಾಯ. ನಯ್ಯಾಯಿಕರು

ಪ್ರತ್ಯಭಿಜ್ಞೆಯನ್ನು ಪ್ರತ್ಯಕ್ಷದಲ್ಲಿಯೇ ಸೇರಿಸಿದ್ದಾರೆ. ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಪ್ರತ್ಯಭಿಜ್ಞೆ ಪ್ರತ್ಯಕ್ಷದಲ್ಲಿಯೇ ಸೇರಿಹೋಗುತ್ತದೆ. ಇಂದ್ರಿಯಾರ್ಥಗಳ ಸಂಯೋಗದಿಂದ ಉದಿಸುವುದು ಪ್ರತ್ಯಭಿಜ್ಞೆ ಎಂಬುದರಲ್ಲಿ ಸಂದೇಹಲ್ಲಿಲ್ಲ.

೧೮. ಅಭಾವವೆಂಬುದು ಅದ್ವೈತದರ್ಶನದಲ್ಲಿ ಆರನೆಯ ಪ್ರಮಾಣವಾಗಿದೆ. ನಯ್ಯಾಯಿಕರು ಇದನ್ನು ಪ್ರತ್ಯೇಕವಾದ ಪದಾರ್ಥವೆಂದು ಅಂಗೀಕರಿಸುತ್ತಾರೆ· ಆದರೆ ಪ್ರಮಾಣವೆಂದು ಒಪ್ಪುವುದಿಲ್ಲ. ಅಭಾವವು ಪ್ರತ್ಯೇಕವಾದ ಪದಾರ್ಥವೆಂಬುದನ್ನು ವಿಶಿಷ್ಟಾದ್ವೈತವು ಒಪ್ಪುವುದಿಲ್ಲ.

೧೯. ಶ್ರೀಭಾಷ್ಯದಲ್ಲಿ ರಾಮಾನುಜರು 'ಯಥಾರ್ಥಂ ಸರ್ವವಿಜ್ಞಾನಂ ಇತಿ ವೇದವಿದಾಂ ಮತಂ । ಶ್ರುತಿಸ್ಮೃತಿಭ್ಯಸ್ಸರ್ವಸ್ಯ ಸರ್ವಾತ್ಮತ್ವಪ್ರತೀತಿತಃ ॥ ಎಂದು ತಿಳಿಸಿ ಎಲ್ಲ ಬಗೆಯ ತಿಳಿವಳಿಕೆಗಳಿಗೆ ವಿಷಯವಾದುದು ಸತ್ಯವಾದುದೆಂದು ಸಮರ್ಥಿಸಿದ್ದಾರೆ. ಸೃಷ್ಟಿಕಾಲದಲ್ಲಿ 'ಸತ್' ಶಬ್ದವಾಚ್ಯವಾದ ಪರವಸ್ತು ತೇಜಸ್ಸು, ಜಲ ಮತ್ತು ಪೃಥಿವಿಗಳನ್ನು ಸೃಜಿಸಿತೆಂದೂ ಅವುಗಳ ತ್ರಿವೃತ್ಕರಣದಿಂದ ಜಗತ್ಸೃಷ್ಟಿ ಆಯಿತೆಂದೂ ಹೇಳಿದೆ. ಎಲ್ಲ ವಸ್ತುಗಳೂ ಈ ತತ್ತ್ವಗಳನ್ನೊಳಗೊಂಡೇ ಇವೆ. ಅಗ್ನಿಯಲ್ಲಿರುವ ಕೆಂಪುರೂಪ ತೇಜಸ್ಸಿನದು ; ಬಿಳಿಯ ರೂಪ ಜಲದ್ದು ; ಕಪ್ಪು ರೂಪ ಪೃಥಿವಿಯದು. ಹೀಗೆ ಪಂಚೀಕರಣಪ್ರಕ್ರಿಯೆಯನ್ವಯ ಬೇರೆ ಬೇರೆ ಪ್ರಮಾಣದಲ್ಲಿ ಈ ಐದು ತತ್ತ್ವಗಳ ಅಂಶಗಳು ಎಲ್ಲ ಪದಾರ್ಥಗಳಲ್ಲಿಯೂ ಇವೆ. ಕಪ್ಪೆಯ ಚಿಪ್ಪಿನಲ್ಲಿ ಬೆಳ್ಳಿಯ ಗ್ರಹಣ ಆಗುವುದಕ್ಕೆ ಅದರಲ್ಲಿ ಬೆಳ್ಳಿಯ ಸ್ವಲ್ಪಾಂಶ ಇರುವುದೇ ಕಾರಣವಾದುದರಿಂದ ಅದು ಯಥಾರ್ಥವೇ ಆಗುತ್ತದೆ. ನೋಡುವವನ ದೃಷ್ಟಿದೋಷವೇ ಮೊದಲಾದ ದೋಷಪರಿಹಾರವಾದಾಗ ಕಪ್ಪೆಚಿಪ್ಪಿನಲ್ಲಿ ಚಿಪ್ಪಿನ ಬಹ್ವಂಶವಿರುವುದು ಸ್ಪಷ್ಟವಾಗುವುದು. ಆಗ ಅವನಿಗೆ ಭ್ರಮೆ ಉಂಟಾಗದು. ಆಯಾ ಪದಾರ್ಥದಲ್ಲಿರುವ ಬಹ್ವಂಶದ ಗ್ರಹಣವಾದಾಗ ಪ್ರತ್ಯಕ್ಷ ದೋಷ ದೂರವಾಗುತ್ತದೆ. ಹೀಗೆ ಎಲ್ಲ ಜ್ಞಾನಗಳಿಗೂ ಸತ್ಯವಾದ ವಿಷಯಗಳಿರುವುದರಿಂದ ಈ ಸಿದ್ಧಾಂತದಲ್ಲಿ ಭ್ರಮೆ ಎಂಬುದು ಇಲ್ಲವೆಂದೇ ಹೇಳಬಹುದು

೨೦ ಖ್ಯಾತಿ ಎಂದರೆ ಜ್ಞಾನ–ಒಂದು ಪದಾರ್ಥದಲ್ಲಿ ಬೇರೊಂದು

ಪದಾರ್ಥದ ಜ್ಞಾನ ಕೆಲವು ವೇಳೆ ಉಂಟಾಗುತ್ತದೆ. ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯ ಜ್ಞಾನವುಂಟಾಗುವುದು ಇದಕ್ಕೆ ನಿದರ್ಶನ. ಇದನ್ನೇ ಭ್ರಮೆ ಎನ್ನುತ್ತಾರೆ. ಇದು ಹೇಗೆ ಉಂಟಾಗುತ್ತದೆ ಎಂಬುದನ್ನು ಒಬ್ಬೊಬ್ಬರೂ ವಿವೇಚಿಸಿದ್ದಾರೆ. ಇದನ್ನು ನಿರೂಪಿಸುವ ಐದು ಅಭಿಪ್ರಾಯಗಳು ಹೀಗಿವೆ.—

(೧) ಪ್ರಭಾಕರರ ಅಖ್ಯಾತಿವಾದ, (೨) ಯೋಗಾಚಾರರ ಆತ್ಮ ಖ್ಯಾತಿ, (೩) ಅದ್ವೈತಿಗಳ ಅನಿರ್ವಚನೀಯತಾಖ್ಯಾತಿ, (೪) ನಯ್ಯಾಯಿಕರ ಅನ್ಯಥಾ ಖ್ಯಾತಿ, (೫) ಮಾಧ್ಯಮಿಕರ ಅಸತ್ ಖ್ಯಾತಿ.

ಪ್ರಭಾಕರರ ಮತದಲ್ಲಿ ನಿಜವಾಗಿ ಭ್ರಮೆ ಎಂಬುದೇ ಇಲ್ಲ. ಕಪ್ಪೆಚಿಪ್ಪನ್ನು ನೋಡಿದಾಗ ಕಣ್ಣುಮುಂದಿರುವ ಚಿಪ್ಪಿನ ಗ್ರಹಣವಾಗುತ್ತದೆ. ಮತ್ತೆಲ್ಲಿಯೋ ನೋಡಿದ್ದ ಬೆಳ್ಳಿಯ ಜ್ಞಾನವೂ ತೋರುತ್ತದೆ. ನೆನಪಿನಲ್ಲಿದ್ದ ಬೆಳ್ಳಿ ಆ ತಿಳಿವಳಿಕೆಯಲ್ಲಿ ಸೇರಿಹೋಗುತ್ತದೆ. ಅವುಗಳೆರಡಕ್ಕೂ ಭೇದವನ್ನು ಗ್ರಹಿಸಲು ಶಕ್ತನಾಗುವುದಿಲ್ಲ. ನಯನದೋಷದಕಾರಣ ಬೆಳ್ಳಿಯ ಜ್ಞಾನಕ್ಕೂ ಚಿಪ್ಪಿನ ಜ್ಞಾನಕ್ಕೂ ಭೇದವನ್ನು ಗ್ರಹಿಸಲು ಅಸಮರ್ಥನಾದಾಗ ಆ ಚಿಪ್ಪೇ ಬೆಳ್ಳಿ ಎಂದು ತೆಗೆದುಕೊಳ್ಳಲು ಹೋಗುತ್ತಾನೆ. ಆದರೆ ಅದರಲ್ಲಿ ರಜತಾಂಶ ವಿಲ್ಲದಿರುವುದನ್ನು ಮನಗಂಡಾಗ ಭ್ರಮೆ ಜಾರುತ್ತದೆ. ಇದು ಅಖ್ಯಾತಿವಾದ.

ಬೌದ್ಧರ ವಿಜ್ಞಾನ ವಾದಿಗಳು (ಇವರಿಗೇ ಯೋಗಾಚಾರರೆಂದು ಹೆಸರು.) ಆತ್ಮಖ್ಯಾತಿವಾದಿಗಳು. ಶುಕ್ತಿರಜತ ಭ್ರಮೆಯಲ್ಲಿ ನಿಜವಾಗಿ ಇಲ್ಲದಿರುವ ರಜತವಿಜ್ಞಾನವು ಹೇಗೆ ತೋರುವುದೋ ಹಾಗೆ (ಆತ್ಮ) ಬಾಹ್ಯವಸ್ತುಗಳ ರೂಪದಲ್ಲಿ ತೋರುವುದೆಂದು ಇವರ ಸಿದ್ಧಾಂತ. ಆದುದರಿಂದ ಬಾಹ್ಯವಸ್ತುಗಳು ಇಲ್ಲವಾಗುವುವು. ಶುಕ್ತಿಯಲ್ಲಿನ ರಜತದಂತೆ.

ಅದ್ವೈತಿಗಳ ಮತದಂತೆ ಭ್ರಮವು ಇರುವುದಾಗಲೀ, ಇಲ್ಲದಿರುವುದಾಗಲಿ 'ಸದಸತ್' ಆಗಲೀ ಆಗಿಲ್ಲ. ಆದುದರಿಂದ ಅದು 'ಅನಿರ್ವಚನೀಯವೆಂದು' ಅವರ ಮತ. ವಿಷಯೇಂದ್ರಿಯಸಂನಿಕರ್ಷವಾದಾಗ 'ಇದು' ಎಂಬ ಆಕಾರದ ಅಂತಃಕರಣವೃತ್ತಿ ಉದಿಸುವುದು ಈ ಅಂತಃಕರಣ ವೃತ್ತಿಯಲ್ಲಿ 'ಇದು' ಎಂಬುದರಿಂದ ಉಪಹಿತವಾದ ಚೈತನ್ಯ ಪ್ರತಿಫಲಿಸುವುದು. ಆಗ

ಬಾಹ್ಯವೃತ್ತಿಯ ಕಾರಣ 'ಇದು' ಎಂಬುದರಿಂದ ಉಪಹಿತವಾದ ಚೈತನ್ಯವೂ, ವೃತ್ತ್ಯವಚ್ಛಿನ್ನವಾದ ಚೈತನ್ಯವೂ ಪ್ರಮಾತೃಚೈತನ್ಯವೂ ಏಕೀಭವಿಸುವುವು. ಆಗ ಪ್ರಮಾತೃಚೈತನ್ಯದಿಂದ ಬೇರೆಯಲ್ಲದ ವಿಷಯಚೈತನ್ಯದಲ್ಲಿರುವ ಅವಿದ್ಯೆ ಶುಕ್ತಿಕೆಯ ಪ್ರಕಾರವನ್ನು ಹೊಂದಿದ್ದು, ರಜತಸಂಸ್ಕಾರದ ಸಹಾಯದಿಂದ ಅಧ್ಯಸ್ತವಾದ ರಜತದಂತೆ ಕಾಣುತ್ತದೆ. ಯಥಾರ್ಥ ಜ್ಞಾನದಿಂದ ಅದು ಬಾಧಿತವಾಗುತ್ತದೆ.

ನೈಯ್ಯಾಯಿಕರು ಅನ್ಯಥಾಖ್ಯಾತಿವಾದಿಗಳು. ಒಂದು ಪದಾರ್ಥವನ್ನು ಮತ್ತೊಂದು ಪದಾರ್ಥವನ್ನಾಗಿ ತಪ್ಪು ತಿಳಿಯುವುದು ಇದು. 'ಇದು ಬೆಳ್ಳಿ' ಎಂಬಲ್ಲಿ 'ಇದು' ಎಂಬುದು ಶುಕ್ತಿಗೆ ಅನ್ವಯಿಸುತ್ತದೆ. ದೂರದಲ್ಲಿರುವಿಕೆ, ವಸ್ತುವಿನ ಸೂಕ್ಷ್ಮತೆ ಮೊದಲಾದ ಕಾರಣ ಅದು ಗ್ರಹಿಸಲ್ಪಟ್ಟಿಲ್ಲ. ವಿಷಯೇಂದ್ರಿಯಸನ್ನಿಕರ್ಷದಿಂದಲೇ ಶುಕ್ತಿಯ ಪ್ರತ್ಯಕ್ಷಗ್ರಹಣ ಇಲ್ಲಿಯೂ ಆಗಿರುತ್ತದೆ. 'ಇದು' ಎಂದು ತೋರುತ್ತಿರುವ ಶುಕ್ತಿಗೆ ಸಂಬಂಧಿಸಿದಂತೆ ಮತ್ತೆಲ್ಲೋ ಇರುವ ಬೆಳ್ಳಿಯ ಗುಣ ಸೇರಿಕೊಂಡು ಬಂದಿದೆ. ಬೆಳ್ಳಿ ಪ್ರತ್ಯಕ್ಷಕ್ಕೆ ವಿಷಯವೇ ಆಗದಿರುವಾಗ ಅದರ ಗ್ರಹಣ ಹೇಗೆ ಆಗುವುದೆಂಬುದಕ್ಕೆ ನೈಯ್ಯಾಯಿಕರು ಸದೃಶವಸ್ತು ಸಂದರ್ಶನದಿಂದ ರಜತಸ್ಮೃತಿ ಆಗಿ ರಜತ ಸಂಪರ್ಕವಾಗುವುದೆಂದು ಹೇಳುತ್ತಾರೆ.

ಬೌದ್ಧರಲ್ಲಿ ಶೂನ್ಯವಾದಿಗಳು 'ಅಸತ್‌ಖ್ಯಾತಿವಾದಿಗಳು' 'ಅಸತ್ ಆದ (ಇಲ್ಲದೆ ಇರುವ) ಪದಾರ್ಥದ ಗ್ರಹಣವೇ ಭ್ರಮೆ ಎಂಬುದು ಇವರ ವಾದ. ಬೆಳ್ಳಿ ಇಲ್ಲದಿರುವಾಗ 'ಇದು ಬೆಳ್ಳಿ' ಎಂಬ ಜ್ಞಾನವುಂಟಾಗಿದೆ. ಇಲ್ಲಿ ಪ್ರತ್ಯಕ್ಷಕ್ಕೆ ವಿಷಯವಾಗುವುದು. ಇಲ್ಲದಿರುವ ಬೆಳ್ಳಿ. ಈ ಅನುಭವದ ಆಧಾರದ ಮೇಲೆ ಅಸತ್ಪದಾರ್ಥವೂ ಜ್ಞಾನವಿಷಯವಾಗುವುದೆಂದು ಇವರು ಹೇಳುತ್ತಾರೆ. ಇದು ಅಸತ್‌ಖ್ಯಾತಿವಾದ.

ಈ ವಾದಗಳನ್ನೆಲ್ಲಾ ವಿಶಿಷ್ಟಾದ್ವೈತಸಿದ್ಧಾಂತ ನಿರಾಕರಿಸುತ್ತದೆ. ಮತ್ತು ತನ್ನದೇ ಆದ ಯಥಾರ್ಥಖ್ಯಾತಿಯನ್ನು ಸ್ಥಾಪಿಸುತ್ತದೆ.

೨೧. ಜಲವು ಯಾವಾಗಲೂ ಭೂಮಿಯೊಡನೆ ಹಾಗೂ ಬೆಳಕಿನೊಡನೆ ಇರುತ್ತದೆ. ದೃಷ್ಟಿದೋಷದ ಕಾರಣ, ಅದೃಷ್ಟದ ಕಾರಣ ಭೂಮಿ ಮತ್ತು

ಪ್ರಕಾಶಗಳು ಗೋಚರಿಸದೆ, ಜಲವು ಮಾತ್ರ ಪ್ರತ್ಯಕ್ಷ ವಿಷಯವಾಗುತ್ತದೆ. ಈ ಸಿದ್ಧಾಂತದಲ್ಲಿ ಎಲ್ಲ ಪ್ರತ್ಯಕ್ಷವೂ ನಿಜವಾದ ವಸ್ತುವಿನ ಪ್ರತ್ಯಕ್ಷವೇ ಆಗಿರುತ್ತದೆ. ಕಟ್ಟುನಿಟ್ಟಾಗಿ ಪರೀಕ್ಷಿಸಿದರೆ ಇಲ್ಲದುದರ ಗ್ರಹಣ ಎಲ್ಲಿಯೂ ಆಗುವುದಿಲ್ಲ.

೨೨. ಈ ಸಿದ್ಧಾಂತದಲ್ಲಿ ದಿಕ್ಕು ಎಂಬುವುದು ಪ್ರತ್ಯೇಕ ಪದಾರ್ಥವಲ್ಲ. ನಿಜವಾಗಿ ದಿಕ್ಕು ಒಂದೇ. ಕಾಲ್ಪನಿಕವಾದ ಭೇದದ ಕಾರಣ ಪೂರ್ವ ಪಶ್ಚಿಮ ಮುಂತಾದವು ಉಂಟಾಗಿವೆ. ಇದೂ ಸಾಪೇಕ್ಷವಾದುದು. ಒಂದು ಊರಿಗೆ ಪೂರ್ವದಲ್ಲಿರುವುದು ಮತ್ತೊಂದು ಊರಿಗೆ ಪಶ್ಚಿಮದಲ್ಲಿರುತ್ತದೆ. ಆದರೆ ನಯ್ಯಾಯಿಕರಿಗೆ ದಿಕ್ಕು ಪ್ರತ್ಯೇಕವಾದ ಪದಾರ್ಥ.

೨೩. ಪ್ರತಿಯೊಂದು ಜ್ಞಾನಕ್ಕೂ ಭೇದ ವಿಶಿಷ್ಟವಾದ ಯಾವುದಾದರೂ ಒಂದು ವಿಷಯ ಇದ್ದೇ ಇರುತ್ತದೆ. ಒಂದು ಘಟದ ಪ್ರತ್ಯಕ್ಷವಾದಾಗ ಇತರ ಪದಾರ್ಥಗಳಾದ ಪಟ, ಕುರ್ಚಿ, ಕಲ್ಲು ಮೊದಲಾದುವಕ್ಕಿಂತ ಅದು ಭಿನ್ನವಾಗಿ ತೋರುತ್ತದೆ. ಇಲ್ಲಿ ಭೇದವೆಂದರೆ 'ಘಟತ್ವ' ಎಂದೇ ಅರ್ಥ. 'ಇದು ಒಂದು ಘಟ' ಎಂಬ ಜ್ಞಾನದಲ್ಲಿ 'ಘಟತ್ವ' ವೇ ಗ್ರಹಿಸಲ್ಪಡುತ್ತದೆ. ಅದು ಭೇದವಿಶಿಷ್ಟವಾಗಿ ತೋರಬೇಕಾದರೆ ಅದಕ್ಕಿಂತ ಬೇರೆಯಾದುದರೊಂದರ ಆವಶ್ಯಕತೆ ಇದೆ. ಹಾಗೆ ಗ್ರಹಿಸಲ್ಪಟ್ಟಾಗ 'ಘಟವು ಪಟಕ್ಕಿಂತ ಭಿನ್ನ ವಾದುದು' ಎಂಬುದಾಗಿ ಹೇಳುತ್ತೇವೆ.

ವಿಶಿಷ್ಟಾದ್ವೈತ ಸಿದ್ಧಾಂತಕ್ಕನುಸಾರವಾಗಿ ಜಾತಿ ಮೊದಲಾದ ವಿಶೇಷಣಗಳಿಂದ ಕೂಡಿದ ಪದಾರ್ಥಗಳೇ ಪ್ರತ್ಯಕ್ಷಗೋಚರವಾಗುವುವು. ಇವು ತಮ್ಮ ಸಾಮಾನ್ಯಸ್ವರೂಪವನ್ನೂ ತೋರಿಸಿ ಇತರ ಪದಾರ್ಥಗಳಿಂದ ತಾವು ಬೇರೆಯಾಗಿರುವುದನ್ನೂ ತೋರಿಸಿಕೊಳ್ಳುತ್ತವೆ. ಪ್ರತ್ಯಕ್ಷವಾದಾಗ ನಾವು ಇತರ ಪದಾರ್ಥಗಳಿಗಿಂತ ಅವು ಭಿನ್ನವಾಗಿರಲು ಆಧಾರವಾದ ಜಾತ್ಯಾದಿ ಲಕ್ಷಣವನ್ನೂ. ಹಾಗೆಯೇ ಆಯಾ ಪದಾರ್ಥಗಳ ವಿಶೇಷಸ್ವರೂಪವನ್ನೂ ಗ್ರಹಿಸುತ್ತೇವೆ.

೨೪. ಒಮ್ಮೆ ಹತ್ತು ಮಂದಿ ನದಿಯೊಂದನ್ನು ದಾಟಿದರು. ಎಲ್ಲರೂ

ಸುರಕ್ಷಿತವಾಗಿ ಬಂದಿರುವರೋ ಇಲ್ಲವೋ ನೋಡೋಣವೆಂದುಕೊಂಡು ಅವರಲ್ಲೊಬ್ಬನು ತನ್ನನ್ನುಳಿದು ಮಿಕ್ಕ ಒಂಭತ್ತು ಮಂದಿಯನ್ನು ಎಣಿಸಿದನು. ತಪ್ಪಿಸಿಕೊಂಡಿರುವ ಹತ್ತನೆಯವನ ಬಗೆಗೆ ಅವರಿಗೆ ಬಹಳ ಚಿಂತೆಯಾಯಿತು. ಆಗ ಆಗಂತುಕನೊಬ್ಬ ಬಂದು ಅವರನ್ನೆಲ್ಲಾ ಎಣಿಸಿ ಮೊದಲು ಎಣಿಸಿದವನನ್ನು ಕುರಿತು 'ನೀನು ಹತ್ತನೆಯವನಾಗಿದ್ದೀಯೆ' ಎಂದು ತಿಳಿಸಿದನು.

೨೫. ಧರ್ಮವು ಪ್ರತ್ಯಕ್ಷಗೋಚರವಲ್ಲವೆಂಬುದನ್ನು ಒಪ್ಪಲಾಗಿದೆ.

೨೬. ಇದು ಪ್ರತ್ಯಕ್ಷಜ್ಞಾನದ ಬಗೆಗೆ ಅದ್ವೈತಿಗಳು ಹೇಳುವ ಸಿದ್ಧಾಂತವಾಗಿದೆ.

೨೭. 'ನಿಷ್ಪ್ರಕಾರಕವಾದ ಜ್ಞಾನವು ನಿರ್ವಿಕಲ್ಪಕ' ವೆಂಬುದು ನೈಯಾಯಿಕರ ಮತ. ತರ್ಕಸಂಗ್ರಹ ನೋಡಿ.

೨೮. ಕಣಾದರು ವೈಶೇಷಿಕ ಸೂತ್ರಕಾರರು. ಇವರಿಗೆ ಉಲೂಕ, ಕಾಶ್ಯಪ ಎಂಬ ಹೆಸರುಗಳಿವೆ.

೨೯. ಪಾಣಿನಿಗಳು ಪ್ರಖ್ಯಾತರಾದ ವ್ಯಾಕರಣಕಾರರು. ಇವರ ಕೃತಿ ಅಷ್ಟಾಧ್ಯಾಯೀ. ಇವರು ಈಶ್ವರನಿಂದ ಮಾಹೇಶ್ವರ ಸೂತ್ರಗಳನ್ನು ಪಡೆದುಕೊಂಡರೆಂಬ ಪ್ರತೀತಿ ಇದೆ.

೩೦. ಗೌತಮರು ನ್ಯಾಯಸೂತ್ರಕಾರರು. ಇವರಿಗೆ ಅಕ್ಷಪಾದರೆಂಬ ಹೆಸರೂ ಇದೆ.

೩೧. ವೈಶೇಷಿಕರು ಈ ವಾದವನ್ನು ಹೇಳುತ್ತಾರೆ. ಎರಡು ಪರಮಾಣುಗಳು ಮೊದಲಾಗಿ ಪರಮಾಣುಗತ ಅದೃಷ್ಟದಿಂದ ಜೀವಗತ ಅದೃಷ್ಟದಿಂದ, ಈಶ್ವರಗತ ಅದೃಷ್ಟದಿಂದ ಕೂಡುತ್ತವೆಯೆಂದೂ ಹಾಗೆ ದ್ವ್ಯಣು ಕವಾಗಿ, ಮುಂದೆ ತ್ರ್ಯಣುಕವಾಗಿ, ಮುಂದೆ ಸ್ಥೂಲವಾದ ಜಗತ್ತಾಗಿ ಪರಿಣಮಿಸುವುದೆಂದು ಇವರ ವಾದ. ಇದಕ್ಕೆ ಆರಂಭವಾದ ಎಂದೂ ಹೆಸರು. ಇದನ್ನು ಮುಂದೆ ಪರೀಕ್ಷಿಸಿ ಖಂಡಿಸಿದೆ (ನಾಲ್ಕನೆಯ ಅವತಾರ ನೋಡಿ.)

೩೭ ವೇದವು ಅಪೌರುಷೇಯ, ನಿತ್ಯ ಮತ್ತು ಸ್ವತಃ ಸಿದ್ಧವೆಂಬುದು ವಿಶಿಷ್ಟಾದ್ವೈತದ ಸಿದ್ಧಾಂತ. ದೇವತೆಗಳು ಶರೀರಹೊಂದಿರುವ ಕಾರಣ ಅನಿತ್ಯರೆಂದೂ ಅವರನ್ನು ಕುರಿತ ವೇದವೂ ಅನಿತ್ಯವೆಂದೂ ವಾದಿಸುವವರುಂಟು. 'ಮಂತ್ರಕೃತಃ' ಎಂಬಲ್ಲಿ ಮಂತ್ರವನ್ನು ರಚಿಸಿದವರೆಂದು ಅರ್ಥ ಹೇಳುವವರೂ ಉಂಟು. ಆದರೆ ಈ ಅಂಶವನ್ನು ಈ ಸಿದ್ಧಾಂತ ಒಪ್ಪುವುದಿಲ್ಲ. ವೇದ ನಿತ್ಯ. ಪ್ರತಿಯೊಂದು ಯುಗದಲ್ಲಿಯೂ ಭಗವಂತನು ಅಂತರ್ಹಿತವಾದ ವೇದ ಶಬ್ದಗಳನ್ನು ಹಾಗೆ ಹಾ ಯೇ ಸ್ಮರಿಸಿ ಮುಂದಿನವರಿಗೆ ಉಪದೇಶಿಸುವನೆಂದು ಹೇಳಿದೆ. ನೈಯಾಯಿಕರು ಭಗವಂತನಿಂದ ವೇದ ಪ್ರಣೀತವಾಯಿತೆನ್ನುವರು. ವೇದವನ್ನು ರಚಿಸಿದವನು ಪರಮ ಪುರುಷನಾದ ಭಗವಂತನೆಂದು ಇವರ ವಾದ. ಇದನ್ನೂ ಸಿದ್ಧಾಂತದಲ್ಲಿ ನಿರಾಕರಿಸಿದೆ.

೩೩. ನ್ಯಾಯ ಸಿದ್ಧಾಂತದಲ್ಲಿ ಈಶ್ವರನನ್ನು ಅನುಮಾನದಿಂದ ಸ್ಥಾಪಿಸಲು ಯತ್ನಿಸಿದೆ. ಯಾವುದು ಕಾರ್ಯವೋ ಅದಕ್ಕೊಂದು ಕಾರಣ ವಿರಲೇಬೇಕಷ್ಟೇ? ಜಗತ್ತು ಕಾರ್ಯವಾದ ಕಾರಣ ಅದಕ್ಕೆ ಕಾರಣನಾದ ಈಶ್ವರ ಉಂಟು ಎಂದು ಅವರ ವಾದ. ಇದನ್ನು ವೇದಾಂತ ಅಂಗೀಕರಿಸುವುದಿಲ್ಲ. ಬ್ರಹ್ಮಸೂತ್ರಗಳಲ್ಲಿ ಮೂರನೆಯದಾದ 'ಶಾಸ್ತ್ರಯೋನಿತ್ವಾತ್' ಎಂಬುದರಲ್ಲಿ ಬ್ರಹ್ಮವಸ್ತು ಶಾಸ್ತ್ರೈಕಸಮಧಿಗಮ್ಯವೆಂದು ಸಾಧಿಸಿ ಈಶ್ವರನನ್ನು ಅನುಮಾನದಿಂದ ಸಾಧಿಸುವುದು ಅಯುಕ್ತವೆಂದು ಸಮರ್ಥಿಸಿದೆ.

೩೪. ವಿಶಿಷ್ಟಾದ್ವೈತ ಸಿದ್ಧಾಂತಕ್ಕನುಸಾರ ಜೀವನು ಅಣುಮಾತ್ರನು. ಎಂದೂ ವಿಭುವಲ್ಲ. ಸಾಂಖ್ಯರೂ ನೈಯಾಯಿಕರೂ ಜೀವನು ವಿಭುವೆನ್ನುವರು. ಸರ್ವವ್ಯಾಪಕನಾಗಿ ಎಲ್ಲ ಮೂರ್ತದ್ರವ್ಯಗಳೊಡನೆ ಸಂಪರ್ಕವನ್ನು ಹೊಂದಿರುವವನು ವಿಭುವೆನಿಸುವನು. ಈಶ್ವರನು ಇಂಥ ವಿಭುವಾಗಿದ್ದಾನೆ. ಅಣುತ್ವವನ್ನು ಶ್ರುತಿ ಸ್ಮೃತಿಗಳಿಗನುಸಾರವಾಗಿ ಈ ಸಿದ್ಧಾಂತ ಸ್ಥಾಪಿಸಿದೆ.

೩೫. ವೈಶೇಷಿಕರು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ ಎಂದು ಏಳು ಪದಾರ್ಥಗಳನ್ನು ನಿರೂಪಿಸುತ್ತಾರೆ. ಇವುಗಳನ್ನು ವಿಶಿಷ್ಟಾದ್ವೈತ ಪ್ರತ್ಯೇಕವಾದ ಪದಾರ್ಥಗಳೆಂದು ಒಪ್ಪುವುದಿಲ್ಲ.

ಈ ಗ್ರಂಥದ ನಾಲ್ಕನೆಯ ಅವತಾರದಲ್ಲಿ ಇವುಗಳ ಅಂತರ್ಭಾವವನ್ನು ತಿಳಿಸಿದೆ.

೩೬. ನೈಯಾಯಿಕರು ಉಪಮಾನವನ್ನೂ ಒಂದು ಪ್ರಮಾಣವೆಂದು ಒಪ್ಪುತ್ತಾರೆ. ಭಾಟ್ಟರು, ಅದ್ವೈತಿಗಳು ಮತ್ತು ಪ್ರಾಭಾಕರರೂ ಉಪಮಾನವನ್ನು ಬೇರೆ ಪ್ರಮಾಣವೆಂದು ಅಂಗೀಕರಿಸುತ್ತಾರೆ. ಮುಂದೆ ಎರಡನೆಯ ಅವತಾರದಲ್ಲಿ ಉಪಮಾನ ಅನುಮಾನದಲ್ಲಿ ಅಂತರ್ಗತವಾಗುವುದೆಂಬುದನ್ನು ತಿಳಿಸಿದೆ.

೩೭. 'ಎಲ್ಲಿ ಹೊಗೆ ಇದೆಯೋ ಅಲ್ಲಿ ಬೆಂಕಿ ಇದೆ' ಎಂಬುದು ಒಂದು ಅನುಮಾನ. ಇಲ್ಲಿ ಹೊಗೆ ವ್ಯಾಪ್ಯ. ಬೆಂಕಿ ವ್ಯಾಪಕ. ಹೊಗೆಗೂ ಬೆಂಕಿಗೂ ಇರುವ ಸಂಬಂಧ ವ್ಯಾಪ್ತಿ. ಈ ಸಂಬಂಧಜ್ಞಾನದಿಂದ ವ್ಯಾಪಕವಾದ ಬೆಂಕಿಯನ್ನು ಊಹಿಸುವುದು ಅನುಮಾನ. ವ್ಯಾಪಕ ವ್ಯಾಪ್ಯಕ್ಕಿಂತ ನಿಯಮೇನ ಅಧಿಕ ದೇಶ ವೃತ್ತಿಯನ್ನು ಹೊಂದಿರುತ್ತದೆ. ಹೊಗೆ ಇರುವ ಕಡೆ ಬೆಂಕಿ ಇರುತ್ತದೆ. ಹೊಗೆ ಇಲ್ಲದೆಡೆಯೂ ಬೆಂಕಿ ಇರುತ್ತದೆ. ಉದಾಹರಣೆಗೆ ಕಾಯಿಸಿದ ಕಬ್ಬಿಣ ಹೇಳಬಹುದು. ಆದರೆ ಬೆಂಕಿ ಇಲ್ಲದ ಕಡೆ ಹೊಗೆ ಇರಲಾರದು. (ಹೊಗೆಗಿಂತ ಬೆಂಕಿ ಹೀಗೆ ಹೆಚ್ಚು ವ್ಯಾಪಕವಾಗಿದೆ.) ಆದುದರಿಂದಲೇ ಹೊಗೆ ವ್ಯಾಪ್ಯವಾಗಿ ಬೆಂಕಿ ವ್ಯಾಪಕವಾದುದಾಗಿದೆ. ವ್ಯಾಪ್ಯವನ್ನು ತಿಳಿದಾಗ ವ್ಯಾಪಕವೂ ಗೊತ್ತಾಗುತ್ತದೆ. 'ವ್ಯಾಪಕಂ ಸಾಧ್ಯಂ; ವ್ಯಾಪ್ಯಂಲಿಂಗಂ'.

೩೮. ವ್ಯಾಪ್ತಿ ಎಂಬುವುದನ್ನು ನೈಯಾಯಿಕರು 'ಅನುಪಾಧಿಕಃ ಸಂಬಂಧಃ' ಎಂದು ಹೇಳುತ್ತಾರೆ. ವ್ಯಾಪ್ಯ ಮತ್ತು ವ್ಯಾಪಕಗಳಿಗೆ ಇರುವ ನಿರುಪಾಧಿಕವಾದ ಸಂಬಂಧ ವ್ಯಾಪ್ತಿ. ಹೊಗೆ ಇರುವಲ್ಲಿ ಬೆಂಕಿ ಇರುವುದು ಎಂಬಲ್ಲಿ ಹೊಗೆ ಮತ್ತು ಬೆಂಕಿಗಳ ಸಂಬಂಧ ಸಹಜವಾದುದು ; ಬೇರಾವ ಪರಿಸ್ಥಿತಿಯಿಂದಲೂ ಉಂಟಾದುದಲ್ಲ. ಆದರೆ ಬೆಂಕಿಯು ಹೊಗೆಯಿಂದ ವ್ಯಾಪ್ತವಾಗಿದೆ ಎಂಬ ಉದಾಹರಣೆ ನೋಡಿ. ಇದು ನಿರುಪಾಧಿಕವಾದುದಲ್ಲ. ಏಕೆಂದರೆ ಬೆಂಕಿಗೆ ಹಸಿಯ ಸೌದೆಯ ಸಂಪರ್ಕ ಆದರೆ ಮಾತ್ರ ಹೊಗೆ ಉಂಟಾಗುತ್ತದೆ. ಇಲ್ಲಿ 'ಆರ್ದ್ರೇಂಧನ ಸಂಯೋಗ'ವೆಂಬುದು ಉಪಾಧಿ. ಇಂಥ ಉಪಾಧಿಗೊಳಪಡದೆ ಇರುವ ವ್ಯಾಪ್ಯವ್ಯಾಪಕಸಂಬಂಧ ವ್ಯಾಪ್ತಿ.

೩೯. ವ್ಯಾಪ್ತಿಗ್ರಹಣ ಹೇಗೆ ಆಗುವುದೆಂಬ ಬಗೆಗೆ ಎರಡು ಅಭಿಪ್ರಾಯಗಳಿವೆ. ಅನೇಕ ಬಾರಿ ವ್ಯಾಪ್ಯವ್ಯಾಪಕಗಳಿಗಿರುವ ಸಾಹಚರ್ಯವನ್ನು ಗಮನಿಸಿ ವ್ಯಾಪ್ತಿಯನ್ನು ಗ್ರಹಿಸಲಾಗುವುದು ಎಂಬುವುದು ಒಂದು ಅಭಿಪ್ರಾಯ. ಸಾಹಚರ್ಯವನ್ನು ಸಿರ್ಧಾರಕವಾಗಿ ತಿಳಿಸುವ ಒಂದೇ ಒಂದು ನಿದರ್ಶನ ದಿಂದಲೂ ವ್ಯಾಪ್ತಿಯನ್ನು ಗ್ರಹಿಸಬಹುದೆಂಬುದು ಮತ್ತೊಂದು ಅಭಿಪ್ರಾಯ. ನಿಯತವಾದ ವ್ಯಾಪ್ತಿಯನ್ನು ಒಂದೇ ಒಂದು ಅನುಭವದ ಆಧಾರದ ಮೇಲೆ ರೂಪಿಸುವುದು ಕಠಿಣವಾಗುವುದು. ಅದು ಬಾಧಿತವಾದುದಲ್ಲವೆಂಬುದಕ್ಕೆ ನಿದರ್ಶನ ದೊರಕದು ಆದಕ್ಕಾಗಿ ದೋಷನಿರ್ಮೂಲನ ಮಾಡಲು ಅನೇಕಾನೇಕ ಬಾರಿ ಸಾಹಚರ್ಯವನ್ನು ಗಮನಿಸಿ ವ್ಯಾಪ್ತಿಯನ್ನು ಗ್ರಹಿಸಬೇಕೆಂದು ತಿಳಿಸಿದೆ

೪೦. 'ಬೆಟ್ಟದಲ್ಲಿ ಹೊಗೆಯಿದೆ. ಏಕೆಂದರೆ ಅದು ಬೆಂಕಿಯನ್ನು ಹೊಂದಿದೆ.' ಎಂಬ ಅನುಮಾನದಲ್ಲಿ ಬೆಂಕಿಗೆ ಆಗಿರುವ ಹಸಿಯ ಸೌದೆಯ ಸಂಪರ್ಕ ಉಪಾಧಿ. ಈ ಅನುಮಾನದಲ್ಲಿ ಹೊಗೆ ಸಾಧ್ಯ. ಈ ಹೊಗೆಯನ್ನು ಹಸಿ ಸೌದೆಯ ಸಂಪರ್ಕವೆಂಬುದು ವ್ಯಾಪಿಸಿದೆ. ಹೊಗೆ ಇರುವೆಡೆಯಲ್ಲೆಲ್ಲಾ ಹಸಿಯ ಸೌದೆಯ ಸಂಯೋಗವೂ ಇದ್ದೇ ತೀರುತ್ತದೆ. ಆದರೆ ಇಲ್ಲಿ ಸಾಧನವಾದ ಬೆಂಕಿಯನ್ನು ಅದು ವ್ಯಾಪಿಸಿಲ್ಲ. ಬೆಂಕಿ ಇರುವೆಡೆಯಲ್ಲೆಲ್ಲಾ ಹಸಿಯ ಸೌದೆಯ ಸಂಯೋಗವಿರುವುದಿಲ್ಲ. ಉದಾಹರಣೆಗೆ ಕಾಯಿಸಿದ ಕಬ್ಬಿಣದ ಗುಂಡನ್ನು ಹೇಳಬಹುದು ಆದುದರಿಂದಲೇ ಉಪಾಧಿಯು ಸಾಧ್ಯವನ್ನು ವ್ಯಾಪಿಸಿದೆ. ಸಾಧನವನ್ನು ವ್ಯಾಪಿಸಿಲ್ಲ ಎಂದು ಇಲ್ಲಿ ತಿಳಿಸಿದೆ.

೪೧. ಪ್ರತಿಯೊಂದು ಅನುಮಾನದಲ್ಲಿಯೂ ಎರಡು ಅಂಗಗಳಿವೆ. ವ್ಯಾಪ್ತಿ ಮತ್ತು ಪಕ್ಷ ಧರ್ಮತಾ ಎಂಬುವು ಇವು. ವ್ಯಾಪ್ತಿಯು 'ಸಪಕ್ಷಸತ್ವ'ವನ್ನೂ 'ವಿಪಕ್ಷ ವೃತ್ತಿರಹಿತತ್ವ'ವನ್ನೂ ಹೊಂದಿರುತ್ತದೆ. 'ಪಕ್ಷವ್ಯಾಪಕತ್ವ'ವನ್ನೂ 'ಅಬಾಧಿತವಿಷಯತ್ವ'ವನ್ನೂ ಪಕ್ಷಧರ್ಮತಾ ಹೊಂದಿರುತ್ತದೆ. 'ಅಸತ್ಪ್ರತಿಪಕ್ಷತ್ವ'ವನ್ನು ಇವೆರಡೂ ಸಮಾನವಾಗಿ ಹೊಂದಿರುತ್ತವೆ.

೪೨. ನಾವು ಸಾಧಿಸಿ ತಿಳಿಯಬೇಕೆಂದಿರುವ ಧರ್ಮವನ್ನುಳ್ಳದು

ಪಕ್ಷ. 'ಪರ್ವತವು ಬೆಂಕಿ ಹೊಂದಿದೆ ಹೊಗೆಯನ್ನು ಹೊಂದಿರುವುದರಿಂದ' ಎಂಬಲ್ಲಿ ಪರ್ವತವು ಪಕ್ಷ. ಇದಕ್ಕೆ ಸಜಾತೀಯವಾದುದು 'ಸಪಕ್ಷ'. ಅಡಿಗೆ ಮನೆ ಸಪಕ್ಷ. ಸಪಕ್ಷದಲ್ಲಿ ಬೆಂಕಿ ಮತ್ತು ಹೊಗೆಗಳ ವ್ಯಾಪ್ತಿ ಇರುವುದು 'ಸಪಕ್ಷ ಸತ್ವ'. ಸಾಧ್ಯವಾದ ಬೆಂಕಿ ಮತ್ತು ತಜ್ಜಾತೀಯವಾದುದರಿಂದ ಬಿಡಲ್ಪಟ್ಟುದು ವಿಪಕ್ಷ. ಮಹಾಸರೋವರ ಇದಕ್ಕೆ ನಿದರ್ಶನ. ಅಲ್ಲಿ ಈ ಅಗ್ನಿಧೂಮಗಳ ವ್ಯಾಪ್ತಿ ಇಲ್ಲದಿರುವುದು ವಿಪಕ್ಷವೃತ್ತಿರಹಿತತ್ವ. ವಿಪಕ್ಷವೃತ್ತಿರಹಿತತ್ವ ಎರಡು ಬಗೆ. ವಿಪಕ್ಷವೇ ಇಲ್ಲದಿರುವುದು ಒಂದು ಬಗೆ. ವಿಪಕ್ಷವಿದು ಸಂಸರ್ಗವಿಲ್ಲದಿರುವುದ್ದು ಮತ್ತೊಂದು ಬಗೆ. ಪಕ್ಷದಲ್ಲಿ ಇರುವಿಕೆ ಪಕ್ಷವ್ಯಾಪಕತ್ವ. ಪ್ರಕೃತ ಬೆಟ್ಟದಲ್ಲಿ ಬೆಂಕಿ ಹೊಗೆಗಳ ವ್ಯಾಪ್ತಿ ಇರಬೇಕು. ಪ್ರಬಲವಾದ ಪ್ರಮಾಣದಿಂದ ಪಕ್ಷದಲ್ಲಿ ಸಾಧ್ಯವಿಲ್ಲವೆಂಬ ನಿಶ್ಚಯ ಬಾಧಿತ ವಿಷಯತ್ವ. ವ್ಯಾಪ್ತಿಗೆ ಇದು ಇರಬಾರದು. 'ಸರೋವರ ಬೆಂಕಿಯನ್ನುಳ್ಳುದು' ಎಂಬುದು ಬಾಧಿತವಿಷಯಕ್ಕೆ ಉದಾಹರಣೆ. ಗೋಚರವಾಗಿರುವ ಪ್ರಮಾಣಕ್ಕೆ ಸಮಸಮವಾದ ವಿರೋಧವಿಲ್ಲದಿರುವಿಕೆ ಅಸತ್ಪ್ರತಿಪಕ್ಷ ಹೊಗೆಯೇ ಅನುಮಾನವನ್ನು ಮಾಡುವುದು ಇದಕ್ಕೆ ನಿದರ್ಶನ.

೪೩. ಅನ್ವಯ ವ್ಯತಿರೇಕಿ ವ್ಯಾಪ್ತಿಗೆ ಅನ್ವಯವ್ಯಾಪ್ತಿಯೂ, ವ್ಯತಿರೇಕ ವ್ಯಾಪ್ತಿಯೂ ಇರುವುದು.

೪೪. ಕೇವಲಾನ್ವಯಿ ವ್ಯಾಪ್ತಿಗೆ ಅನ್ವಯವ್ಯಾಪ್ತಿ ಮಾತ್ರ ಇರುವುದು 'ಬ್ರಹ್ಮವು ವಸ್ತುವಾಗಿರುವ ಕಾರಣ ಶಬ್ದವಾಚ್ಯವಾದುದು ಘಟದೋಪಾದಿಯಲ್ಲಿ' ಎಂಬ ಅನುಮಾನಕ್ಕೆ ವ್ಯತಿರೇಕನಿದರ್ಶನವೇ ಇಲ್ಲ. ಎಲ್ಲ ವಸ್ತುಗಳೂ ಶಬ್ದವಾಚ್ಯವೇ ಆದ ಕಾರಣ ವಸ್ತುತ್ವಕ್ಕೂ ಶಬ್ದವಾಚ್ಯತ್ವಕ್ಕೂ ವ್ಯತಿರೇಕ ವ್ಯಾಪ್ತಿಯನ್ನು ಹೇಳುವುದೇ ಸಾಧ್ಯವಿಲ್ಲ.

೪೫. ಈ ಸಿದ್ಧಾಂತದಲ್ಲಿ ಕೇವಲ ವ್ಯತಿರೇಕಿಯನ್ನು ಅಂಗೀಕರಿಸಿಲ್ಲ. ಈ ಬಗೆಯ ವ್ಯಾಪ್ತಿಯನ್ನು ಗ್ರಹಿಸಲಾಗುವುದೇ ಇಲ್ಲ. ನೈಯಾಯಿಕರು ಕೇವಲಾನ್ವಯಿ, ಕೇವಲವ್ಯತಿರೇಕಿ ಮತ್ತು ಅನ್ವಯವ್ಯತಿರೇಕಿ ಎಂಬುವ ಮೂರು ಬಗೆಯ ವ್ಯಾಪ್ತಿಯನ್ನೂ ಅಂಗೀಕರಿಸುತ್ತಾರೆ. ಅದ್ವೈತಿಗಳೂ ಮೀಮಾಂಸಕರೂ ಕೇವಲ ವ್ಯತಿರೇಕಿಯನ್ನು ಅರ್ಥಾಪತ್ತಿಯಲ್ಲಿ ಸೇರಿಸುತ್ತಾರೆ.

೪೬. ಬೆಂಕಿಗೂ ಹೊಗೆಗೂ ಇರುವ ವ್ಯಾಪ್ತಿಯನ್ನು ಬಹುಶಃ ಗಮನಿಸಿದವನು 'ಎಲ್ಲಿ ಹೊಗೆಯೋ ಅಲ್ಲಿ ಬೆಂಕಿ' ಎಂದು ಅನುಮಾನ ಮಾಡುತ್ತಾನೆ. ಇದು ಅವನಿಗೇ ಅನುಮಿತಿಯನ್ನುಂಟುಮಾಡುವ ಕಾರಣ 'ಸ್ವಾರ್ಥಾನುಮಾನ' ಎನ್ನಲಾಗಿದೆ.

೪೭. ಹೀಗೆ ಹೊಗೆಯಿಂದ ಬೆಂಕಿಯನ್ನು ಅನುಮಾನ ಮಾಡಿದವನು ಪಂಚಾವಯವವಾಕ್ಯವನ್ನು ಬಳಸಿ ಇದೇ ಅನುಮಿತಿಯನ್ನು ಮತ್ತೊಬ್ಬನು ಪಡೆಯುವಂತೆ ಮಾಡುತ್ತಾನೆ. ಇದನ್ನು ಪರಾರ್ಥಾನುಮಾನ ಎನ್ನುವರು. ನೈಯಾಯಿಕರು ಈ ಎರಡು ಬಗೆಯ ಅನುಮಾನಗಳನ್ನು ಒಪ್ಪುತ್ತಾರೆ. ಆದರೆ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಪರಾರ್ಥಾನುಮಾನವನ್ನು ನಿರಾಕರಿಸಲಾಗಿದೆ. ಎಲ್ಲ ಅನುಮಾನಗಳೂ ಅವರವರಿಗೇ ಅನುಮಿತಿಯನ್ನುಂಟುಮಾಡುವ ಕಾರಣ ಅವೆಲ್ಲಾ ಸ್ವಾರ್ಥಾನುಮಾನಗಳೇ ಎಂದು ಸಮರ್ಥಿಸಲಾಗಿದೆ.

೪೮. ಪಂಚಾವಯವ ವಾಕ್ಯಗಳಲ್ಲಿ ಪ್ರತಿಜ್ಞೆ, ಹೇತು ಮತ್ತು ಉದಾಹರಣೆಗಳಾಗಲೀ, ಉದಾಹರಣೆ, ಉಪನಯ ಮತ್ತು ನಿಗಮನಗಳಾಗಲೀ ಸಾಕೆಂದು ಮೀಮಾಂಸಕರೂ ಅದ್ವೈತಿಗಳೂ ಅಭಿಪ್ರಾಯಪಡುತ್ತಾರೆ.

೪೯. ಬೌದ್ಧರಲ್ಲಿ ವೈಭಾಷಿಕ, ಸೌತ್ರಾಂತಿಕ, ಯೋಗಾಚಾರ ಮತ್ತು ಮಾಧ್ಯಮಿಕ ಎಂದು ನಾಲ್ಕು ಪಂಥಗಳಿವೆ. ಇವರು ಉದಾಹರಣ ಮತ್ತು ಉಪನಯ ಎಂಬ ಎರಡೇ ಅವಯವಗಳು ಅನುಮಾನಕ್ಕೆ ಸಾಕೆನ್ನುವರು. ಬೆಂಕಿ ಮತ್ತು ಹೊಗೆಗಳಿಗಿರುವ ವ್ಯಾಪ್ತಿಯ ಜ್ಞಾನ ಹಾಗೂ ಪಕ್ಷದಲ್ಲಿ ಹೇತುವಿರುವುದನ್ನು ಕಾಣುವುದೂ ಅನುಮಾನ ಮಾಡಲು ಸಾಕಾಗುವುವು. ಉದಾಹರಣದಿಂದ ವ್ಯಾಪ್ತಿ ಜ್ಞಾನಉಂಟಾಗುತ್ತದೆ. ಉಪನಯದಿಂದ ಪಕ್ಷದಲ್ಲಿ ಹೇತು ಇರುವುದು ಗೊತ್ತಾಗುತ್ತದೆ. ಆದುದರಿಂದ ಅನುಮಾನಕ್ಕೆ ಇವೆರಡೇ ಸಾಕೆಂದು ಇವರ ನಿಶ್ಚಯ.

೫೦. ಹೇತ್ವಾಭಾಸಗಳು ಐದು ಬಗೆ. ಸರಿಯಾದ ಕಾರಣವೆಂಬುದು ನಿಶ್ಚಯವಾಗಿಲ್ಲದಿರುವುದು ಅಸಿದ್ಧ. ಹೇತು ಪಕ್ಷದಲ್ಲಿಲ್ಲದಿರುವಿಕೆ ಇದು.

ಪಕ್ಷದಲ್ಲಿಯೂ ವಿಪಕ್ಷದಲ್ಲಿಯೂ ಇರುವ ಹೇತು ವಿರುದ್ಧ. ಪಕ್ಷದಲ್ಲಿಯೂ ಸಪಕ್ಷದಲ್ಲಿಯೂ ವಿಪಕ್ಷದಲ್ಲಿಯೂ ಹೇತು ಇರುವುದು ಅನೈಕಾಂತಿಕ. ಇದಕ್ಕೆ 'ಸವ್ಯಭಿಚಾರ' ಎಂದು ಹೆಸರು. ಸಾಧ್ಯಕ್ಕೆ ವಿಪರೀತವಾದುದನ್ನು ಸಾಧಿಸುವ ಬೇರೆ ಕಾರಣವನ್ನು ಹೊಂದಿರುವುದು ಪ್ರಕರಣ ಸಮ. ಇದಕ್ಕೇ 'ಸತ್ಪ್ರತಿ ಪಕ್ಷ'ವೆಂದು ಹೆಸರು. ಕಾಲಾತ್ಯಯಾಪದಿಷ್ಟಕ್ಕೆ ಬಾಧಿತವೆಂದೂ ಹೆಸರು. ಈ ಹೇತು ಪ್ರತ್ಯಕ್ಷ ಪ್ರಮಾಣದಿಂದ ಬಾಧಿತವಾಗುತ್ತದೆ

೫೧. ಬೆಂಕಿ ಮತ್ತು ಹೊಗೆಗಳ ವ್ಯಾಪ್ತಿಯನ್ನು ಬೇರೆ ಬೇರೆ ಕಡೆ ನೋಡಿದವನು 'ಎಲ್ಲಿ ಹೊಗೆಯೋ ಅಲ್ಲಿ ಬೆಂಕಿ' ಎಂದು ಅನುಮಾನ ಮಾಡುತ್ತಾನೆ. ಆದರೆ 'ಯಾವುದು ಇದೆಯೋ ಅದು ಕ್ಷಣಿಕ' ಎಂಬುವ ಉದಾಹರಣೆಯಲ್ಲಿ ವ್ಯಾಪ್ತಿಗ್ರಾಹಕವಾದ ಪ್ರಮಾಣವೇ ಇರುವುದಿಲ್ಲ. ಆದುದ ರಿಂದ ಇದು ಅಸಿದ್ಧ. ಮತ್ತೊಂದು ಉದಾಹರಣೆಯಾದ 'ಹಿಂಸೆಯಾದ ಕಾರಣ ಅಗ್ನಿಷೋಮೀಯವಾದ ಹಿಂಸೆ ಅಧರ್ಮಸಾಧಕ' ಎಂಬ ಅನುಮಾನ ದಲ್ಲಿ ಅಧರ್ಮಕಾರ್ಯದ ನಿಷೇಧ ಉಪಾಧಿ. ಹೇತುವಾದ 'ಹಿಂಸೆಯು ಕಾರಣ' ಎಂಬುವುದು ಉಪಾಧಿಯಿಂದ ಕೂಡಿದೆ. ಆದುದರಿಂದ ಇದು ಅಸಿದ್ಧ.

೫೨. ಉತ್ಪನ್ನವಾಗುವುದು ಎಂಬ ಕಾರಣ ನಿತ್ಯತ್ವವನ್ನು ಸ್ಥಾಪಿಸ ಲಾರದು. ಅದಕ್ಕೆ ಪ್ರತಿಯಾಗಿ ಅನಿತ್ಯತ್ವವನ್ನೇ ಸ್ಥಾಪಿಸುತ್ತದೆ. ಆದುದರಿಂದ ಸಾಧ್ಯದ ಅಭಾವ ಇಲ್ಲಿದೆ.

೫೩. ನೈಯಾಯಿಕರು 'ಅನುಪಸಂಹಾರಿ' ಎಂಬ ಮೂರನೆಯ ಬಗೆಯ ಸವ್ಯಭಿಚಾರವನ್ನು ಅಂಗೀಕರಿಸುತ್ತಾರೆ.

೫೪. ವೇದ್ಯತ್ವವು ನಿತ್ಯಪದಾರ್ಥಗಳಿಗೂ ಅನಿತ್ಯಪದಾರ್ಥಗಳಿಗೂ ಸಮಾನವಾದುದು. ತಿಳಿಯಲ್ಪಡತಕ್ಕ ಪದಾರ್ಥಗಳೆಲ್ಲಾ ನಿತ್ಯವಲ್ಲದ ಕಾರಣ ಶಬ್ದದ ನಿತ್ಯತ್ವವನ್ನು ತಿಳಿಯಲ್ಪಡುವುದೆಂಬ ಕಾರಣದಿಂದ ಸಾಧಿಸುವುದಕ್ಕಾ ಗುವುದಿಲ್ಲ.

೫೫. ಪೃಥಿವಿಯು ಗಂಧವನ್ನು ಹೊಂದಿದೆ. ಇದು ಮತ್ತಾವ ನಿತ್ಯ ಪದಾರ್ಥದಲ್ಲಾಗಲೀ ಅನಿತ್ಯ ಪದಾರ್ಥದಲ್ಲಾಗಲೀ ಇಲ್ಲ. ಪೃಥಿವಿತ್ವಕ್ಕೂ

ನಿತ್ಯತ್ವಕ್ಕೂ ಅಥವಾ ಪೃಥಿವೀತ್ವಕ್ಕೂ ಅನಿತ್ಯತ್ವಕ್ಕೂ, ವ್ಯಾಪ್ತಿ ನಮಗೆ ಗೊತ್ತಿಲ್ಲ. ಆದುದರಿಂದ ಇಲ್ಲಿ ಕೊಟ್ಟಿರುವ 'ಗಂಧವತ್ತ್ವಾತ್' ಎಂಬ ಹೇತು ಸಾಧ್ಯವನ್ನು ಸ್ಥಾಪಿಸಲಾರದು

೫೬. ಪರಸ್ಪರ ವಿರುದ್ಧವಾದ ಎರಡು ಹೇತುಗಳು ಒಂದನ್ನೊಂದು ಬಾಧಿಸಿದಾಗ ಯಾವ ನಿಶ್ಚಯವನ್ನೂ ಮಾಡಲು ನಮಗೆ ಸಾಧ್ಯವಾಗುವುದಿಲ್ಲ.

೫೭. 'ಹಸುವಿನಂತೆ ಗವಯವೂ' ಎಂಬ ವಾಕ್ಯ ಅತಿದೇಶವಾಕ್ಯ. ಹಸುವಿನ ಲಕ್ಷಣವನ್ನು ಗವಯಕ್ಕೂ ಇಲ್ಲಿ ವಿಸ್ತರಿಸಿ ಅನ್ವಯಿಸಿದೆ

೫೮. ನೈಯಾಯಿಕರು ಉಪಮಾನವನ್ನು ನಾಲ್ಕನೆಯ ಪ್ರಮಾಣವೆಂದು ಒಪ್ಪುತ್ತಾರೆ. ಆದರೆ ಈ ಸಿದ್ಧಾಂತದಲ್ಲಿ ಉಪಮಾನ ಪ್ರತ್ಯೇಕವಾದ ಪ್ರಮಾಣವಲ್ಲ. ಉಪಮಾನದಲ್ಲಿ ಮೂರು ಅಂಶಗಳನ್ನು ಪೃಥಕ್ಕರಿಸಿ ಅವುಗಳನ್ನು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದಗಳಲ್ಲಿ ಅಂತರ್ಭಾವಗೊಳಿಸಿದೆ. 'ಗವಯವು ಗೋವಿನಂತಿದೆ' ಎಂಬ ವಾಕ್ಯದಿಂದ ಗವಯಕ್ಕೂ ಗೋವಿಗೂ ಸಾದೃಶ್ಯವನ್ನರಿಯುವುದು ಶಬ್ದಪ್ರಮಾಣದಲ್ಲಿ ಸೇರುತ್ತದೆ. ಗವಯವನ್ನು ಕಣ್ಣಿಂದ ಕಂಡಾಗ ಗೋಸಾದೃಶ್ಯವನ್ನು ಅತಿದೇಶವಾಕ್ಯದ ಕಾರಣ ಸ್ಮರಿಸುತ್ತಾನೆ. ಈ ನೆನಪು ಪೂರ್ವಾನುಭವದಿಂದ ಆಗುವುದು. ಈ ಅಂಶ ಪ್ರತ್ಯಕ್ಷದಲ್ಲಿ ಸೇರುತ್ತದೆ. ಗೋಸಾದೃಶ್ಯದಿಂದ ಕೂಡಿದ ವ್ಯಕ್ತಿಯ ಬಗೆಗೆ ಗವಯ ಎಂದು ಜ್ಞಾನ ಉಂಟಾಗುವುದು ವ್ಯಾಪ್ತಿಜ್ಞಾನದ ಆಧಾರದ ಮೇಲೆ. ಈ ಗವಯ ಹಸುವನ್ನು ಹೋಲುತ್ತದೆ. ಏಕೆಂದರೆ ಗವಯ ಹಸುವಿನ ಸಾದೃಶ್ಯ ಹೊಂದಿದೆ ಎಂಬ ರೀತಿಯ ವ್ಯಾಪ್ತಿಜ್ಞಾನ ಉದಿಸುವುದು. ಇದು ಅನುಮಾನದಲ್ಲಿ ಸೇರಿಹೋಗುತ್ತದೆ

೫೯. ಅರ್ಥಾಪತ್ತಿಯನ್ನು ಪ್ರತ್ಯೇಕವಾದ ಪ್ರಮಾಣವೆಂದು ಈ ಸಿದ್ಧಾಂತ ಅಂಗೀಕರಿಸುವುದಿಲ್ಲ. ನೈಯಾಯಿಕರೂ, ಸಾಂಖ್ಯರೂ ಇದನ್ನು ಪ್ರತ್ಯೇಕ ಪ್ರಮಾಣವೆಂದು ಒಪ್ಪುವುದಿಲ್ಲ. ಅನುಮಾನದಲ್ಲಿ ಇದನ್ನು ಅಂತರ್ಭಾವಮಾಡಲಾಗಿದೆ.

'ದೇವದತ್ತನು ರಾತ್ರಿ ಊಟ ಮಾಡುತ್ತಾನೆ, ಏಕೆಂದರೆ ಹಗಲು ಊಟ ಮಾಡದೆ ಪುಷ್ಟನಾಗಿದ್ದಾನೆ.' ಊಟ ಮಾಡುವುದಕ್ಕೂ ಪುಷ್ಟಿಯಾಗಿರುವುದಕ್ಕೂ ವ್ಯಾಪ್ತಿ ಇರುವುದರಿಂದ ಅವನು ರಾತ್ರಿ ಊಟಮಾಡುವನೆಂದು ಅನುಮಾನ ಮಾಡಬಹುದು.

೬೦. ಛಲ ಮೂರು ಬಗೆಯಾಗಿದೆ. ವಾಕ್‌ಛಲ, ಸಾಮಾನ್ಯ ಛಲ ಮತ್ತು ಉಪಚಾರಛಲ ಎಂಬುವು ಇವು. ಗೌತಮ ನ್ಯಾಯಸೂತ್ರ I–2–52 ನೋಡಿ.

೬೧. 'ಜಾತಿ' ಎಂಬುದು ಇಪ್ಪತ್ತನಾಲ್ಕು ಬಗೆಯಾಗಿದೆ. ಗೌತಮ ನ್ಯಾಯಸೂತ್ರ V–1 ನೋಡಿ.

೬೨. ನಿಗ್ರಹ ಸ್ಥಾನಗಳು ಅನೇಕ ಬಗೆಯಾಗಿವೆ.

೬೩. ಶಬ್ದಪ್ರಮಾಣವು ವಿಲಕ್ಷಣವಾದುದು. ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಪಡೆಯಲು ಶಕ್ಯವಲ್ಲದ ಜ್ಞಾನ ಶಬ್ದದಿಂದುಂಟಾಗುತ್ತದೆ. ಬ್ರಹ್ಮವಸ್ತುವನ್ನರಿಯಲು ಶಬ್ದಪ್ರಮಾಣವೊಂದೇ ಮಾರ್ಗವಾಗಿದೆ.

೬೪. ಇದು ಪೂರ್ವಮೀಮಾಂಸಕರ ಅಭಿಪ್ರಾಯ. ಇದಕ್ಕನುಸಾರವಾಗಿ ಶಬ್ದ ಸಿದ್ಧವಾದ ವಸ್ತುಗಳನ್ನು ತಿಳಿಸಲಾರದು. ಕ್ರಿಯೆಗನ್ವಯಿಸಿದಂತೆಯೇ ಶಬ್ದಗಳು ಅರ್ಥಯುಕ್ತವಾದವೆಂಬುದು ಇವರ ಮತ. ಬ್ರಹ್ಮವಸ್ತು ಸಿದ್ಧವಾದುದು. ಇದನ್ನು ವೇದ ತಿಳಿಸಲಾರದು. ಇವರ ಮತದಲ್ಲಿ ಕರ್ಮಕ್ಕೇ ಪ್ರಾಧಾನ್ಯವಿದೆ.

೬೫. ಮೀಮಾಂಸಕರ ಈ ವಾದವನ್ನು ವೇದಾಂತಿಗಳು ನಿರಾಕರಿಸುತ್ತಾರೆ. ಶಬ್ದವು ಸಿದ್ಧವಸ್ತುವನ್ನು ಬೋಧಿಸಬಲ್ಲದೆಂಬುದು ಇವರ ಸಿದ್ಧಾಂತ. ಶ್ರೀಭಾಷ್ಯದಲ್ಲಿ ರಾಮಾನುಜರು ಈ ಸಿದ್ಧಾಂತವನ್ನು ಸಮರ್ಥಿಸಿ 'ಪರಿನಿಷ್ಪನ್ನವಾದ ಪರಬ್ರಹ್ಮವಸ್ತುವನ್ನು ವೇದಾಂತಗಳು ಬೋಧಿಸಿ ಅಪರಿಮಿತವಾದ ಫಲಪ್ರಾಪ್ತಿಗಾಗಿ ಆ ಪರವಸ್ತುವಿನ ಉಪಾಸನೆಯನ್ನು ವಿಧಿಸುವ ಕಾರಣ ಬ್ರಹ್ಮವಿಚಾರವನ್ನು ಮಾಡತಕ್ಕದ್ದು' ಎಂದು ನಿರೂಪಿಸಿದ್ದಾರೆ.

ಶಬ್ದ ಗಳಿಗೆ ಕ್ರಿಯೆಗನ್ವಯಿಸಿದಂತೆ ಮಾತ್ರ ಅರ್ಥವುಂಟು ಎಂಬ ವಾದದ ಅಸಾಧುತ್ವವನ್ನು ತೋರಿಸಲು ಇಲ್ಲಿ 'ನಿನ್ನ ತಂದೆ ಸುಖವಾಗಿದ್ದಾನೆ' ಮೊದಲಾದ ಉದಾಹರಣೆಗಳನ್ನು ಕೊಟ್ಟಿದೆ. 'ಇದು ಹಗ್ಗ ಹಾವಲ್ಲ' ಎಂಬುವುದೂ 'ನಿನ್ನ ತಂದೆ ಸುಖವಾಗಿದ್ದಾನೆ' ಎಂಬುವೂ ನಿರ್ದಿಷ್ಟವಾದ ಪ್ರಯೋಜನವನ್ನು ಹೊಂದಿವೆ ಆಯಾ ಅರ್ಥಗಳನ್ನು ಬೋಧಿಸುತ್ತವೆ. ಇವುಗಳಿಗೆ ಅರ್ಥವಿಲ್ಲ ಎಂದು ಹೇಳುವುದು ಅಯುಕ್ತ.

೬೬. ಅಭಿಚಾರಕ್ರಿಯೆ ಎಂಬುದು ಮತ್ತೊಬ್ಬರಿಗೆ ಕೇಡುಕನ್ನುಂಟು ಮಾಡುವುದಕ್ಕಾಗಿ ಕೈಕೊಳ್ಳುವ ಕೆಲಸ. ಅಥರ್ವವೇದದಲ್ಲಿ ಈ ಬಗೆಯ ವಿವರಣೆ ಇದೆ. ಈ ಮಂತ್ರಗಳ ಪ್ರಯೋಗದಿಂದ ಐಹಿಕವಾದ ಕೆಲಸಗಳನ್ನು ಸಾಧಿಸಬಹುದೆಂದು ಮನಗಂಡ ನಾಸ್ತಿಕನಿಗೂ ವೇದದ ಇತರ ಆಧ್ಯಾತ್ಮಿಕ ಭಾಗಗಳಲ್ಲಿ ನಂಬಿಕೆ ಉಂಟಾಗುತ್ತದೆ.

೬೭. ವೃತ್ತಿಕಾರರಾದ ಬೋಧಾಯನರ ಮತದಂತೆ ಪೂರ್ವ ಮೀಮಾಂಸಾ ಶಾಸ್ತ್ರವೂ ಉತ್ತರ ಮೀಮಾಂಸಾ ಶಾಸ್ತ್ರವೂ ಕೂಡಿ ಒಂದೇಶಾಸ್ತ್ರವಾಗಿದೆ. ಷಟ್ಕಭೇದ, ಅಧ್ಯಾಯಭೇದ ಇದ್ದಹಾಗೆ ಇವೂ ಸಹ. ಪೂರ್ವೋತ್ತರ ಮೀಮಾಂಸಾ ಶಾಸ್ತ್ರಗಳು ಕೂಡಿ ಒಂದೇ ಶಾಸ್ತ್ರವೆನ್ನುವುದು ವಿಶಿಷ್ಟಾದ್ವೈತದ ಸಿದ್ಧಾಂತ. ಇದರಿಂದ ಕರ್ಮಕಾಂಡಕ್ಕೂ ಜ್ಞಾನಕಾಂಡಕ್ಕೂ ತಕ್ಕ ಸ್ಥಾನವನ್ನು ಈ ಸಿದ್ಧಾಂತ ಕೊಡುತ್ತದೆ.

೬೮. 'ಮನನಾತ್ ಮಂತ್ರಃ', 'ಮಂತಾರಂ ತ್ರಾಯತೇ ಇತಿ ಮಂತ್ರಃ' ಎಂಬುದಾಗಿ ಮಂತ್ರವನ್ನು ವಿವರಿಸಿದ್ದಾರೆ. ಅನುಷ್ಠೇಯವಾದ ಅರ್ಥಗಳನ್ನು ಪ್ರಕಾಶಪಡಿಸುವುದು ಮಂತ್ರವೆಂದು ಇಲ್ಲಿ ಹೇಳಿದೆ. 'ಪ್ರಯೋಗ ಸಮವೇತಾರ್ಥಸ್ಮಾರಕಾ ಮಂತ್ರಾಃ' ಎಂದು ಲೌಗಾಕ್ಷಿ ಭಾಸ್ಕರನು ನಿರೂಪಿಸುತ್ತಾನೆ.

೬೯ ವೇದದಲ್ಲಿ ವಿಧಿನಿಷೇಧಗಳ ಪ್ರಶಂಸೆ ಅಥವಾ ನಿಂದೆಯನ್ನು ಮಾಡುವ ಭಾಗಗಳು ಅರ್ಥವಾದವೆನಿಸುವುವು. ಇವೂ ವಿಧಿವಾಕ್ಯಗಳಿಗೇ

ಸೇರಿದವುಗಳಾದಕಾರಣ ಪ್ರಮಾಣಗಳೆನಿಸಿವೆ. 'ವಿಧ್ಯಧೀನ ಪ್ರವೃತ್ತ್ಯುತ್ತಂಭಕ ವಾಕ್ಯವಿಶೇಷೋ ಅರ್ಥವಾದಃ'. 'ಹಿತಾನುಶಾಸನರೂಪವಾದ ವಾಕ್ಯ ವಿಧಿ.'

೭೦. ಮತ್ತೆ ಯಾವುದರಿಂದಲೂ ನಮಗೆ ತಿಳಿಯದಿರುವ ವಿಚಾರವನ್ನು ನೆಲೆಗೊಳಿಸುವ ವಿಧಿ ಅಪೂರ್ವವಿಧಿ. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬಲ್ಲಿ ಸ್ವರ್ಗಪ್ರಾಪ್ತಿಯ ವಿಚಾರ ಈ ವಿಧಿಯನ್ನು ಬಿಟ್ಟರೆ ಮತ್ತಾವುದರಿಂದಲೂ ಗೊತ್ತಾಗುವುದಿಲ್ಲ. ಯಾಗ ಮಾಡಿದಾಗ 'ಅಪೂರ್ವ' ವೆಂಬುದು ಉಂಟಾಗಿ ಸ್ವರ್ಗವನ್ನು ದೊರಕಿಸಿಕೊಟ್ಟು ನಾಶವಾಗುವುದು. ಬೇರೆ ಯಾವುದರಿಂದ ಶಕ್ಯವಿಲ್ಲದ ಅಪೂರ್ವವನ್ನು ಅಕ್ಕಿಯಕಾಳಿನಲ್ಲಿ ಪ್ರೋಕ್ಷಣೆ ಉಂಟುಮಾಡುತ್ತದೆ.

೭೧. ವಿಶಿಷ್ಟವಿಧಿಯೂ ಅಪೂರ್ವವಿಧಿಯ ಮತ್ತೊಂದು ವಿಧ. 'ಮನೋಮಯಃ ಪ್ರಾಣಶರೀರೋ ಭಾರೂಪಃ' ಎಂದು ಛಾಂದೋಗ್ಯ ಬ್ರಹ್ಮವನ್ನು ವರ್ಣಿಸುತ್ತದೆ. ಇದರ ಅರ್ಥ ಸಾಧನಸಪ್ತಕಗಳೊಡನೆ ಧ್ಯಾನ ಮಾಡುವುದರಿಂದ ಶುದ್ಧವಾದ ಮನಸ್ಸಿನಿಂದ ಬ್ರಹ್ಮವಸ್ತುವನ್ನು ಕಾಣಬಹುದೆಂಬುದೇ ಆಗಿದೆ. ಇದಕ್ಕೆ ವಿಶಿಷ್ಟವಿಧಿ ಎಂದು ಹೆಸರು.

೭೨. ಏಕಕಾಲದಲ್ಲಿ ಸಿದ್ಧವಾದ ಎರಡು ವೈಕಲ್ಪಿಕವಾದ ವಿಧಿಗಳಲ್ಲಿ ಒಂದನ್ನು ತಳ್ಳಿಹಾಕಿ ಮತ್ತೊಂದನ್ನು ವಿಧಿಸುವುದು ಪರಿಸಂಖ್ಯಾವಿಧಿ.

೭೩. ಅನೇಕ ವಿಕಲ್ಪಗಳು ಒಂದು ಕ್ರಿಯೆಯ ಬಗೆಗೆ ಪ್ರಾಪ್ತವಾದಾಗ ನಿರ್ದಿಷ್ಟವಾದುದೊಂದನ್ನು ವಿಧಿಸುವುದು ನಿಯಮವಿಧಿ. 'ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ' ಇದು ನಿಯಮವಿಧಿ.

೭೪. ಒಂದು ನಿಮಿತ್ತದ ಕಾರಣ ಬಂದಿರುವ ವಿಧಿ ನೈಮಿತ್ತಿಕವಿಧಿ.

ಪೂ. ಮೀ. ಸೂ. (I—XIV—17)

೭೫. ಒಂದು ಪ್ರಯೋಜನವನ್ನು ಬಯಸಿದವನು ಮಾಡಬೇಕಾದ

ವಿಧಿ ಕಾಮ್ಯವಿಧಿ. ಸ್ವರ್ಗಕಾಮಿಯಾದವನು ಜ್ಯೋತಿಷ್ಟೋಮಯಾಗ ಮಾಡಬೇಕು ಇದು ಕಾಮ್ಯವಿಧಿ.

೭೬. ಯೋಗಸ್ಮೃತಿಯನ್ನು ರಚಿಸಿದವನು ಹಿರಣ್ಯಗರ್ಭ. ಇವನೂ ಬದ್ಧಜೀವಿಯಾದ ಕಾರಣ ತಮಸ್ಸು ಮತ್ತು ರಜಸ್ಸುಗಳ ಪ್ರಭಾವಕ್ಕೊಳಗಾಗಿದ್ದಾನೆಂದೂ ಆ ಕಾರಣವೇ ಯೋಗವು ಪರಮ ಪ್ರಮಾಣವಲ್ಲವೆಂದೂ ಈ ಸಿದ್ಧಾಂತದಲ್ಲಿ ಸಾಧಿಸಿದೆ.

೭೭. ಕಪಿಲರು ಸಾಂಖ್ಯದರ್ಶನಕಾರರು. ಅವರಿಂದ ಪ್ರಣೀತವಾದುದು ಕಪಿಲಸ್ಮೃತಿ.

೭೮. ರಾಮಾಯಣ ಮಹಾಭಾರತಗಳು ಇತಿಹಾಸಗಳು. ಪುರಾಣಗಳು ಸಂಖ್ಯೆಯಲ್ಲಿ ಹದಿನೆಂಟು. ಇವು ವೇದಾರ್ಥ ವಿಶದೀಕರಣಕ್ಕಾಗಿ ಪ್ರವೃತ್ತವಾಗಿವೆ. ಇವಕ್ಕೆ ಉಪಬೃಹ್ಮಣಗಳೆಂದು ಹೆಸರು. ವೇದೋಕ್ತವಾದ ತತ್ತ್ವವನ್ನು ವಿಸ್ತರಿಸಿ ನಿರೂಪಿಸುವ ಇವು ವೇದಕ್ಕೆ ವಿರುದ್ಧವಾದವಲ್ಲ.

೭೯. ಪುರಾಣಗಳನ್ನು ಬ್ರಹ್ಮನು ಉಪದೇಶಿಸಿದನೆಂದು ಹೇಳಲಾಗಿದೆ. ಅವನು ಸಾತ್ವಿಕವಾದ ವೇಳೆಯಲ್ಲಿ ಹೇಳಿದುದು ಸಾತ್ವಿಕ ಪುರಾಣವಾಯಿತು. ರಾಜಸ ಮತ್ತು ತಾಮಸ ವೇಳೆಯಲ್ಲಿ ಹೇಳಿದವು ರಾಜಸ ಮತ್ತು ತಾಮಸ ಪುರಾಣಗಳಾದವು. ಪದ್ಮ ಪುರಾಣದಲ್ಲಿ ಹೇಳಿರುವಂತೆ ವಿಷ್ಣು, ನಾರದೀಯ, ಭಾಗವತ, ಗರುಡ, ಪದ್ಮ ಮತ್ತು ವರಾಹ ಪುರಾಣಗಳು ಸಾತ್ವಿಕ ಪುರಾಣಗಳು. ಬ್ರಹ್ಮಾಂಡ, ಬ್ರಹ್ಮವೈವರ್ತ, ಮಾರ್ಕಂಡೇಯ, ಭವಿಷ್ಯ, ವಾಮನ ಮತ್ತು ಬ್ರಹ್ಮ ಪುರಾಣಗಳು ರಾಜಸಪುರಾಣಗಳು. ಮತ್ಸ್ಯ, ಕೂರ್ಮ, ಲಿಂಗ, ಶಿವ, ಸ್ಕಂದ ಮತ್ತು ಅಗ್ನಿಪುರಾಣಗಳು ತಾಮಸ ಪುರಾಣಗಳು.

೮೦. ಕಾಪಾಲ, ಕಾಲಾಮುಖ ಮತ್ತು ಪಾಶುಪತ ಸಿದ್ಧಾಂತದಲ್ಲಿ ವೇದವಿರುದ್ಧವಾದ ಆಚಾರಗಳೂ ತತ್ತ್ವವಿಚಾರವೂ ಇದೆ ಪಶುಪತಿಯೇ ಜಗತ್ತಿಗೆ ನಿಮಿತ್ತಕಾರಣ ಎಂದು ಇವರ ಮತ. ಈ ಸಿದ್ಧಾಂತದಲ್ಲಿ ಇದನ್ನು ಒಪ್ಪುವುದಿಲ್ಲ. ಆದರೆ ವೇದಕ್ಕೆ ವಿರುದ್ಧವಲ್ಲದ ಅಂಶಗಳನ್ನು ಅಲ್ಲಿಂದಲೂ

ತೆಗೆದುಕೊಳ್ಳುವುದರಲ್ಲಿ ಆಕ್ಷೇಪವಿಲ್ಲವೆಂದು ರಾಮಾನುಜರು ಪಶುಪತ್ಯಧಿಕರಣದ ಕೊನೆಯಲ್ಲಿ ಹೇಳಿದ್ದಾರೆ.

೮೧. ವೈಷ್ಣವಾಗಮವು ಪಾಂಚರಾತ್ರ ಮತ್ತು ವೈಖಾನಸ ಎಂದು ಎರಡುಬಗೆ. ಇವೆರಡೂ ಪ್ರಮಾಣಗಳು. ವೇದಕ್ಕೆ ವಿರುದ್ಧವಾದ ಅಂಶ ಇವುಗಳಲ್ಲಿ ಎಳ್ಳಷ್ಟೂ ಇಲ್ಲದ ಕಾರಣ ಇವು ಪ್ರಮಾಣಗಳೆಂದು ಸಾಧಿಸಲಾಗಿದೆ. ಪಾಂಚರಾತ್ರಾಗಮವನ್ನು ಶ್ರೀಮನ್ನಾರಾಯಣನೇ ಹೇಳಿದನೆಂದು ಸಾರಿದೆ. 'ಉತ್ಪತ್ತ್ಯಸಂಭವಾತ್' ಎಂಬ ಅಧಿಕರಣದಲ್ಲಿ ಪಾಂಚರಾತ್ರದ ಪ್ರಾಮಾಣ್ಯವನ್ನು ರಾಮಾನುಜರು ಸಮರ್ಥಿಸಿದ್ದಾರೆ.

೮೨. ಒಂದು ವಾಕ್ಯದ ಪ್ರಾಮಾಣ್ಯವನ್ನು ಈ ಮೂರು ಅಂಶಗಳು ಸಾಧಿಸುತ್ತವೆ. ಗೌಃ ಎಂದ ಮಾತ್ರಕ್ಕೆ ಅರ್ಥ ಪೂರ್ಣವಾಗದು. ಇತರ ಕೆಲವು ಪದಗಳ ಅಪೇಕ್ಷೆ ಅದಕ್ಕಿದೆ. ಇದು ಆಕಾಂಕ್ಷೆ. ಹೇಳಿದ ಆ ಶಬ್ದದ ಅರ್ಥ ಹೊಂದುವಂತಿರಬೇಕು. ಇದು ಯೋಗ್ಯತೆ. 'ಬೆಂಕಿಯಿಂದ ಒದ್ದೆಯಾಗಿದೆ' ಎಂಬುದರ ಅರ್ಥ ಹೊಂದುವುದಿಲ್ಲ. ಅದಕ್ಕೆ ಯೋಗ್ಯತೆ ಇಲ್ಲ. ಪದಗಳನ್ನು ಉಚ್ಚರಿಸುವುದರಲ್ಲಿ ದೀರ್ಘವಾದ ಅಂತರ:ಇರುವುದಾದರೆ 'ಸನ್ನಿಧಿ' ಇರುವುದಿಲ್ಲ. ಶಾಬ್ದಜ್ಞಾನವುಂಟಾಗುವುದಕ್ಕೆ ಸನ್ನಿಧಿ ಆವಶ್ಯಕ. 'ದೇವರ ಧ್ಯಾನಮಾಡು' ಎಂಬ ವಾಕ್ಯದ ಶಬ್ದಗಳನ್ನು ಒಟ್ಟಿಗೆ ಉಚ್ಚರಿಸಬೇಕು. ಇಲ್ಲದಿದ್ದರೆ ಅರ್ಥಯುಕ್ತವಾಗದು.

೮೩. ಯೋಗವೆಂಬುದು ಶಬ್ದದ ವ್ಯುತ್ಪತ್ತಿಸಿದ್ಧವಾದ ಅರ್ಥ. ಆದರೆ ಬಳಕೆಯಲ್ಲಿ ಆ ಶಬ್ದಕ್ಕೆ ಬಂದಿರುವ ಅರ್ಥ ರೂಢಿ ಎನಿಸುವುದು.

೮೪. ಭೇದವಿಶಿಷ್ಟವಾದ ಪದಾರ್ಥಗಳನ್ನೇ ಶಬ್ದವು ಬೋಧಿಸುತ್ತದೆ. ನಿರ್ವಿಕಲ್ಪಕವಾದ ಅಥವಾ ನಿರ್ವಿಶೇಷವಾದ ವಸ್ತುವನ್ನು ಅದು ಬೋಧಿಸುವುದಿಲ್ಲವೆಂಬುದು ಸಿದ್ಧಾಂತ. ಪದವಾಕ್ಯಗಳ ಮೂಲಕ ಶಬ್ದಪ್ರಮಾಣ ಪ್ರವರ್ತಿಸುತ್ತದೆ ಬೇರೆ ಬೇರೆ ಅರ್ಥಗಳುಳ್ಳ ಪ್ರಕೃತಿ ಪ್ರತ್ಯಯಗಳಿಂದಾದುದು ಪದ. ಈ ಪದವೂ ವಿಶಿಷ್ಟವಾದ ವಸ್ತುವನ್ನೇ ಬೋಧಿಸುತ್ತದೆ. ಅನೇಕಾರ್ಥ ಪ್ರತಿ

ಪಾದಕವಾದ ಅನೇಕ ಶಬ್ದಗಳು ಒಟ್ಟಾಗಿ ಸೇರಿ ವಾಕ್ಯದಲ್ಲಿ ಅರ್ಥವನ್ನುಂಟು ಮಾಡುತ್ತವೆ. ಹೀಗೆ ವೈದಿಕವಾದ ಅಥವಾ ಲೌಕಿಕವಾದ ಪದಪುಂಜಗಳು ಭೇದ ವಿಶಿಷ್ಟವಾದ ಪದಾರ್ಥಗಳನ್ನೇ ಬೋಧಿಸುತ್ತವೆ.

೮೫. ಎಲ್ಲ ಶಬ್ದಗಳೂ ಆಯಾ ಚೇತನಾಚೇತನ ಪದಾರ್ಥಗಳನ್ನು ವಿಶೇಷಣಗಳನ್ನಾಗಿ ಹೊಂದಿರುವ ಪರಬ್ರಹ್ಮವಸ್ತುವನ್ನೇ ಬೋಧಿಸುತ್ತವೆ. ವಿಶೇಷಣವಿಶಿಷ್ಟವಾದ ವಸ್ತುವನ್ನೇ ಶಬ್ದ ಬೋಧಿಸುವುದು. ಸರ್ವಾಂತರ ನಾದ ಪರಮಾತ್ಮನಿಗೆ ಉಳಿದುದೆಲ್ಲವೂ ವಿಶೇಷಣವಾದ ಕಾರಣ ಸರ್ವಶಬ್ದಗಳೂ ಅವನನ್ನೇ ಪರಮ ತಾತ್ಪರ್ಯವನ್ನಾಗಿ ಹೊಂದಿವೆ ಎಂಬುದು ಇದರ ಅಭಿಪ್ರಾಯ. ಇದನ್ನೇ 'ಚರಾಚರ ವ್ಯಪಾಶ್ರಯಸ್ತು ಸ್ಯಾತ್ ತದ್ವ್ಯಪದೇಶೋ ಭಾಕ್ತಃ ತದ್ಭಾವಭಾವಿತ್ವಾತ್' ಎಂಬ ವೇದಾಂತ ಸೂತ್ರದಲ್ಲಿ ಸಮರ್ಥಿಸಿದೆ. (ವೇ. ಸೂ. ೨-೩-೧೭).

೮೬. ರಾಮಾನುಜರು ವೇದಾರ್ಥಸಂಗ್ರಹದಲ್ಲಿ ಇದನ್ನೇ 'ವೈದಿಕಾಶ್ಯಬ್ದಾಃ ಸರ್ವೇ ಪರಮಾತ್ಮಪರ್ಯಂತಾನ್ ಸ್ವಾರ್ಥಾನ್ ಬೋಧಯಂತಿ' ಎಂದು ಹೇಳಿದ್ದಾರೆ. ವೇದಾಂತಾರ್ಥಗಳನ್ನರಿಯುವ ಮೊದಲು ಚೇತನಾಚೇತನಪದಾರ್ಥಗಳನ್ನು ಹೇಳುವ ಶಬ್ದಗಳು ಅವುಗಳನ್ನೇ ಬೋಧಿಸುವುವೆಂದು ತಿಳಿಯುವರು. ಶಬ್ದಾರ್ಥವು ಇಲ್ಲಿ ಅಪೂರ್ಣವಾಯಿತು. ಅವೆಲ್ಲಾ ಆ ಭಗವಂತನನ್ನೇ ಹೇಳುವುವೆಂದು ತಿಳಿದಾಗ ವ್ಯುತ್ಪತ್ತಿಯು ಪೂರ್ಣವಾಗುತ್ತದೆ.

೮೭. ವೈಶೇಷಿಕರು ಏಳು ಪದಾರ್ಥಗಳನ್ನು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ ಎಂದು ಅಂಗೀಕರಿಸುತ್ತಾರೆ. ಇವುಗಳಲ್ಲಿ ಸಾಮಾನ್ಯ, ವಿಶೇಷ, ಸಮವಾಯ, ಅಭಾವಗಳು ಬೇರೆ ಪದಾರ್ಥಗಳಲ್ಲವೆಂದು ಇಲ್ಲಿ ಸಾಧಿಸಿದೆ. ಕರ್ಮವನ್ನು ಗುಣಪಕ್ಷದೊಳಗೇ ಅಂತರ್ಭಾವ ಮಾಡುವ ಕಾರಣ ದ್ರವ್ಯ, ಗುಣ ಎಂಬ ಎರಡೇ ಪದಾರ್ಥಗಳು ಉಳಿಯುವುವು. ಅದ್ವೈತಿಗಳು ಆತ್ಮ-ಅನಾತ್ಮ ಎಂದು ವಿಭಾಗ ಮಾಡುವರು. ಸಾಂಖ್ಯರು ಪ್ರಕೃತಿ-ಪುರುಷ ಎಂದು ವಿಭಾಗಿಸುವರು. ಭಾಟ್ಟರು ದ್ರವ್ಯ, ಗುಣ, ಕರ್ಮ, ಸಾಮಾನ್ಯ ಮತ್ತು ಅಭಾವಗಳನ್ನೂ ಪ್ರಾಭಾಕರರು ದ್ರವ್ಯ, ಗುಣ, ಕರ್ಮ

ಸಾಮಾನ್ಯ, ಸಮವಾಯ, ಶಕ್ತಿ, ಸಾದೃಶ್ಯ ಮತ್ತು ಸಂಖ್ಯೆ ಎಂಬ ಎಂಟು ಪದಾರ್ಥಗಳನ್ನೂ ಒಪ್ಪುತ್ತಾರೆ. ಇವುಗಳನ್ನೆಲ್ಲಾ ದ್ರವ್ಯ-ಅದ್ರವ್ಯ ಎಂಬ ವ್ಯಾಪಕವಾದ ವಿಭಾಗದಲ್ಲಿ ಅಡಕಗೊಳಿಸಬಹುದೆಂದು ಈ ಸಿದ್ಧಾಂತ ಸಮರ್ಥಿಸುತ್ತದೆ.

೮೨. ಸಾಮಾನ್ಯ ಅಥವಾ ಜಾತಿ ಎಂಬ ಅತಿರಿಕ್ತ ಪದಾರ್ಥವನ್ನು ಈ ಸಿದ್ಧಾಂತ ಒಪ್ಪುವುದಿಲ್ಲ. ಒಂದು ಪ್ರಾಣಿಯನ್ನು ನೋಡಿದಾಗ ಇದು ಪ್ರಾಣಿ ಎಂಬ ಜಾತಿಯಜ್ಞಾನವುಂಟಾಗುವುದು. ಆದರೆ ಆಯಾ ವ್ಯಕ್ತಿಯನ್ನು ಬಿಟ್ಟು ಬೇರೆಯಾಗಿ ಈ ಜಾತಿಯ ಜ್ಞಾನ ಉಂಟಾಗುವುದಿಲ್ಲವೆಂಬುದನ್ನು 'ತಸ್ಮಾತ್ ತಾಂ ತದ್ವಿಶಿಷ್ಟಾಮಭಿದಧತಿ' ಎಂದು ದೇಶಿಕರು ಹೇಳಿದ್ದಾರೆ.

೮೯. ನೈಯಾಯಿಕರು ಜಾತಿ ವ್ಯಕ್ತಿಗಳ, ಗುಣ ಗುಣಿಗಳ, ಅವಯವ ಅವಯವಿಗಳ ಸಂಬಂಧ ಸಮವಾಯವೆಂದು ಹೇಳುತ್ತಾರೆ. ಈ ಸಂಬಂಧ ನಿತ್ಯವೆಂದೂ ಉಪಪಾದಿಸಿದ್ದಾರೆ. ಸಮವಾಯವೆಂಬ ಅತಿರಿಕ್ತವಾದ ಪದಾರ್ಥ ಇದೆ ಎಂಬುದನ್ನು ಈ ಸಿದ್ಧಾಂತ ಒಪ್ಪುವುದಿಲ್ಲ. ಎರಡು ಪದಾರ್ಥಗಳಿಗಿರುವ ಬೇರ್ಪಡಿಸಲಾಗದ ಸಂಬಂಧವನ್ನು ತಿಳಿಸಲು ಸಮವಾಯವನ್ನು ಹೇಳಿದರೆ ಈ ಸಮವಾಯವನ್ನು ಸ್ಥಾಪಿಸಲು ಮತ್ತೊಂದನ್ನೂ ಅದಕ್ಕೆ ಮತ್ತೊಂದನ್ನೂ ಅಂಗೀಕರಿಸಬೇಕಾಗುವುದು. ಇದಕ್ಕೆ ಕೊನೆಯೇ ಇಲ್ಲದ ಕಾರಣ ದೋಷವಾಗುವುದು. ಅದರಿಂದ ಈ ಸಿದ್ಧಾಂತ ಸಮವಾಯವನ್ನು ಒಪ್ಪುವುದಿಲ್ಲ.

೯೦. ಅಂತರಿಂದ್ರಿಯವಾದ ಮನಸ್ಸಿನ ಮೂಲಕವೇ ಜ್ಞಾನವು ಇಂದ್ರಿಯಗಳಲ್ಲಿ ಹರಿಯುವುದು. ಇಂದ್ರಿಯ ಜ್ಞಾನವನ್ನು ತೆಗೆದುಕೊಂಡು ಒಂದುಗೂಡಿಸುವುದು ಮನಸ್ಸು. ಇದಕ್ಕೇ ಬುದ್ಧಿ, ಅಹಂಕಾರ ಮತ್ತು ಚಿತ್ತ ಎಂಬ ಹೆಸರುಗಳೂ ಇವೆ. ನಿಶ್ಚಯಿಸುವ ಕಾರ್ಯಮಾಡುವಾಗ ಬುದ್ಧಿ ಎಂದೂ, (ಶರೀರವನ್ನೇ ಆತ್ಮವೆಂದು ತಪ್ಪಾಗಿ ತಿಳಿಯುವಂತಹ) ತಪ್ಪು ತಿಳಿವಳಿಕೆಯಲ್ಲಿ ತೊಡಗಿದಾಗ ಅಹಂಕಾರವೆಂದೂ, ಚಿಂತಿಸುವ ವ್ಯಾಪಾರ ನಡೆಸುವಾಗ ಚಿತ್ತವೆಂದೂ ಕರೆಯುತ್ತಾರೆ. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂದು ಹೇಳಿದಂತೆ ವಿಷಯಾಸಕ್ತವಾದ ಮನಸ್ಸು ಬಂಧಕ್ಕೂ ನಿರ್ವಿಷಯವಾದ ಮನಸ್ಸು ಮೋಕ್ಷಕ್ಕೂ ಕಾರಣವಾಗಿದೆ.

೯೧. ಆಕಾಶ ವಿಭು ಮತ್ತು ನಿತ್ಯವೆಂದು ಪೂರ್ವಪಕ್ಷಿಯ ಮತ. ಇದನ್ನು ಈ ಸಿದ್ಧಾಂತದಲ್ಲಿ ನಿರಾಕರಿಸಿದೆ. ಆಕಾಶವು ಇತರ ಭೂತಗಳಂತೆ ಹುಟ್ಟುವುದೆಂದು ವೇದಾಂತ ಸೂತ್ರಗಳಲ್ಲಿಯೂ (II–3–3) ಶ್ರುತಿಗಳಲ್ಲಿಯೂ (ತೈ. ಉ. 2–1) ಹೇಳಿರುವುದಕ್ಕನುಸಾರವಾಗಿ ಆಕಾಶವು ಹುಟ್ಟುವುದೆಂದೂ, ಪ್ರತ್ಯಕ್ಷಗೋಚರವಾಗುವುದೆಂದೂ ಸಮರ್ಥಿಸಲಾಗಿದೆ.

೯೨. ಒಂದು ಪದಾರ್ಥದ ಅಸಾಧಾರಣ ಸ್ವರೂಪಕ್ಕಿಂತ ಬೇರೆಯಾದ ಲಕ್ಷಣದಿಂದ ನಿರೂಪಿಸುವುದು ತಟಸ್ಥ ಲಕ್ಷಣ ಇದರಿಂದಲೂ ಆ ವಸ್ತುವಿನ ಸ್ವರೂಪ ಗೊತ್ತಾಗುತ್ತದೆ.

೯೩. ಇನನ್ನು ಅಹಿಕುಂಡಲ ಅಥವಾ ಸರ್ಪದ ಸುರುಳಿಯ ಉಪಮಾನಕ್ಕೆ ಹೋಲಿಸಬಹುದು.

೯೪. ಪ್ರಳಯ ನಿತ್ಯ, ನೈಮಿತ್ತಿಕ, ಪ್ರಾಕೃತ ಮತ್ತು ಆತ್ಯಂತಿಕ ಎಂದು ನಾಲ್ಕು ಬಗೆ. ನಿತ್ಯಪ್ರಳಯ ಎಂಬುದು ನಿದ್ರೆ. ಇದರಲ್ಲಿ ಪ್ರತಿಯೊಂದು ಕಾರ್ಯವೂ ಆ ಕಾಲಕ್ಕೆ ಲಯ ಹೊಂದುತ್ತದೆ. ಬ್ರಹ್ಮನ ದಿನದ ಕೊನೆಯಲ್ಲಿ ಆಗುವ ಲಯ ನೈಮಿತ್ತಿಕ ಪ್ರಳಯ. ಬ್ರಹ್ಮನ ಕಲ್ಪಾಂತದಲ್ಲಿ ಆಗುವ ಪ್ರಳಯ ಪ್ರಾಕೃತಪ್ರಳಯ. ಭಗವಂತನನ್ನು ಸೇರಿದಾಗ ಪ್ರಕೃತಿಬಂಧದಿಂದ ಮುಕ್ತನಾಗುವುದು ಆತ್ಯಂತಿಕ ಪ್ರಳಯ.

೯೫. ಕಾರ್ಯವು ಅಖಂಡಕಾಲ ಮತ್ತು ಕಾರ್ಯಕಾಲ ಎಂದು ಎರಡು ಬಗೆ. ಅಖಂಡಕಾಲ ನಿತ್ಯ; ಕಾರ್ಯಕಾಲಕ್ಕೆ ಕಾರಣ. ಕಾರ್ಯಕಾಲ ಬದಲಾಗುವ ಅನಿತ್ಯವಾದ ಕಾಲ.

೯೬. ಲೀಲಾವಿಭೂತಿಯು ಈ ಪ್ರಾಕೃತವಾದ ಪ್ರಪಂಚ. ನಿತ್ಯವಿಭೂತಿಯು ವೈಕುಂಠ. ಲೀಲಾವಿಭೂತಿಯಲ್ಲಿ ಕಾಲಕ್ಕನುಸಾರವಾಗಿ ವ್ಯಾಪಾರಗಳನ್ನು ದೇವನು ನಡೆಸುವನು ನಿತ್ಯವಿಭೂತಿಯಲ್ಲಿ ಕಾಲವು ನಿತ್ಯವಾಗಿರುತ್ತದೆ. ಈಶ್ವರ ಸಂಕಲ್ಪಕ್ಕೆ ಕಾಲವು ಅಧೀನವಾಗಿರುವುದು. 'ಕಾಲಂ ಸ ಪಚತೇ ತತ್ರ ನ ಕಾಲಸ್ತತ್ರ ವೈ ಪ್ರಭುಃ' ಎಂದು ಅದನ್ನು ಹೇಳಿದೆ.

೯೭. ಹೇಗೆ ಧರ್ಮಭೂತಜ್ಞಾನವು ಸ್ವಯಂಪ್ರಕಾಶವಾದರೂ ತನ್ನನ್ನು ತಾನರಿಯದೋ ಹಾಗೆಯೇ ಶುದ್ಧಸತ್ವವೂ ಸ್ವಯಂಪ್ರಕಾಶವಾದರೂ ತನ್ನನ್ನು ತಾನರಿಯದು. ಇತರರ ಜ್ಞಾನಕ್ಕೇ ಇವು ವಿಷಯಗಳಾಗುವುವು. ಶುದ್ಧ ಸತ್ವಕ್ಕೆ ಸ್ವಯಂಪ್ರಕಾಶತ್ವವಿದೆಯೆಂಬುದನ್ನು ದೇಶಿಕರು ಸಮರ್ಥಿಸಿದ್ದಾರೆ. ಹೀಗೆ ಇದಕ್ಕೆ ಜ್ಞಾತೃತ್ವವಿಲ್ಲ.

೯೮. ಪಂಚಶಕ್ತಿಗಳು ಸರ್ವ, ನಿವೃತ್ತಿ, ವಿಶ್ವ, ಪುರುಷ ಮತ್ತು ಪರಮೇಷ್ಠಿ ಎಂಬುವು. ಇವುಗಳ ವಿವರಣೆ ಪದ್ಮತಂತ್ರದಲ್ಲಿದೆ. ಇಲ್ಲಿ ವಿಷ್ಣುವನ್ನು ಪಂಚಶಕ್ತಿಮಯವೆಂದು ಹೇಳಿದೆ.

೯೯. ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ ಮತ್ತು ತೇಜಸ್ಸು ಎಂಬುವು ಷಡ್ಗುಣಗಳು.

೧೦೦. 'ತಮಸಃ ಪರಸ್ತಾತ್' ಎಂಬ ಶ್ರುತಿಯನ್ನು ಇಲ್ಲಿ ಸೂಚಿಸಿದೆ.

೧೦೧. ಚೇತನಾಚೇತನ ತತ್ವಗಳೆಲ್ಲಾ ಭಗವಂತನಿಗೆ ಅಸ್ತ್ರಗಳಾಗಿಯೂ ಭೂಷಣಗಳಾಗಿಯೂ ಇವೆ ಎಂದು ವಿಷ್ಣು ಪುರಾಣದ ಅಸ್ತ್ರಭೂಷಣಾಧ್ಯಾಯದಲ್ಲಿ (ವಿ. ಪು. 1, 22) ಹೇಳಿದೆ.

೧೦೨. ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ ಇವುಗಳಿಂದಾದುದು ಆ ದಿವ್ಯಸಿಂಹಾಸನ.

೧೦೩. ಧರ್ಮಭೂತಜ್ಞಾನವು ಜ್ಞಾತೃವಾದ ಆತ್ಮನಿಗಿಂತ ಬೇರೆಯಾದುದು. ಈ ಜ್ಞಾನ ಆ ಆತ್ಮನ ಗುಣ ಅಥವಾ ಧರ್ಮ. ಆತ್ಮನು ಜ್ಞಾನಸ್ವರೂಪಿ ಮತ್ತು ಸ್ವಯಂಪ್ರಕಾಶ. ಅದು ತನ್ನನ್ನು ತಾನೇ ತಿಳಿಯಬಲ್ಲದು. ಆದರೆ ಧರ್ಮಭೂತ ಜ್ಞಾನ ಅಚೇತನ. ತನ್ನನ್ನು ತಾನು ತಿಳಿಯಲಾರದು. ಇದು ಆತ್ಮನಿಗೆ ತನ್ನನ್ನುಳಿದು ಮಿಕ್ಕುದನ್ನೆಲ್ಲ ತೋರಿಸಿಕೊಡುತ್ತದೆ. ಜ್ಞಾನಾಶ್ರಯವಾದರೆ ಚೇತನ ಇಲ್ಲದೆಹೋದರೆ ಅಚೇತನ. ಧರ್ಮಭೂತ ಜ್ಞಾನ ಅಚೇತನ.

೧೦೪. ಧರ್ಮಭೂತಜ್ಞಾನವು ದ್ರವ್ಯವೂ ಹೌದು, ಗುಣವೂ ಹೌದು. ಇದು ಆತ್ಮಕ್ಕೆ ಧರ್ಮವಾಗಿ ಅದರೊಡನೆ ಎಡಬಿಡದೆ ಕೂಡಿರುವುದರಿಂದ ಗುಣ. ದ್ರವ್ಯದೋಪಾದಿ ಸಂಕೋಚವಿಕಾಸಾದಿ ಅವಸ್ಥೆಗಳನ್ನು ಹೊಂದುವುದರಿಂದ ಇದು ದ್ರವ್ಯವೂ ಹೌದು.

೧೦೫. ಧರ್ಮಭೂತಜ್ಞಾನವು ವಿಭುವೇ ಆದರೂ ಆಯಾ ಚೇತನರ ಕರ್ಮದ ಕಾರಣ ಬದ್ಧಾವಸ್ಥೆಯಲ್ಲಿ ಸಂಕುಚಿತವಾಗುತ್ತದೆ. ಮುಕ್ತಾವಸ್ಥೆಯಲ್ಲಿ ತನ್ನ ಸಹಜಸ್ವರೂಪ ಹೊಂದುತ್ತದೆ. ಈ ದೃಷ್ಟಿಯಿಂದ ಜ್ಞಾನಕ್ಕೆ ಉತ್ಪತ್ತಿ ವಿನಾಶ ಹೇಳಲಾಗಿದೆ.

೧೦೬. ಒಂದು ಪದಾರ್ಥದ ಜ್ಞಾನ ಒಂದೇಸಮನಾಗಿ ಮುಂದುವರಿಯುತ್ತಾ ಬರುವುದು ಧಾರಾವಾಹಿಕಜ್ಞಾನ. ಕಣ್ಮುಂದೆ ಇರುವ ಕಂಬದ ಅರಿವು 'ಇದು ಕಂಬ, ಇದು ಕಂಬ' ಎಂದು ನಿರಂತರವಾಗಿ ಆಗುವುದು ಇದಕ್ಕೆ ನಿದರ್ಶನ. ಈ ಜ್ಞಾನ ಅಖಂಡವಾದುದು. ಮುಂದುವರಿದ ಕ್ಷಣಗಳಲ್ಲಿಯೂ ಅದೇ ವಸ್ತು ತೋರುತ್ತಿರುವುದರಿಂದ ಹಿಂದಿನ ಜ್ಞಾನ ನಷ್ಟವಾಗಿ ಮುಂದಿನ ಜ್ಞಾನ ಉಂಟಾಯಿತೆಂದು ಹೇಳಲಾಗುವುದಿಲ್ಲ.

೧೦೭. ಇವಕ್ಕೆ ಅಷ್ಟಾಂಗಗಳೆಂದು ಹೆಸರು. ಆದರೆ ಇವುಗಳಲ್ಲಿ ಸಮಾಧಿಯು ಮುಖ್ಯವಾದುದಾಗಿ ಉಳಿದ ಏಳೂ ಅದನ್ನು ಸಾಧಿಸಲು ಅಂಗಗಳಾಗಿವೆ.

೧೦೮. ಒಂದು ಪಾತ್ರೆಯಿಂದ ಮತ್ತೊಂದು ಪಾತ್ರೆಗೆ ಎಣ್ಣೆಯನ್ನು ಸುರಿದಾಗ ಅದು ಮಧ್ಯದಲ್ಲಿ ಬಿಡುವಿಲ್ಲದೆ ಹೇಗೆ ಏಕಾಕಾರವಾಗಿರುವುದೋ ಹಾಗೆ ಭಗವಚ್ಚಿಂತನೆಯೂ ಮಧ್ಯದಲ್ಲಿ ಅಂತರವಿಲ್ಲದಿರಬೇಕು. ಈ ಚಿಂತನೆ 'ಆಪ್ರಯಾಣಾತ್ತತ್ರಾಪಿ ಹಿ ದೃಷ್ಟಮ್' (ವೇ. ಸೂ. 4-1-12) ಎಂದು ಸೂತ್ರದಲ್ಲಿ ಹೇಳಿದಂತೆ ಈ ಲೋಕದಲ್ಲಿ ಬದುಕಿರುವವರೆಗೂ ದಿನದಿನವೂ ಮಾಡತಕ್ಕದ್ದಾಗಿದೆ. 'ಯಾವದಾಯುಷಮೇವಂ ವರ್ತಯನ್ ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ' ಎಂದು ಶ್ರುತಿಯು ಇದನ್ನೇ ವಿಧಿಸಿದೆ.

ಈ ನಿರಂತರವಾದ ಚಿಂತನೆಯ ಫಲವಾಗಿ ಧ್ಯೇಯವಾದ ವಸ್ತುವಿನ ಸಾಕ್ಷಾತ್ಕಾರ ವಾಗುತ್ತದೆ.

೧೦೯. ಸಾಧನ ಸಪ್ತಕಗಳನ್ನು ನಿರೂಪಿಸುವವರು ವಾಕ್ಯಕಾರರು. ಭಗವದ್ರಾಮಾನುಜರು ಶ್ರೀ ಭಾಷ್ಯದಲ್ಲಿ ಅವರ ಸೂಕ್ತಿಯನ್ನು ಉದಾಹರಿಸಿದ್ದಾರೆ.

೧೧೦. ಸಾಧನ ಸಪ್ತಕಗಳೊಡನೆ ಉಪಾಸಕನು ಧ್ಯಾನದಲ್ಲಿ ತೊಡಗಿದಾಗ, ಧ್ಯಾನದ ಪ್ರಕರ್ಷದಿಂದ ಅವನು ಧ್ಯಾನಿಸುತ್ತಿರುವ ಭಗವಂತನ ಕಲ್ಯಾಣತಮವಾದ ರೂಪವು ಅವನು ತನ್ನ ಶರೀರವನ್ನು ಬಿಡುವ ಮುನ್ನ ಕಣ್ಣಿಗೆ ಗೋಚರಿಸುವುದು. ಇದಕ್ಕೇ ಅಂತಿಮ ಪ್ರತ್ಯಯವೆನ್ನುತ್ತಾರೆ.

೧೧೧. ಭಕ್ತಿಯೋಗವನ್ನನುಷ್ಠಿಸುವಾಗಲೂ ಪ್ರಾರಬ್ಧ ಕರ್ಮವು ಪೂರ್ಣವಾಗಿ ಕಳೆಯದೆ ಇದ್ದರೆ ಅಂತಿಮಪ್ರತ್ಯಯ ಉಂಟಾಗುವುದಿಲ್ಲ. ಆ ಶರೀರದ ಕೊನೆಯಲ್ಲಿಯೋ ಅಥವಾ ಬೇರೆ ಶರೀರದ ಕೊನೆಯಲ್ಲಿಯೋ ಅದು ಉಂಟಾಗಬಹುದು. ಆದುದರಿಂದ ಉಪಾಸಕ ತನ್ನ ಪ್ರಾರಬ್ಧಕರ್ಮ ಕಳೆಯುವವರೆಗೂ ಮುಕ್ತಿಗಾಗಿ ಕಾಯಬೇಕಾಗುತ್ತದೆ.

೧೧೨. ಭಗವಂತನನ್ನು ಕಾಣಬೇಕೆಂಬ ಉತ್ಕಟೇಚ್ಛೆ ಪರಭಕ್ತಿ. ತತ್ಕಾಲದಲ್ಲಿ ಆಗುವ ಪರಮಾತ್ಮನ ಸಾಕ್ಷಾತ್ಕಾರ ಪರಜ್ಞಾನ. ಆ ಸಾಕ್ಷಾತ್ಕಾರ ನಿರಂತರವಾಗಿರಬೇಕೆಂಬ ಹಂಬಲ ಪರಮಭಕ್ತಿ.

೧೧೩. ಬೃಹದಾರಣ್ಯಕದಲ್ಲಿ ಬರುವ 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ಉಪದೇಶದ ವಿಚಾರ ಇಲ್ಲಿ ಪ್ರಸ್ತುತವಾಗಿದೆ. ಇಲ್ಲಿ 'ಕೇಳಬೇಕು', 'ಮನನ ಮಾಡಬೇಕು' ಎಂಬುವು ಅನುವಾದಗಳು. 'ಧ್ಯಾನಿಸಲ್ಪಡಬೇಕು', 'ಕಾಣಬೇಕು' ಎಂಬುದು ವಿಧಿ. ಧ್ಯಾನಮಾಡಲ್ಪಡುವ ಬ್ರಹ್ಮವಸ್ತು ದರ್ಶನಸಮಾನಾಕಾರವಾಗುವಂತೆ ನಿರಂತರವಾಗಿ ಧ್ಯಾನಿಸಬೇಕು ಎಂಬುದು ಇಲ್ಲಿ ವಿಧಿಸಿರುವ ಅಂಶ 'ದ್ರಷ್ಟವ್ಯಃ ಇತಿ ಪದಂ ಸಾಕ್ಷಾತ್ಕಾರರೂಪತ್ವಪರಂ' ಎಂದು ಶ್ರುತಪ್ರಕಾಶಿಕೆಯಲ್ಲಿ ಹೇಳಿದೆ. 'ದ್ರಷ್ಟವ್ಯಃ' ಎಂಬುದು ವಿಧಿ. ಅದಕ್ಕೆ ಸಾಧನ ನಿದಿಧ್ಯಾಸನ.

'ಶ್ರೋತವ್ಯಃ ಶ್ರುತಿ ವಾಕ್ಯೇಭ್ಯಃ ಮಂತವ್ಯಶ್ಚೋಪಪತ್ತಿಭಿಃ ।
ಮತ್ವಾ ಚ ಸತತಂ ಧ್ಯೇಯಃ ಏತೇ ದರ್ಶನಹೇತವಃ ॥

ಎಂಬಲ್ಲಿ ಇದನ್ನು ಕಾಣಬಹುದು.

೧೧೪. ಉಪನಿಷತ್ತುಗಳಲ್ಲಿ ಮೂವತ್ತೆರಡು ಬ್ರಹ್ಮವಿದ್ಯೆಗಳನ್ನು ವಿಧಿಸಿದೆ.

೧೧೫. ಈ ವಿದ್ಯೆಗಳ ವಿಚಾರ ವೇದಾಂತ ಸೂತ್ರಗಳಲ್ಲಿ ಬರುತ್ತದೆ. ಅಂತರಕ್ಷಿ ವಿದ್ಯೆಯು 'ಸಂಬಂಧಾದೇವಮನ್ಯತ್ರಾಪಿ' ಎಂಬ ಶೂತ್ರದಲ್ಲಿಯೂ (III–3–20), ದಹರವಿದ್ಯೆಯು 'ದಹರಉತ್ತರೋಭ್ಯಃ' ಎಂಬ ಸೂತ್ರ ದಲ್ಲಿಯೂ (I–3–13), ಭೂಮವಿದ್ಯೆಯು 'ಭೂಮಾಸಂಪ್ರಸಾದಾದಧ್ಯುಪ ದೇಶಾತ್' ಎಂಬ ಸೂತ್ರದಲ್ಲಿಯೂ (I–3–7), ಸದ್ವಿದ್ಯೆಯು 'ಈಕ್ಷತೇರ್ನಾ ಶಬ್ದಮ್' ಎಂಬ ಸೂತ್ರದಲ್ಲಿಯೂ (I–1–5), ಮಧುವಿದ್ಯೆಯು, 'ಮಧ್ವಾದಿಷ್ವ ಸಂಭವಾದನಧಿಕಾರಂ ಜೈಮಿನಿಃ' ಎಂಬ ಸೂತ್ರದಲ್ಲಿಯೂ (I–3–30) ಉಪ ಕೋಸಲ ವಿದ್ಯೆಯು 'ಅಂತರ ಉಪಪತ್ತೇಃ' ಎಂಬ ಸೂತ್ರದಲ್ಲಿಯೂ(I–2–13), ಶಾಂಡಿಲ್ಯವಿದ್ಯೆಯು 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿಯೂ (I–2–1), ಪುರುಷ ವಿದ್ಯೆಯು 'ಈಕ್ಷತಿಕರ್ಮವ್ಯಪದೇಶಾತ್ ಸಃ' ಎಂಬಲ್ಲಿಯೂ (I–3–12), ವೈಶ್ವಾನರವಿದ್ಯೆಯು 'ವೈಶ್ವಾನರಃ ಸಾಧಾರಣಶಬ್ದವಿಶೇಷಾತ್' ಎಂಬ ಸೂತ್ರದಲ್ಲಿಯೂ (I–2–25), ಪಂಚಾಗ್ನಿ ವಿದ್ಯೆಯು ವೇದಾಂತ ಸೂತ್ರದ ಮೂರನೆಯ ಅಧ್ಯಾಯದಲ್ಲಿಯೂ ವಿವೇಚಿಸಲ್ಪಟ್ಟಿವೆ.

೧೧೬. ಶವಭಸ್ಮಲೇಪನ, ನರಕಪಾಲವನ್ನು ಪಾನಪಾತ್ರೆಯಾಗಿ ಬಳಸುವುದು ಮೊದಲಾದ ಕೆಲವು ವಿಚಿತ್ರವಾದ ಅಭ್ಯಾಸಗಳನ್ನು ಇದು ಕುರಿತು ದಾಗಿದೆ. ಇವು ಅವೈದಿಕವಾದುದರಿಂದ ಆದರಣೀಯವಲ್ಲವೆಂದು ಹೇಳಿದೆ.

೧೧೭. ಜೀವನು ಚೇತನತ್ವ ಹೊಂದಿದ್ದಾನೆಂದು ಮಾತ್ರ ಹೇಳಿದರೆ ಈಶ್ವರನಿಗೂ ಚೇತನತ್ವ ಇರುವುದರಿಂದ 'ಅತಿವ್ಯಾಪ್ತಿ' ಆಗುತ್ತದೆ. ಶೇಷತ್ವ ಮಾತ್ರವನ್ನು ಲಕ್ಷಣವಾಗಿ ಹೇಳಿದರೆ ಅಚೇತನಕ್ಕೂ ಅದು ಅನ್ವಯಿಸುತ್ತದೆ.

ಆದುದರಿಂದ ಶೇಷತ್ವವನ್ನೂ ಚೇತನತ್ವವನ್ನೂ ಹೊಂದಿರುವುದು ಜೀವನೆಂದು ಲಕ್ಷಣ ಹೇಳಿದೆ.

೧೧೮. ಜೀವನು ಅಣು ಎಂದು ಈ ಸಿದ್ಧಾಂತ ಸಾಧಿಸುತ್ತದೆ. ಜೀವನು ಈ ಶರೀರದಿಂದ ಉತ್ಕ್ರಮಿಸುವನೆಂದೂ ಬೇರೊಂದು ಶರೀರವನ್ನು ಪ್ರವೇಶಿಸುವನೆಂದೂ ಶ್ರುತಿ ಹೇಳುತ್ತದೆ. 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ' 'ಆರಾಗ್ರಮಾತ್ರಃ', 'ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯಚ । ಭಾಗೋ ಜೀವಸ್ಯ ವಿಜ್ಞೇಯಃ ಸ ಚಾನಂತ್ಯಾಯ ಕಲ್ಪತೇ ||' ಮೊದಲಾದ ಶ್ರುತಿಗಳು ಆತ್ಮನು ಅಣುವೆಂದು ನಿರೂಪಿಸುತ್ತವೆ.

೧೧೯. ಅಣುರೂಪಿಯಾದ ಜೀವನು ತನ್ನ ಧರ್ಮಭೂತ ಜ್ಞಾನದ ಮೂಲಕ ಅನೇಕವಾದ ವಿಷಯಗಳನ್ನರಿಯಬಲ್ಲ. ಒಂದೇ ಕಡೆ ಇರುವ ದೀಪ ತನ್ನ ಪ್ರಭೆಯಿಂದ ಎಲ್ಲವನ್ನೂ ಆವರಿಸುವಂತೆ ಹೃದಯ ಪ್ರದೇಶದಲ್ಲಿರುವ ಜೀವನು ತನ್ನ ಧರ್ಮಭೂತಜ್ಞಾನದಿಂದ ವ್ಯಾಪಿಸುವನೆಂದು 'ಗುಣಾದ್ವಾ ಲೋಕವತ್' (ವೇ. ಸೂ. II–3–26) ಮತ್ತು 'ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ' (ವೇ. ಸೂ. IV–4–15) ಎಂಬ ಸೂತ್ರಗಳಲ್ಲಿ ಸಾಧಿಸಿದೆ.

೧೨೦. ನಿತ್ಯನಾದ ಆತ್ಮನಿಗೆ ಕರ್ಮಾನುಗುಣವಾಗಿ ಬಂದಿರುವ ಶರೀರ ಸಂಬಂಧವೇ ಜನನ. ಈ ದೇಹ ಸಂಬಂಧದ ವಿಯೋಗ ಮರಣ. 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಎಂದು ಕಠಉಪನಿಷತ್ತು ಇದನ್ನು ಸ್ಪಷ್ಟಪಡಿಸಿದೆ.

೧೨೧. ಆತ್ಮರುಗಳು ಎಲ್ಲರೂ ಜ್ಞಾನ ಸ್ವರೂಪರು. ಭಗವಂತನಿಗೆ ಅಂಶಭೂತರಾದವರು. ಇವರು ಈಶ್ವರನಿಗಿಂತ ಭಿನ್ನರು ಮತ್ತು ಪರಸ್ಪರ ಭಿನ್ನರು. ಇವರು ಒಂದು ಎಂದು ಹೇಳುವ ಉಕ್ತಿಯ ಅರ್ಥ ಇವರು ಒಂದೇ ಸ್ವಭಾವದವರೆಂದು ತಿಳಿಯಬೇಕು. ಇಬ್ಬರಲ್ಲಿರುವ ವಿರೋಧಭಾವ ಹೋದಾಗ ಅವರು ಒಂದು ಎಂದು ಹೇಳುವಂತೆ, ಇಬ್ಬರಲ್ಲಿ ಪರಸ್ಪರ ವಿಶ್ವಾಸ ಮತ್ತು ಸ್ನೇಹ ಉಂಟಾದಾಗ ಅವರಿಬ್ಬರೂ ಒಂದು ಎಂದು ಹೇಳುವಂತೆ, ಒಂದೇ ಜಾತಿಯ ಎರಡು ಪದಾರ್ಥಗಳನ್ನು ಒಂದೇ ಎಂದು ಹೇಳುವಂತೆ, ಇಬ್ಬರಿಗೆ ಸಮಾನ

ವಾದ ಅನುಭವವಾದಾಗ ಅವರನ್ನು ಒಂದೇ ಎಂದು ಹೇಳುವಂತೆ, ಎರಡು ಪದಾರ್ಥಗಳಿಗೆ ಎಲ್ಲ ಕಾಲ, ಅವಸ್ಥೆ ಮತ್ತು ದೇಶಗಳಲ್ಲಿ ಅಪೃಥಕ್ಸಿದ್ಧವಾದ ಸಂಬಂಧವಿದ್ದಾಗ ಅವನ್ನು ಒಂದೇ ಎಂದು ಹೇಳುವಂತೆ ಇಲ್ಲಿ ಹೇಳಿರುವ 'ಏಕೋಕ್ತಿ' ಎಂದು ತಿಳಿಯಬೇಕು.

೧೨೨. ಅನಾದಿಯಾದ ಕರ್ಮರೂಪವಾದ ಅವಿದ್ಯೆಯು ಕಾರಣ ಜೀವನಿಗೆ ಸಂಸಾರಬಂಧ ಬಂದಿದೆ. ಇವನು ತನ್ನ ಶುಭಾಶುಭ ಕರ್ಮಗಳಿಗೆ ಹೊಣೆಗಾರನಾಗಿದ್ದಾನೆ. ಈಶ್ವರನಿಂದ ಕೊಡಲ್ಪಟ್ಟ ಕರ್ತೃತ್ವ ಇವನಿಗಿದೆ. 'ಕರ್ತಾ ಶಾಸ್ತ್ರಾರ್ಥವತ್ತ್ವಾತ್' (II–3–33) ಮತ್ತು 'ಪರಾತ್ತು ತಚ್ಛ್ರುತೇಃ' (II–3–40) ಎಂಬ ಸೂತ್ರಗಳು ಇದನ್ನು ಸ್ಪಷ್ಟಪಡಿಸಿವೆ. ಸಾಂಖ್ಯರು ಹೇಳುವಂತೆ ಕರ್ತೃತ್ವ ಪ್ರಕೃತಿಗಲ್ಲ ಆದರೆ ಜೀವನಿಗೇ ಎಂಬುದು ಈ ಸಿದ್ಧಾಂತದ ನೆಲೆ.

೧೨೩. ಆತ್ಮನು ಜ್ಞಾನಸ್ವರೂಪಿ, ಜ್ಞಾನವನ್ನು ಗುಣವನ್ನಾಗಿ ಹೊಂದಿದವನು, ಕರ್ತೃತ್ವ ಭೋಕ್ತೃತ್ವಗಳನ್ನುಳ್ಳವನು, ಭಗವಂತಗಿನಿಂತ ಬೇರೆಯಾಗಿ ಅವನಿಗೆ ಶೇಷಭೂತನಾದವನು, ಅಣು ಸ್ವರೂಪಿ, ಅನಾದಿಯಾದ ಕರ್ಮದ ಕಾರಣ ಸಂಸಾರದಲ್ಲಿ ತೊಳಲುತ್ತಿರುವನು–ಮೊದಲಾದ ಜೀವಲಕ್ಷಣಗಳು ಇತರರ ಅಭಿಪ್ರಾಯಗಳನ್ನು ತಳ್ಳಿಹಾಕಿ ಶ್ರುತಿಪ್ರಾಮಾಣ್ಯಕ್ಕನುಗುಣವಾಗಿ ಜೀವನ ಸ್ವರೂಪವನ್ನು ನಿರೂಪಿಸುತ್ತವೆ.

೧೨೪. ಜೀವನಿಗೆ ಲಭಿಸುವ ಸ್ವಾತ್ಮಾನುಭವ ಕೈವಲ್ಯ. ಕರ್ಮ ಯೋಗ ಮತ್ತು ಜ್ಞಾನ ಯೋಗಗಳ ನಂತರ ಉಂಟಾಗುವ ಸ್ವಾತ್ಮಾನುಭವವೇ ಕೈವಲ್ಯವೆಂದು ಕೆಲವರ ಮತ. ಗೀತೆಯಲ್ಲಿ ಹೇಳುವ 'ಜಿಜ್ಞಾಸು' ಕೇವಲಿ ಎಂದೂ ಅರ್ಚಿರಾದಿಮಾರ್ಗದಲ್ಲಿ ಪರಮಪದವನ್ನು ಸೇರಿದವನಿಗೆ ಆಗುವ ಭಗವದನುಭವರಹಿತವಾದ ಸ್ವಾತ್ಮಾನುಭವವೆಂದೂ ಕೆಲವರು ಹೇಳುತ್ತಾರೆ. ಗೀತೆಯಲ್ಲಿ ಹೇಳಿರುವ ಜಿಜ್ಞಾಸು ಕೇವಲ ಸ್ವಾತ್ಮಾನುಸಂಧಾನ ಮಾಡುವವನಲ್ಲವೆಂದೂ ಅವನು 'ಪರಮಾತ್ಮಾತ್ಮಕ ಸ್ವಾತ್ಮಾನುಸಂಧಾನ' ಮಾಡುವವನೆಂದೂ ಅವನೂ ಸಹ ಆತ್ಮಾನಂದವನ್ನನುಭವಿಸಿ ಭಗವದನುಭವವನ್ನು ಮಾಡುವವನೇ,

ಆಗುವನೆಂದು ದೇಶಿಕರು ತಿಳಿಸುತ್ತಾರೆ. 'ಸ್ವಾತ್ಮಶರೀರಕ ಬ್ರಹ್ಮಾನುಸಂಧಾನ'ದಂತೆ ಇದೂ ಬ್ರಹ್ಮವಿಷಯಕವೆಂದೇ ಅವರ ಮತ.

೧೨೫. ಒಬ್ಬ ಚೇತನನನ್ನೊಲಿಸಿಕೊಳ್ಳಲು ನಾವು ಆಶ್ರಯಿಸುವ ಚೇತನಾಂತರಕ್ಕೆ ಪುರುಷಕಾರವೆಂದು ಹೆಸರು. ನಾವು ಮೊದಲು ಶ್ರೀ ದೇವಿಯನ್ನಾಶ್ರಯಿಸಿ ಅವಳ ಮೂಲಕ ಭಗವಂತನನ್ನು ಒಲಿಸಿಕೊಳ್ಳಬೇಕಾಗಿದೆ ಕೃಪಾಮಯಿಯಾದವಳು ಇವಳು. ಭಗವಂತನು ನಮ್ಮನ್ನು ಸಲಹುವಂತೆ ಇವಳು ಪ್ರೇರಿಸುತ್ತಾಳೆ.

೧೨೬. ಪುಣ್ಯಪಾಪಗಳೆರಡೂ ಪರಮಫಲದ ಅನುಭವಕ್ಕೆ ಪ್ರತಿಬಂಧಕಗಳೇ. ಶರೀರ ವಿಯೋಗ ಕಾಲದಲ್ಲಿ ಉಪಾಸಕನೂ ಹಾಗೆಯೇ ಪ್ರಪನ್ನನೂ ತನ್ನ ಪುಣ್ಯವನ್ನು ಮಿತ್ರರಿಗೂ, ತನ್ನ ಪಾಪವನ್ನು ಶತ್ರುಗಳಿಗೂ ಬಿಟ್ಟು ತಾನು ಅರ್ಚಿರಾದಿಮಾರ್ಗದಲ್ಲಿ ಮುಂದುವರಿಯುವನು. 'ಸುಹೃದಃ ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ' ಎಂದು ಶ್ರುತಿ ಹೇಳುತ್ತದೆ ಈ ಅಂಶವನ್ನು. 'ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇತು' (ವೇ. ಸೂ. 4–1–14) ಎಂಬಲ್ಲಿ ಇದನ್ನು ಕಾಣಬಹುದು.

೧೨೭. ಛಾಂದೋಗ್ಯ ಉಪನಿಷತ್ತಿನಲ್ಲಿ 'ಶತಂ ಚೈಕಾ ಹೃದಯಸ್ಯ ನಾಡ್ಯಃ ತಾಸಾಂ ಮೂರ್ಧಾನಂ ಅಭಿನಿಃಸೃತೈಕಾ' ಎಂದು ಹೇಳಿ ಈ ಸುಷುಮ್ನಾ ನಾಡಿ ಮೇಲ್ಮುಖವಾಗಿದೆಯೆಂದೂ ಬ್ರಹ್ಮಜ್ಞನು ಈ ನಾಡಿಯಲ್ಲಿ ಭಗವಂತನಿಂದ ಪ್ರವೇಶ ಮಾಡಿಸಲ್ಪಟ್ಟು ಬ್ರಹ್ಮಲೋಕಕ್ಕೆ ಕರೆದೊಯ್ಯಲ್ಪಡುವನೆಂದೂ ತಿಳಿಸಿದೆ. ವೇದಾಂತ ಸೂತ್ರದಲ್ಲಿ 'ಹಾರ್ದಾನುಗೃಹೀತಶ್ಶತಾಧಿಕಯಾ' ಎಂದು (IV–2–16) ಈ ಅಂಶವನ್ನು ಪ್ರತಿಪಾದಿಸಿದೆ.

೧೨೮. ವೈದ್ಯುತೇನೈವ ತತಃ ತಚ್ಛ್ರುತೇಃ' ಎಂಬ ಸೂತ್ರದಲ್ಲಿ (ವೇ. ಸೂ. IV–3–5) ಈ ಅಂಶವಿದೆ. ಆತಿವಾಹಿಕರು ದಾರಿ ತೋರಿದ ಮೇಲೆ ಮುಕ್ತನು 'ಅಮಾನವ'ನ ಕರಸ್ಪರ್ಶದಿಂದ ದಿವ್ಯಶರೀರ ಹೊಂದುವನು. 'ತತ್ಪುರುಷೋ ಅಮಾನವಸ್ಸ ಏನಾನ್ ಬ್ರಹ್ಮ ಗಮಯತಿ' ಎಂದು ಹೇಳಿದಂತೆ ಈ ಅಮಾನವ ಮುಕ್ತನನ್ನು ಭಗವಂತನೆಡೆಗೆ ಕರೆದೊಯ್ಯುತ್ತಾನೆ.

೧೨೯. 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂದು ಶ್ರುತಿ ಹೇಳಿರುವಂತೆ ಭಗವಂತನನ್ನು ಸೇರಿದ ಮುಕ್ತನಲ್ಲಿ ಎಂಟು ಗುಣಗಳ ಆವಿರ್ಭಾವ ಆಗುತ್ತದೆ. ಇವು ಮೊದಲೂ ಇದ್ದು ಮರೆಯಾಗಿದ್ದವು. ಹೊಸದಾಗಿ ಬಂದವಲ್ಲ. ಈ ಎಂಟು ಗುಣಗಳು ಯಾವುದೆಂದರೆ 'ಅಪಹತಪಾಪ್ಮತ್ವ, ವಿಜರತ್ವ, ವಿಮೃತ್ಯುತ್ವ, ವಿಶೋಕತ್ವ, ವಿಜಿಘಿತ್ಸತ್ವ, ಅಪಿಪಾಸತ್ವ, ಸತ್ಯಕಾಮತ್ವ ಮತ್ತು ಸತ್ಯಸಂಕಲ್ಪತ್ವ'. ಮುಕ್ತನಲ್ಲಿ ಈ ಎಂಟು ಗುಣಗಳೂ ಆವಿರ್ಭಾವವಾಗುವುವೆಂದೂ, ವಿಜ್ಞಾನ ಮಾತ್ರ ಸ್ವರೂಪಕ್ಕೆ ಇದು ವಿರೋಧವಾಗಿಲ್ಲವೆಂದೂ ಬಾದರಾಯಣರು (ವೇ. ಸೂ. IV–4–7) ಸ್ಥಾಪಿಸುತ್ತಾರೆ.

೧೩೦. 'ನಿರಂಜನಃ ಪರಮಂ ಸಾಮ್ಯಮುಪೈತಿ' ಎಂದು ಶ್ರುತಿ ಹೇಳಿ ಮುಕ್ತನು ಬ್ರಹ್ಮಸಾಮ್ಯ ಹೊಂದುವನೆಂದು ತಿಳಿಸುತ್ತದೆ. 'ಭೋಗಮಾತ್ರ ಸಾಮ್ಯಲಿಂಗಾಚ್ಚ' ಎಂಬ ಸೂತ್ರದಲ್ಲಿ (ವೇ. ಸೂ. IV–4–21) ಬ್ರಹ್ಮಾನುಭವದ ಆನಂದದಲ್ಲಿ ಸಾಮ್ಯವನ್ನು ಹೇಳಿದೆ. ಮೋಕ್ಷವು 'ಸಾಯುಜ್ಯಮನ್ಯೇ ಸ ತು ಮೋಕ್ಷ ಉಕ್ತಃ' ಎಂದಂತೆ ಸಾಯುಜ್ಯರೂಪವಾದುದು. ಸಾಯುಜ್ಯ ಶಬ್ದಕ್ಕೆ 'ಸಮಾನಗುಣಕಃ ಸಯುಕ್' ಎಂದು ಅರ್ಥ ಹೇಳಿದೆ. ಹೀಗೆ ಸಮಾನ ಗುಣತ್ವದ ಆವಿರ್ಭಾವ ಮುಕ್ತನಿಗೂ ಆಗುವುದು. 'ಜಗದ್ವ್ಯಾಪಾರ ವರ್ಜಂ' ಎಂದಂತೆ ಸೃಷ್ಟ್ಯಾದಿವ್ಯಾಪಾರಗಳಲ್ಲಿ ಮುಕ್ತನಿಗೆ ಅನ್ವಯವಿರುವುದಿಲ್ಲ.

೧೩೧. ಮುಕ್ತನು ಭಗವತ್ಸಂಕಲ್ಪಕ್ಕನುಸಾರವಾಗಿ ಭೂಲೋಕಕ್ಕೆ ಬರಬಹುದು. ಆದರೆ ಕರ್ಮಕೃತವಾದ ಹುಟ್ಟು ಅವನಿಗೆ ಇರುವುದಿಲ್ಲ.

೧೩೨ ಕಾರಣಗಳು ಮೂರು ಬಗೆ—ಉಪಾದಾನ ಕಾರಣ, ನಿಮಿತ್ತ ಕಾರಣ ಮತ್ತು ಸಹಕಾರಿಕಾರಣ ಎಂದು. ಒಂದು ಮಡಕೆ ಆಗಬೇಕಾದರೆ ಅದು ಯಾವುದರಿಂದ ಆಗಿದೆಯೋ ಆ ಮಣ್ಣು ಉಪಾದಾನ ಕಾರಣ. ಕುಂಬಾರ, ನಿಮಿತ್ತ ಕಾರಣ. ಚಕ್ರ ಮೊದಲಾದವು ಸಹಕಾರಿಕಾರಣ 'ಬ್ರಹ್ಮವನಂ ಬ್ರಹ್ಮ ಸ ವೃಕ್ಷ ಆಸೀತ್' ಎಂದು ಹೇಳಿರುವಂತೆ ಈ ಜಗತ್ತಿಗೆ ಎಲ್ಲ ಬಗೆಯ ಕಾರಣವೂ ಈಶ್ವರನೇ ಆಗಿದ್ದಾನೆಂಬುದು ವೇದಾಂತ ಸಿದ್ಧಾಂತ. ಸೂಕ್ಷ್ಮ

ಚಿದಚಿದ್ವಿಶಿಷ್ಟನಾದ ಈಶ್ವರನೇ ಕಾರಣ. ಅವನೇ ಸ್ಥೂಲಚಿದಚಿದ್ವಿಶಿಷ್ಟನಾಗುವನು ಕಾರ್ಯರೂಪದಲ್ಲಿ. ಇಲ್ಲಿ ಚಿದಚಿತ್ತುಗಳು ಮಾತ್ರ ಬದಲಾವಣೆ ಹೊಂದುವುವು. ಈಶ್ವರನು ಅವಿಕಾರಿಯಾಗಿರುವನು.

೧೩೩. 'ಈಕ್ಷತೇಃ ನ ಅಶಬ್ದಮ್' ಎಂಬ ಸೂತ್ರದಲ್ಲಿ ಪ್ರಕೃತಿ ಜಗತ್ಕಾರಣವಲ್ಲವೆಂದು ಸ್ಥಾಪಿಸಿದೆ. ಸೃಷ್ಟಿಗೆ ಮೊದಲು ಒಂದೇ ಆಗಿದ್ದ ಸಚ್ಛಬ್ದವಾಚ್ಯವಾದ ಪರವಸ್ತು 'ನಾನು ಅನೇಕವಾಗಿ ಆಗಬೇಕು' ಎಂದು ಸಂಕಲ್ಪಿಸಿತು. ಈ ಸಂಕಲ್ಪ ಅಚೇತನಕ್ಕನ್ವಯಿಸುವುದಿಲ್ಲ. ಆದುದರಿಂದ ಅಚೇತನವಾದ ಪ್ರಕೃತಿ ಸಚ್ಛಬ್ದವಾಚ್ಯವಾದ ಬ್ರಹ್ಮವಸ್ತುವಲ್ಲ.

೧೩೪. 'ಪಶುನಾ ಯಜೇತ' ಎಂದು ಸಾಮಾನ್ಯವಾಗಿ ಪಶುವನ್ನು ಹೇಳಿರುವೆಡೆಯಲ್ಲಿ ಇತರ ವಾಕ್ಯಗಳ ಪರಾಮರ್ಶದಿಂದ ಪಶುವೆಂದರೆ ಆಡೆಂದು ಅರ್ಥವಾಗುತ್ತದೆ. ಸಾಮಾನ್ಯವಾಚಕವಾದ ಪಶುಶಬ್ದ ಪ್ರಕರಣವನ್ನು ಪರಿಶೀಲಿಸಿದಾಗ ವಿಶೇಷವಾಚಕವಾದ ಆಡಿನಲ್ಲಿ ಪರ್ಯವಸಾನವಾಗುತ್ತದೆ ಇದೇ ಛಾಗಪಶುನ್ಯಾಯ.

೧೩೫. ಈ ಸಿದ್ಧಾಂತಕ್ಕನುಸಾರವಾಗಿ ಶ್ರೀಮನ್ನಾರಾಯಣನೇ ಸರ್ವಕ್ಕೂ ಮೂಲಕಾರಣ. ಅವನನ್ನೇ ಸತ್, ಆತ್ಮಾ, ಆಕಾಶ, ಶಂಭು, ಜ್ಯೋತಿ ಮೊದಲಾದ ಅನೇಕಾನೇಕ ಶಬ್ದಗಳಿಂದ ಹೇಳಿದೆ. ಈ ಶಬ್ದಗಳೆಲ್ಲಾ ನಾರಾಯಣನನ್ನೇ ಹೇಳುತ್ತವೆ. ಪರಬ್ರಹ್ಮಸ್ವರೂಪಿಯಾದವನು ಶ್ರೀಮನ್ನಾರಾಯಣನೊಬ್ಬನೇ.

೧೩೬. ಶ್ರುತಿಗಳು ಮೂರು ಬಗೆ—ಭೇಧಶ್ರುತಿ, ಅಭೇದಶ್ರುತಿ ಮತ್ತು ಘಟಕಶ್ರುತಿ ಎಂದು. ಭೇದಶ್ರುತಿಗಳು ಚೇತನ, ಅಚೇತನ ಮತ್ತು ಈಶ್ವರ ಇವರುಗಳು ಸ್ವರೂಪಸ್ವಭಾವಗಳಿಂದ ಬೇರೆ ಬೇರೆಯೆಂದು ಹೇಳುತ್ತವೆ. ಅಭೇದ ಶ್ರುತಿ ಚಿದಚಿದ್ವಿಶಿಷ್ಟನಾದ ಪರಮಾತ್ಮತತ್ತ್ವ ಒಂದೇ ಎಂಬುದನ್ನು ಸಾರುತ್ತದೆ. ಘಟಕಶ್ರುತಿ ಚೇತನಾಚೇತನಗಳಿಗೂ ಈಶ್ವರನಿಗೂ ಇರುವ ಸಂಬಂಧವನ್ನು ತೋರುತ್ತದೆ. ಬೇರೆ ಬೇರೆ ಸ್ವರೂಪ ಸ್ವಭಾವಗಳುಳ್ಳ ಚೇತನಾಚೇತನಗಳು

ಹೇಗೆ ಈಶ್ವರನಿಂದ ಕೂಡಿವೆ ಎಂಬುದನ್ನು ಇವು ತಿಳಿಸುತ್ತವೆ. 'ಜ್ಞಾಜ್ಞೌ ದ್ವಾವಜಾವೀಶನೀಶೌ' ಎಂಬುದು ಭೇದಶ್ರುತಿ. 'ಅಯಮಾತ್ಮಾ ಬ್ರಹ್ಮ' ಎಂಬುದು ಅಭೇದಶ್ರುತಿ. 'ಯ ಆತ್ಮನಿ ತಿಷ್ಠನ್ ಆತ್ಮನೋಂತರೋ ಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ ಯ ಆತ್ಮಾನಮಂತರೋ ಯಮ ಯತಿ' ಎಂಬುದು ಘಟಕಶ್ರುತಿ ನಾನಾತ್ವ ಏಕತ್ವಗಳ ವಿರೋಧವನ್ನು ಘಟಕ ಶ್ರುತಿ ಪರಿಹರಿಸಿ ಸರ್ವಶರೀರಿಯೂ, ಸರ್ವಾಂತರ್ಯಾಮಿಯೂ ಆದ ಈಶ್ವರನು ಉಳಿದೆಲ್ಲ ತತ್ವಗಳನ್ನು ಅವುಗಳೊಳಗೇ ಇರುತ್ತಾ ನಿಯಮಿಸುವನೆಂದು ಬೋಧಿಸುತ್ತದೆ.

೧೩೭. ಸಗುಣವಾಕ್ಯಗಳು ಬ್ರಹ್ಮವಸ್ತುವಿಗೆ ನಿರತಿಶಯವಾದ ಕಲ್ಯಾಣ ಗುಣಗಳ ಯೋಗವನ್ನು ತಿಳಿಸುತ್ತವೆ. 'ನಿರ್ಗುಣಂ' 'ನಿರಂಜನಂ' ಮೊದಲಾದವು ಆ ಬ್ರಹ್ಮ ವಸ್ತುವಿನಲ್ಲಿ ಯಾವ ಕೆಟ್ಟ ಗುಣವೂ ಇಲ್ಲವೆಂದು ಸಾಧಿಸುತ್ತವೆ. ಇವುಗಳು ಹೀಗೆ ಭಿನ್ನವಿಷಯಕಗಳಾಗಿವೆ. 'ಅಪಹತಪಾಪ್ಮಾ' 'ವಿಜರಃ' ವಿಮೃತ್ಯುಃ, ವಿಶೋಕಃ, ವಿಜಿಘತ್ಸುಃ, ಅಪಿಪಾಸಃ, ಎಂದು ಶ್ರುತಿ ಬ್ರಹ್ಮ ವಸ್ತುವಿನಲ್ಲಿ ಹೇಯ ಗುಣಗಳಿಲ್ಲವೆಂದು ಸಾರಿ ಕೊನೆಗೆ 'ಸತ್ಯಕಾಮಃ' 'ಸತ್ಯಸಂಕಲ್ಪಃ' ಎಂದು ಹೇಳಿ ಕಲ್ಯಾಣಗುಣಗಳಿವೆಯೆಂದು ಸಮರ್ಥಿಸುತ್ತದೆ.

೧೩೮. ಶರೀರವೆಂದರೆ ಇಲ್ಲಿ ಅಭಿಪ್ರಾಯವೇ ಬೇರೆ. ಕರ್ಮಗಳ ಅನುಭವಕ್ಕಾಗಿ ಬಂದುದಾಗಲೀ, ಇಂದ್ರಿಯಾದಿಗಳನ್ನು ಹೊಂದಿರುವ ನಮ್ಮ ಶರೀರದಂತಾಗಲೀ ಇದು ಅಲ್ಲ. ಒಬ್ಬ ಚೇತನನಿಗೆ ಯಾವ ದ್ರವ್ಯವು ಸರ್ವಾತ್ಮನಾ ಆಧೇಯವಾಗಿದೆಯೋ, ನಿಯಾಮ್ಯವಾಗಿದೆಯೋ, ಶೇಷವಾಗಿದೆಯೋ ಅದು ಅವನಿಗೆ ಶರೀರ. ಈ ಲಕ್ಷಣ ನಮ್ಮ ಶರೀರಕ್ಕೂ ಅನ್ವಯಿಸುತ್ತದೆ. ನಮ್ಮ ಶರೀರಕ್ಕೆ ಆತ್ಮಾ ಆಧಾರ. ಅದಿಲ್ಲದೆ ಶರೀರ ಇರಲಾರದು. ನಮ್ಮ ಶರೀರಕ್ಕೆ ಆತ್ಮಾ ನಿಯಾಮಕ. ಆತ್ಮನ ನಿಯಮಕ್ಕನುಸಾರವೇ ಶರೀರ ನಡೆಯುವುದು. ನಮ್ಮ ಶರೀರದಿಂದ ಪ್ರಯೋಜನ ಪಡೆಯುವುದು ನಮ್ಮ ಆತ್ಮನೇ. ಹೀಗೆಯೇ ಚೇತನಾಚೇತನಗಳೆಲ್ಲಕ್ಕೂ ಭಗವಂತನು ಆಧಾರನಾಗಿ, ನಿಯಾಮಕನಾಗಿ, ಶೇಷಿಯಾಗಿ, ಇರುವುದರಿಂದ ಅವನು ಅವುಗಳೆಲ್ಲಕ್ಕೂ ಆತ್ಮನಾಗಿದ್ದಾನೆ;

ಅವನಿಗೆ ಉಳಿದುದೆಲ್ಲವೂ ಶರೀರವಾಗಿದೆ. ಈ ಆತ್ಮ–ಶರೀರಭಾವದಿಂದ ಚೇತನಾ ಚೇತನಗಳೆಲ್ಲಾ ಈಶ್ವರನಿಗೆ ಅತ್ಯಂತ ಪರತಂತ್ರವಾಗಿವೆ ಎಂದು ತಿಳಿಯುತ್ತದೆ.

೧೩೯. ಪಾಂಚರಾತ್ರದ ಪ್ರಧಾನ ಸಿದ್ಧಾಂತವಾದ ವ್ಯೂಹವು ವಿಶಿಷ್ಟಾದ್ವೈತದಲ್ಲಿ ಹಾಸುಹೊಕ್ಕಾಗಿ ಸೇರಿದೆ. ಈ ಸಿದ್ಧಾಂತದಂತೆ ಭಗವಂತನು ಜಗದನುಗ್ರಹಕ್ಕಾಗಿ ನಾಲ್ಕು ರೂಪಗಳನ್ನು ಹೊಂದುವನು. ವಾಸುದೇವನಿಂದ ಸಂಕರ್ಷಣನೂ, ಸಂಕರ್ಷಣನಿಂದ ಪ್ರದ್ಯುಮ್ನನೂ, ಪ್ರದ್ಯುಮ್ನನಿಂದ ಅನಿರುದ್ಧನೂ ಮೈದೋರುವರು. 'ಒಂದು ಜ್ಯೋತಿಯಿಂದ ಮತ್ತೊಂದು ಜ್ಯೋತಿ ಬೆಳಗುವಂತೆ' ಇವರು ಬೆಳಗುವರು. ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರು ಜೀವ, ಮನಸ್ಸು ಮತ್ತು ಅಹಂಕಾರಗಳಿಗೆ ಅಧಿಷ್ಠಾತೃ ದೇವತೆಗಳಾಗಿದ್ದಾರೆ. ವಾಸುದೇವನಲ್ಲಿ ಆರು ಗುಣಗಳೂ, ಇನ್ನುಳಿದವರಲ್ಲಿ ಎರಡೆರಡು ಗುಣಗಳೂ ಪ್ರಧಾನವಾಗಿರುವುವು.

೧೪೦. ವಾಸುದೇವನಿಂದ ಕೇಶವ, ನಾರಾಯಣ ಮತ್ತು ಮಾಧವ ಎಂಬ ವ್ಯೂಹಾಂತರಗಳೂ ಸಂಕರ್ಷಣನಿಂದ ಗೋವಿಂದ, ವಿಷ್ಣು ಮತ್ತು ಮಧುಸೂದನ ಎಂಬುವೂ, ಪ್ರದ್ಯುಮ್ನನಿಂದ ತ್ರಿವಿಕ್ರಮ, ವಾಮನ ಮತ್ತು ಶ್ರೀಧರ ಎಂಬುವೂ, ಅನಿರುದ್ಧನಿಂದ ಹೃಷೀಕೇಶ, ಪದ್ಮನಾಭ ಮತ್ತು ದಾಮೋದರ ಎಂಬ ವ್ಯೂಹಾಂತರಗಳೂ ಆಗುತ್ತವೆ.

೧೪೧. ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ವಾಮನ, ಪರಶುರಾಮ, ರಾಮ, ಬಲಭದ್ರ, ಕೃಷ್ಣ ಮತ್ತು ಕಲ್ಕಿನ್ ಎಂಬುವು ದಶಾವತಾರಗಳು. ವಿಷ್ವಕ್ಸೇನಸಂಹಿತೆ ಮತ್ತು ಲಕ್ಷ್ಮೀತಂತ್ರಕ್ಕನುಸಾರ ಈ ಅವತಾರಗಳೆಲ್ಲಾ ಅನಿರುದ್ಧವ್ಯೂಹದಿಂದ ಆದವು. ಪಾದ್ಮತಂತ್ರಕ್ಕನುಸಾರವಾಗಿ ಮತ್ಸ್ಯ, ಕೂರ್ಮ, ವರಾಹ ಅವತಾರಗಳು ವಾಸುದೇವನಿಂದಲೂ, ನೃಸಿಂಹ, ವಾಮನ, ಪರಶುರಾಮ ಮತ್ತು ಶ್ರೀರಾಮಾವತಾರಗಳು ಸಂಕರ್ಷಣನಿಂದಲೂ, ಬಲರಾಮಾವತಾರ ಪ್ರದ್ಯುಮ್ನನಿಂದಲೂ, ಶ್ರೀಕೃಷ್ಣ ಮತ್ತು ಕಲ್ಕಿ ಅವತಾರಗಳು ಅನಿರುದ್ಧನಿಂದಲೂ ಆದವು.

೧೪೨. ಅಹಿರ್ಬುಧ್ನ್ಯ ಸಂಹಿತೆಗನುಸಾರವಾಗಿ ಈ ಅವತಾರಗಳು ಮೂವತ್ತಾರು. ಅವು ಯಾವುವೆಂದರೆ—ಪದ್ಮನಾಭ, ಧ್ರುವ, ಅನಂತ, ಶಕ್ತ್ಯಾತ್ಮನ್. ಮಧುಸೂದನ, ವಿದ್ಯಾಧಿದೇವ, ಕಪಿಲ, ವಿಶ್ವರೂಪ, ವಿಹಂಗಮ, ಕ್ರೋಧಾತ್ಮನ್, ಬಡವಾವಕ್ತ್ರ, ಧರ್ಮ, ವಾಗೀಶ್ವರ, ಏಕಾಂಬೋಧಿಶಾಯಿನ್, ಕಮಠೇಶ್ವರ, ವರಾಹ, ನರಸಿಂಹ, ಪೀಯೂಷಹರಣ, ಶ್ರೀಪತಿ, ಕಾಂತಾತ್ಮನ್, ರಾಹುಜಿತ್, ಕಾಲನೇಮಿಘ್ನ, ಪಾರಿಜಾತಹರ, ಲೋಕನಾಥ, ಶಾಂತಾತ್ಮನ್, ದತ್ತಾತ್ರೇಯ, ನ್ಯಗ್ರೋಧ ಶಾಯಿನ್, ಏಕಶೃಂಗತನು, ವಾಮನದೇಹ, ತ್ರಿವಿಕ್ರಮ, ನರ, ನಾರಾಯಣ, ಹರಿ. ಕೃಷ್ಣ, ಪರಶುರಾಮ, ಶ್ರೀರಾಮ, ವೇದವಿದ್, ಕಲ್ಕಿನ್, ಪಾತಾಳಶಯನ ಎಂಬುವು.

೧೪೩. ವೈಶೇಷಿಕರು 'ಪೀಲುಪಾಕವಾದವನ್ನೂ' ನೈಯಾಯಿಕರು 'ಪಿಠರ' ಪಾಕವಾದವನ್ನೂ' ಪ್ರತಿಪಾದಿಸುವುದನ್ನು ಗಮನಿಸಬಹುದು

೧೪೪. ಒಂದು ಮಡಕೆಯನ್ನು ಕಾಯಿಸಿದಾಗ ಅದರಲ್ಲಿರುವ ಪರಮಾಣುಗಳು ಅವುಗಳ ಗುಣಸಮೇತವಾಗಿ ನಾಶವಾಗುವುವೆಂದೂ ಮತ್ತು ನೂತನವಾದ ಗುಣಗಳು ಮುಂದೆ ಉತ್ಪನ್ನವಾಗುವುವೆಂದೂ ಹೇಳುತ್ತಾರೆ. ಇದಕ್ಕೆ 'ಪೀಲುಪಾಕವಾದ' ಎಂದು ಹೆಸರು. ಇದನ್ನು ವೈಶೇಷಿಕರು ಪ್ರತಿಪಾದಿಸುತ್ತಾರೆ. ನೈಯಾಯಿಕರ ಅಭಿಪ್ರಾಯದಲ್ಲಿ ಮಡಕೆಯನ್ನು ಕಾಯಿಸಿದಾಗ ಪರಮಾಣುಗಳು ನಾಶವಾಗುವುದಿಲ್ಲ. ಇದಕ್ಕೆ 'ಪಿಠರಪಾಕವಾದ' ಎಂದು ಹೆಸರು.

೧೪೫. ಪ್ರಕೃತಿ, ಕಾಲ, ಶುದ್ಧಸತ್ತ್ವ, ಧರ್ಮಭೂತಜ್ಞಾನ, ಜೀವ ಮತ್ತು ಈಶ್ವರ ಎಂಬುವೇ ಈ ಆರು ದ್ರವ್ಯಗಳು.

೧೪೬. ಅವಯವ ಮತ್ತು ಅವಯವಿಗಳಿಗೆ ಭೇದವನ್ನು ನೈಯಾಯಿಕರು ಹೇಳುತ್ತಾರೆ. ಈ ಆಧಾರದ ಮೇಲೆ ಅವರು ಸಂಯೋಗಜಸಂಯೋಗವನ್ನು ಅಂಗೀಕರಿಸುತ್ತಾರೆ. ಅವಯವ ಮತ್ತು ಅವಯವಿಗಳಿಗೆ ಅತ್ಯಂತ ಭೇದವನ್ನು ವಿಶಿಷ್ಟಾದ್ವೈತ ಅಂಗೀಕರಿಸುವುದಿಲ್ಲ. ಆದುದರಿಂದ ಇವರ ದೃಷ್ಟಿಯಲ್ಲಿ ಹಸ್ತ ಸಂಯೋಗದಿಂದಲೇ ಶರೀರ ಸಂಯೋಗವೂ ಆದಂತೆಯೇ.

೧೪೭. ಎರಡು ವಿಭುದ್ರವ್ಯಗಳಿಗೆ ಸಂಯೋಗವನ್ನು ನೈಯಾಯಿಕರು ಅಂಗೀಕರಿಸುವುದಿಲ್ಲ.

೧೪೮. ನೈಯಾಯಿಕರು ೨೪ ಗುಣಗಳನ್ನು ಹೇಳುತ್ತಾರೆ. ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಯೋಗ ಮೊದಲಾದವು ಈ ಗುಣಗಳು. ತರ್ಕಸಂಗ್ರಹ ನೋಡಿ.

೧೪೯. ಇಲ್ಲಿ ಹೇಳಿರುವ ಪೂರ್ವಾಚಾರ್ಯರುಗಳ ಹೆಸರುಗಳನ್ನೆಲ್ಲಾ ಗುರುತಿಸಲಾಗಿದೆ. ದ್ರಮಿಡಾಚಾರ್ಯ, ನಾಥಮುನಿ, ಯಾಮುನಮುನಿ, ರಾಮಾನುಜರು, ವಿಷ್ಣುಚಿತ್ತರು (ಭಾಷ್ಯ ವಿವರಣ ಮತ್ತು ಸಂಗತಿಮಾಲಾ), ರಾಮಮಿಶ್ರರು, ಸುದರ್ಶನ ಸೂರಿಗಳು, ವರದ ನಾರಾಯಣ ಭಟ್ಟಾರಕರು (ಪ್ರಜ್ಞಾ ಪರಿತ್ರಾಣ, ಪ್ರಮೇಯ ಸಂಗ್ರಹ), ಕಿಡಾಂಬಿ ರಾಮಾನುಜರು (ನ್ಯಾಯ ಕುಲಿಶ, ನ್ಯಾಯ ಸುದರ್ಶನ), ವರದ ವಿಷ್ಣುಮಿಶ್ರರು (ಮಾನಯಾಥಾತ್ಮ್ಯ ನಿರ್ಣಯ), ವಾದಿಕೇಸರಿ ಸೌಮ್ಯಜಾಮಾತೃಮುನಿ (ತತ್ವದೀಪ, ತತ್ವ ನಿರ್ಣಯ, ತತ್ವತ್ರಯ ನಿರೂಪಣ) ವೇದಾಂತದೇಶಿಕರು, ಪಿಳ್ಳೈ ಲೋಕಾಚಾರ್ಯರು (ತತ್ವತ್ರಯ), ದೊಡ್ಡಯಾಚಾರ್ಯರು-ಮೊದಲಾದ ಆಚಾರ್ಯರುಗಳ ಉಲ್ಲೇಖವನ್ನು ಮಾಡಿದೆ.

೧೫೦. ವಿಶಿಷ್ಟಾದ್ವೈತ ಸಿದ್ಧಾಂತದ ತತ್ವವು ಶ್ರೀಮನ್ನಾರಾಯಣನೊಬ್ಬನೇ ಎಂದು ಈ ಗ್ರಂಥವನ್ನು ಉಪಸಂಹಾರ ಮಾಡಿರುವುದು ಯುಕ್ತವೇ ಆಗಿದೆ. ಇದುವರಗೆ ನಿರೂಪಿಸಿದ ಅನೇಕಾನೇಕ ತತ್ವಗಳೆಲ್ಲಾ ಶ್ರೀಮನ್ನಾರಾಯಣನಲ್ಲಿ ಪರಮ ತಾತ್ಪರ್ಯವನ್ನು ಹೊಂದಿರುವುದರಿಂದ ಈ ಮಾತು ಅರ್ಥಪೂರ್ಣವಾಗಿದೆ.